ಬಂದಾಗಿನಿಂದ ಒಂದು ದಿನವಾದರೂ ಎತ್ತನ್ನು ಈ ಸ್ಥಿತಿಯಲ್ಲಿಟ್ಟಿರಲಿಲ್ಲ. ಪ್ರತಿದಿನ ತಾನೇ ನಿಂತು ನಿಂಗನ ಕೈಲಿ ಎತ್ತುಗಳನ್ನು ತೊಳೆಸುತ್ತಿದ್ದ. ಅವುಗಳ ಮೈಮೇಲೆ ಒಂದು ಚುಕ್ಕಿಯಾಗಲಿ, ಕಲೆಯಾಗಲಿ, ಕಂಡರೆ ಶಾಮು ನಿಂಗನ ಮೇಲೆ ರೇಗಿಬಿಡುತ್ತಿದ್ದ. ಶಾಮುವಿಗೆ ಹೆದರುತ್ತಿದ್ದ ನಿಂಗ ಎತ್ತುಗಳನ್ನು ಶುಭ್ರವಾಗಿಡುತ್ತಿದ್ದ. ಹುಲ್ಲು, ನೀರು, ಹಿಂಡಿ, ಕಲಗಚ್ಚನ್ನು ತಾನೇ ಖುದ್ದಾಗಿ ನಿಂತು ಎತ್ತುಗಳಿಗೆ ಹಾಕಿಸುತ್ತಿದ್ದ. ಹಗಲೆಲ್ಲಾ ಎತ್ತಿನ ಕೈಲಿ ದುಡಿಸಿ ಅದನ್ನು ಉಪವಾಸ ಕೆಡವಿದರೆ ಅದಕ್ಕಿಂತಲೂ ಪಾಪದ ಕೆಲಸ ಬೇರೊಂದಿಲ್ಲ ಎಂಬುದೇ ಅವನ ಭಾವನೆಯಾಗಿತ್ತು. ತನ್ನ ಅತುಳೈಶ್ವರ್ಯ ದಿನದಿನಕ್ಕೆ ವೃದ್ಧಿಯಾಗುತ್ತಿರುವುದು ಗೋಮಾತೆ, ಭೂಮಾತೆಯಿಂದಲೇ ಎಂಬುದು ಅವನಿಗೆ ಖಚಿತವಾಗಿ ತಿಳಿದಿತ್ತು.

ವೀಣಳ ಸಾವಿನಿಂದ ಅವನು ಎಲ್ಲವನ್ನೂ ಅಲಕ್ಷಿಸಿದ್ದ. ಅವನಿಗೆ ಯಾವುದೂ ಬೇಡವಾಗಿತ್ತು. ಶಾಮು ನಿರಾಸಕ್ತಿಯಿಂದಿರುವುದನ್ನು ನೋಡಿ ನಿಂಗನೂ ತನ್ನ ಕೆಲಸಗಳಲ್ಲಿ ಆಸಕ್ತಿ ವಹಿಸಿರಲಿಲ್ಲ. "ಶಾಮಪ್ನೋರು ದುಃಖದಾಗವ್ರೆ. ನಾನು ಎಂಗೆ ಮಾಡಿದ್ರೂ ಆಯ್ತು" ಎಂದುಕೊಂಡು ಕೆಲಸಗಳನ್ನು ಹಾರಿಸಿಬಿಡುತ್ತಿದ್ದ. ಅದರ ಪರಿಣಾಮದಾಗಿ ಎತ್ತುಗಳು ಕೊಳಕಾಗಿ ಬಡಕಲಾಗಿದ್ದವು.

ಶಾಮುವಿಗೆ ಎತ್ತುಗಳ ಅವಸ್ಥೆ ನೋಡಿ ಒಂದು ಗಳಿಗೆ ಉಸಿರು ಕಟ್ಟಿದಂತಾಯಿತು. ಅವನು ತನ್ನ ಕಣ್ಣುಗಳನ್ನೇ ನಂಬಿರಲಿಲ್ಲ. ಕಣ್ಣುಜ್ಜಿಕೊಂಡು ಪುನಹ ನೋಡಿದ. ಎತ್ತುಗಳ ಸ್ಥಿತಿ ನೋಡಿ ಅವನ ರಕ್ತ ಕುದಿಯಿತು. ಎತ್ತುಗಳು ಇಷ್ಟೊಂದು ಹೀನಸ್ಥಿತಿಯಲ್ಲಿದ್ದರೂ ತಾನು ಅವುಗಳನ್ನು ಗಮನಿಸದೇ ಇದ್ದುದು ತನ್ನ ತಪ್ಪು ಎಂದು ಶಪಿಸಿಕೊಂಡ. ವೀಣ ತೀರಿ ಹೋದ ದಿನದಿಂದ ಮೊದಲ್ಗೊಂಡು ಯಾವ ಕೆಲಸ ತಾನೆ ನಿಂತಿದೆ? ಸೂರ್ಯ ಎಂದಿನಂತೆ ಹುಟ್ಟಿ ಮುಳುಗುತ್ತಾನೆ. ಚಂದ್ರ ಉದಯಿಸುತ್ತಾನೆ. ವೆಂಕಮ್ಮನವರು ಅಡಿಗೆ ಮಾಡುತ್ತಾರೆ. ತಾವು ಊಟ ಮಾಡುವುದು ತಪ್ಪಿಲ್ಲ. ಯಾವ ಕಾರ್ಯ ಅವಳ ಸಾವಿನಿಂದ ನಿಂತಿದೆ? ದಿನಗಳು ಉರುಳುತ್ತಿವೆ. ಆದರೆ ಕರ್ತವ್ಯಭ್ರಷ್ಟರಾಗುವುದು ಸರಿಯೇ? ಕೆಲಸಕಾರ್ಯಗಳು ಮೊದಲಿನ ಆತುರ, ಹುಮ್ಮಸ್ಸಿನಿಂದ ಸಾಗುತ್ತಿಲ್ಲ. ನಿಜ. ಆದರೆ ತನ್ನ ಕರ್ತವ್ಯ ತಾನು ಪಾಲಿಸಬೇಡವೇ? ಸುಖ, ಆನಂದ ಅನುಭವಿಸಲು ತಾನು ಬದುಕಬೇಕಾಗಿಲ್ಲ. ಆದರೂ ಬದುಕಿರುವುದಂತೂ ಅನಿವಾರ್ಯ. ಬದುಕಿರುವವರೆಗೆ ತನ್ನ ಕರ್ತವ್ಯ ತಾನು ಮಾಡಬೇಡವೇ? ತಂದೆ ತನ್ನ ಮೇಲೆ

ನಂಬಿಕೆಯಿಟ್ಟರಲಿಲ್ಲವೇ? ತಮ್ಮ ಅಪಾರ ಸಂಪತ್ತನ್ನು ತನಗೊಪ್ಪಿಸಿ ನಿಶ್ಚಿಂತರಾಗಿ ಸತ್ತಿರಲಿಲ್ಲವೇ? ತನ್ನ ಈ ಅನಾದರದಿಂದ ಅವರಾತ್ಮಕ್ಕೆ ಎಷ್ಟು ದುಃಖವಾಗಿರಬೇಕು. ತಂದೆಗೆ ದ್ರೋಹ....ಭೂದೇವಿಗೆ, ಗೋಮಾತೆಗೆ ದ್ರೋಹ....ತಪ್ಪುಹಾದಿ ಹಿಡಿದು ಚಾಟಿಯೇಟು ತಿಂದ ಕುದುರೆಯಂತೆ ಶಾಮು ಜಾಗೃತಗೊಂಡ.

"ನಿಂಗಾ....ನಿಂಗಾ," ಶಾಮು ಗಡುಸಾಗಿ ಕೂಗಿದ. ಅಂಗಳದಲ್ಲಿ ಕುಳಿತು ತೆಂಗಿನಕಾಯಿ ಮೊಟ್ಟೆ ಸುಲಿಯುತ್ತಿದ್ದ ನಿಂಗ ಶಾಮುವಿನ ಕೂಗು ಕೇಳಿ ಓಡಿಬಂದ. ನಿಂಗನ ಮುಖ ನೋಡಿದ ಕೂಡಲೇ ಶಾಮುವಿನ ಸಿಟ್ಟು ದ್ವಿಗುಣವಾಯಿತು.

"ಏನು ಮಾಡ್ತಾ ಇದ್ದೆಯೋ?"

ರಾಯರು ಕೋಪಗೊಂಡಿರುವರೆಂಬುದು ನಿಂಗನಿಗೆ ತಿಳಿಯಿತು. ಅವನು ಮೆಲ್ಲಗೆ "ವೆಂಕವ್ವಾವ್ರು ಉಪ್ಪಿಟ್ಟಿಗೆ ಕಾಯಿಲ್ಲಾಂತಿದ್ರು. ಕಾಯಿ ಸುಲೀತಿದ್ದೆ ಒಡೆಯಾ" ಎಂದ.

ಶಾಮು ಎತ್ತಿನ ಮೂಳೆಗಳನ್ನು ತೋರಿಸಿ "ಹೀಗೆ ಏನೋ ಎತ್ತನ್ನು ನೋಡಿಕೊಳ್ಳೋದು? ಸ್ನಾನ ಮಾಡಿಸಿ ಏಷ್ಟು ತಿಂಗಳಾಯಿತು?" ಎಂದ.

"..............."

"ಎಷ್ಟು ದಿವಸವಾಯಿತೋ?"

"ಒಂದು ತಿಂಗಳಾಗಿರಬೈದು."

"ನಾನು ಯಾವ ಕೆಲಸಕ್ಕೂ ಬರೋದಿಲ್ಲಾಂತ ತಿಳಿದು ಬೇಕಾಬಿಟ್ಟೆ ಕೆಲಸಮಾಡ್ತಿರುವ ಹಾಗಿದೆ. ನೀನು ಕೆಲಸ ಮಾಡಿದ ಹಾಗೆ ನಾನು ಮಾಡಿಸ್ಕೋತಿದೀನಿಂತ ಅಂದೊಂಡಿದೀಯೇನು? ದಿನಾ ಹಿಂಡಿ ಕಲಸಿಡುತ್ತಿದ್ದೀಯಾ?"

"..................."

"ಹೋಗು. ಎತ್ತುಗಳನ್ನು ಕೆರೆ ಕಡೆ ಕರ್ಕೊಂಡು ಹೋಗಿ ಚೆನ್ನಾಗಿ ತೊಳೆದು ಕರೆದುಕೊಂಡು ಬಾ. ಎಲ್ಲಾವನ್ನೂ ಕರ್ಕೊಂಡು ಹೋಗು."

ನಿಂಗ ಮರುಮಾತನಾಡದೆ ಸಾಲಾಗಿ ನಿಂತು ಒಣಹುಲ್ಲು ಮೇಯುತ್ತಿದ್ದ ಹತ್ತು ಎತ್ತುಗಳನ್ನು ಬಿಚ್ಚಿ ಕೆರೆಯ ಕಡೆ ಕರೆದುಕೊಂಡು ಹೋದ.

"ಹಸುಗಳು ಹೇಗಿವೆಯೋ" ಎಂದುಕೊಂಡೇ ಶಾಮು ಹಸುವಿನ ಕೊಟ್ಟಿಗೆಗೆ ಹೋದ. ಆದರೆ ಹಸುಗಳು ಶುಭ್ರವಾಗಿ ಎಂದಿನಂತೆ ಮೈತುಂಬಿಕೊಂಡಿದ್ದವು. ವೆಂಕಮ್ಮನವರ ವಿಚಕ್ಷಣೆಯಿಂದಾಗಿ ಕೊಟ್ಟಿಗೆ, ಹಸುಗಳು

ಎಂದಿನಂತೆಯೇ ಚೊಕ್ಕಟವಾಗಿದ್ದವು.

"ಇನ್ನು ತೋಟ, ಹೊಲ ಯಾವ ಸ್ಥಿತಿಯಲ್ಲಿದೆಯೋ ನೋಡ ಬೇಕು" ಎಂದುಕೊಳ್ಳುತ್ತಾ ಶಾಮು ಒಳಗೆ ಬಂದ.

ವೆಂಕಮ್ಮನವರು ತೆಂಗಿನಕಾಯಿಯನ್ನು ತುರಿಯುತ್ತಿದ್ದರು.

"ಅತ್ತೇ, ಎತ್ತುಗಳ ಸ್ಥಿತಿ ನೋಡಿದಿರಾ? ಹಸುಗಳೇನೋ ನಿಮ್ಮ ದಯದಿಂದ ಚೆನ್ನಾಗಿದ್ದವು."

"ನನಗೂ ದಿನಾ ನಿಂಗನಿಗೆ ಹೇಳಿ ಹೇಳಿ ಸಾಕಾಗಿಹೋಗಿತ್ತು. ಮನೆಯ ಯಜಮಾನ ಯಾವುದಕ್ಕೂ ಬರದಿದ್ದ ಮೇಲೆ ಅವರಿಗೆಲ್ಲಾ ಆಡಿದ್ದೇ ಆಟವಾಗಿ ಹೋಗಿತ್ತು."

"ನೀವು ನನಗಾದರೂ ಒಂದು ಮಾತು ಹೇಳಬೇಕಾಗಿತ್ತು."

"ನಾನೂ ಎರಡು ಮೂರು ಸಲ ಹೇಳೋಣಾಂತ ಅಂದುಕೊಂಡೆ. ಆದರೆ ನಿನ್ನ ದುಃಖ ನಿನಗೆ. ನೀನು ಹುಚ್ಚನ ಹಾಗೆ ಕಂಗೆಟ್ಟು ಅಲೀತಿರು ವಾಗ ನಾನು ಯಾವ ಬಾಯಲ್ಲಿ........" ಮುಂದೆ ಮಾತು ಹೊರಡದೆ ಕಂಠ ಗದ್ಗದವಾಯಿತು.

ಶಾಮು ಮಾತನಾಡದೆ ಎದ್ದು ಹೋಗಿ ಡ್ರಾಯಿಂಗ್ ರೂಮಿನಲ್ಲಿದ್ದ ಸೋಪಾದ ಮೇಲೆ ಒರಗಿಕೊಂಡ. ನಾಲ್ಕು ನಿಮಿಷ ಸೂರಿನ ಕಡೆಯೇ ನೋಡುತ್ತಾ ಕುಳಿತಿದ್ದು ಎದ್ದು ಅಂಗಳಕ್ಕೆ ಬಂದು ಭಾವಿಯ ಕಟ್ಟೆಯ ಮೇಲೆ ಕುಳಿತು ಭಾವಿಯ ತಳದಲ್ಲಿ ಮಿನುಗುತ್ತಿದ್ದ ನೀರನ್ನು ನೋಡಿದ. ನೆತ್ತಿಯ ಮೇಲೆ ಸೂರ್ಯ ಉರಿಯುತ್ತಿದ್ದ. ಅದರ ಕಾವನ್ನು ತಡೆಯಲಾ ರದೇ ಶಾಮು ತಾನು ಮಲಗಿಕೊಳ್ಳುವ ರೂಮಿಗೆ ಹೋದ. ಹಾಸಿಗೆಯ ಮೇಲೆ ಉರುಳಿ ತಲೆಯ ಹಿಂದೆ ಕೈಕಟ್ಟಿ ಸ್ವಲ್ಪ ಹೊತ್ತು ಮಲಗಿದ. ಅದೂ ಬೇಸರವಾಯಿತು. ಏನು ಮಾಡಬೇಕು, ಹೇಗೆ ಸಮಯ ಕಳೆಯಬೇಕೆನ್ನು ವುದೇ ಅವನಿಗೆ ತೋರಲಿಲ್ಲ. ಪಿಕಾಸಿ ಹಿಡಿದು ಜಾಜಿ ಪೊದೆಯ ಪಾತಿ ಯನ್ನು ಸರಿಮಾಡಿದ. ಬಿಸಲಿನಲ್ಲಿ ಕುಳಿತು ಮಲ್ಲಿಗೆ ಚಪ್ಪರ ಸರಿಮಾಡಿದ. ಹಾಲಿಗೆ ಬಂದು ಮಸಿಹಿಡಿದು ನೇತಾಡುತ್ತಿದ್ದ ಲಾಂದ್ರವನ್ನು ಒರೆಸಿದ. ಲಾಂದ್ರವನ್ನು ಒರೆಸಿ ಒಂದು ಕಡೆ ಕೈಕಟ್ಟಿ ಕುಳಿತುಕೊಂಡ.

ವೀಣಳಿದ್ದಾಗ ಒಂದು ದಿನ ಒಂದು ಕ್ಷಣದಂತೆ ಕಳೆಯುತ್ತಿತ್ತು. ಆದರೆ ಈಗ ಸಮಯವೇ ಹೋಗುತ್ತಿರಲಿಲ್ಲ.

"ಶಾಮಣ್ಣಾ, ತಿಂಡೀಗೆ ಬಾಪ್ಪ. ಹಾಗೇ ಮಿಾರಾನೂ ಕರ್ಕೊಂಡು ಬಾ" ಎಂದು ವೆಂಕಮ್ಮನವರು ಕೂಗಿದರು. ಶಾಮು ಜೇಡನ ಬಲೆ

ತೆಗೆಯುತ್ತಿರುವುದನ್ನು ನೋಡಿ ಹೇಳಿದರು

"ನೀನ್ಯಾಕಪ್ಪ ತೆಗೀಬೇಕು? ಬೋರನಿಗೆ ಹೇಳು. ತೆಗೀತಾನೆ."

"ಯಾಕೋ ಬೇಜಾರಾಯಿತು ಅತ್ತೆ. ಅದಕ್ಕೆ ನಾನೇ ತೆಗೀತಿದ್ದೆ."

"ತಿಂಡೀಗೆ ಬಾಪ್ಪ. ಉಪ್ಪಿಟ್ಟು ಆರಿಹೋಗತ್ತೆ. ವೀರಾ ಎಲ್ಲಿ?"

"ನಾನು ಕೂಗುತ್ತೀನಿ. ವೀರಾ...ವೀರಾ...."

ಶಾಮು ಒಂದು ಸಲ ಅವಳನ್ನು ಕೂಗಿ ರೂಮಿಗೆ ಹೋದ. ರೂಮಿನಲ್ಲಿ ಪುಸ್ತಕವೊಂದನ್ನು ಹಿಡಿದು ವೀರ ಕೂತಿದ್ದಳು. ಅವಳ ಕಣ್ಣುಗಳು ಪುಸ್ತಕದ ಮೇಲೆ ನೆಟ್ಟಿದ್ದರೂ, ಓದುತ್ತಿರಲಿಲ್ಲವೆಂಬುದು ಅವಳ ಮುಖ ಭಾವದಿಂದ ಸ್ಪಷ್ಟವಾಗಿ ತಿಳಿಯುತ್ತಿತ್ತು. ಅವಳು ಹಾಳೆಗಳನ್ನು ಮಗುಚುತ್ತಿರಲಿಲ್ಲ.

ಶಾಮು ಒಂದು ನಿಮಿಷ ಬಾಗಿಲಿನಲ್ಲಿಯೇ ನಿಂತು ನೋಡಿ ಅನಂತರ ನಿಧಾನವಾಗಿ ಒಳಗೆ ಬಂದು ಅವಳ ಭುಜದ ಮೇಲೆ ಕೈಯಿಟ್ಟ. ಅನಿರೀಕ್ಷಿತವಾಗಿ ಹೊಡೆಸಿಕೊಂಡವಳಂತೆ ವೀರ ಬೆಚ್ಚಿಬಿದ್ದಳು.

"ತಿಂಡಿ ತಿನ್ನೋಣ ಬಾ."

ವೀರ ಎದ್ದು ಶಾಮುವನ್ನು ಹಿಂಬಾಲಿಸಿದಳು.

* * * *

ತಾನು ಮೆಡಿಕಲ್ ಕಾಲೇಜು ಸೇರಲು ಶಾಮು ತನ್ನ ಒಪ್ಪಿಗೆ ಕೊಟ್ಟ ದಿನದಿಂದಲೂ ವೀರಳಿಗೆ ಅವನಲ್ಲಿ ಒಂದು ಬಗೆಯ ಆದರ, ಗೌರವ ಮೂಡಿದವು. ಅವನೂ ತನ್ನಂತೆಯೇ ಮಗಳನ್ನು ಕಳೆದುಕೊಂಡ ಹತಭಾಗ್ಯ ತಂದೆ, ತನ್ನಂತೆಯೇ ದುಃಖಿ ಎಂಬ ಕಾರಣದಿಂದ ವೀರಳ ಹೃದಯ ಪತಿಗಾಗಿ ಮಿಡುಕಿತು. ದುಃಖದ ಸುಳಿಯಲ್ಲಿ ಸಿಕ್ಕಿ ತನ್ನಂತೆಯೇ ಆತನೂ ತಲ್ಲಣಿಸುತ್ತಿರುವುದನ್ನು ನೋಡಿ ವೀರ ಕನಿಕರಪಟ್ಟಿದ್ದಳು. ತನ್ನಿಂದಾಗಿ ಆತ ಹೃದಯದಾಸೆಯೆಲ್ಲವನ್ನೂ ಅಲ್ಲಿಯೇ ಹೂತುಬಿಡಬೇಕಾಗಿ ಬಂದಿರುವುದನ್ನು ನೋಡಿ ವೀರ ಮರುಕಪಟ್ಟಿದ್ದಳು.

ಹಿಂದೆ ವೀಣ ತನ್ನ ಬಸುರಿನಲ್ಲಿದಾಗ ಅದೊಂದು ಬೆಳದಿಂಗಳಿನ ರಾತ್ರಿ ಕೆರೆಯ ತೀರದಲ್ಲಿದ್ದ ಬೆಳದಿಂಗಳೂಟ ಮಾಡುತ್ತಿದ್ದಾಗ ಶಾಮು ತನ್ನ ಹೃದಯದಾಸೆಯನ್ನು ಅವಳಿಗೆ ಬಾಯಿಬಿಟ್ಟು ಹೇಳಿದ್ದ "ನನಗೆ ಮನೆ ತುಂಬಾ ಮಕ್ಕಳಿರಲು ಆಸೆ. ಮನೆ ನಂದಗೋಕುಲದ ಹಾಗಿರುತ್ತದೆ. ನನಗೆ ಆರು ಹೆಣ್ಣು, ಮೂರು ಗಂಡು ಮಕ್ಕಳು ಬೇಕು." ಅವನ ಹೆಬ್ಬಯಕೆ ಆಗ ಅವಳನ್ನು ಭಯಭೀತಳನ್ನಾಗಿ

ಮಾಡಿತ್ತು. ಆಗ ಅವಳು ಒರಟೊರಟಾಗಿ 'ಒಂಭತ್ತು ಮಕ್ಕಳನ್ನು ಹೆರುವುದರಲ್ಲಿ ನನ್ನ ಸಮಾಧಿ ಸಿದ್ಧವಾದಂತೆಯೇ ಸರಿ' ಎಂದು ಕಟುವಾಗಿ ನುಡಿದಿದ್ದಳು. ಪುರುಷರ ಪಶುತ್ವದ ಬಗ್ಗೆ ಅವಳು ತೀವ್ರ ತಿರಸ್ಕಾರ ತಾಳಿದ್ದಳು.

ಆದರೆ ಆಗಿನ್ನೂ ಮೀರ ತಾಯಿಯಾಗಿರಲಿಲ್ಲ. ತಾಯಿಯಾಗುವುದಕ್ಕೆ ಮುಂಚೆ, ವೀಣಳಿನ್ನೂ ಗರ್ಭದಲ್ಲಿ ರೂಪುಗೊಳ್ಳುತ್ತಿದ್ದಾಗ, ಅವಳು ಬಯಕೆಯ ಸಂಕಟದಿಂದ ಬಸವಳಿದು ದುರ್ಬಲಳಾಗಿದ್ದಾಗ, ಆದಷ್ಟು ಬೇಗ ಮೈಕಳೆದರೆ ಸಾಕು ಎಂದು ಮುಳ್ಳುಮೇಲೆ ನಿಂತವಳಂತೆ ಮಗುವಿನ ಜನ್ಮಕ್ಕಾಗಿ ಕಾಯುತ್ತಿದ್ದಾಗ ಮೀರಳಿಗೆ ಹಾಗೆನಿಸಿದ್ದು ಸಹಜ. ಮಗು ಬೆಳೆದಂತೆ, ತಾಯ್ತನದ ಮೊಗ್ಗು ಅರಳಿದಂತೆ ಮಮತೆಯ ಸೌರಭದಲ್ಲಿ ಮಿಂದ ಮೀರ ತಾನರಿಯದಂತೆ ಮಿದುವಾಗಿದ್ದಳು. ತಾಯ್ತನದ ಕಾವಿಗೆ ಅವಳೆದೆ ಕಾಠಿಣ್ಯ ಕಳೆದುಕೊಂಡು ಮಿದುವಾಗಿತ್ತು. ವೀಣ ಅವಳ ಬಾಳನ್ನು ಪ್ರವೇಶಿಸಿದ ಮೇಲೆ ಸಂಸಾರಾಕಾಶದ ಮೇಲೆ ಪೂರ್ಣಚಂದ್ರ ಸದಾ ಬೆಳಗುತ್ತಿದ್ದ. ಮಕ್ಕಳೇ ಬೇಡ ಎಂದು ನುಡಿಯುತ್ತಿದ್ದ ನಾಲಿಗೆ ಮಕ್ಕಳಿಂದಲೇ ಬದುಕು ಎಂದು ನುಡಿಯಲು ಸಹ ಸಿದ್ಧವಾಗಿತ್ತು. ಅವಳು ಯಾವ ಕೆಟ್ಟ ಗಳಿಗೆಯಲ್ಲಿ ಮಕ್ಕಳು ಬೇಡ ಎಂದು ನುಡಿದಿದ್ದಳೋ? ವಿಧಿ ಅವಳ ಪಾಲಿಗೆ ಆ ನುಡಿಯನ್ನು ಸತ್ಯವನ್ನಾಗಿಸಿತು. ಅವಳಾಡಿದ ಮಾತೇ ಅವಳಿಗೆ ಶಾಪವಾಯಿತು.

ಮದುವೆ ಮಾಡಿಕೊಂಡು ಗೃಹಿಣಿಯಾಗಿ ಬಾಳುವ ಆಸೆ ಮೀರಳಿಗೆ ಎಂದೂ ಇರಲಿಲ್ಲ. ವೈದ್ಯಳಾಗಿ ಜನಸೇವೆ ಮಾಡುವ ಹಂಬಲ ಚಿಕ್ಕವಯಸ್ಸಿನಲ್ಲಿಯೇ ಅವಳ ಎಳೆಯ ಮನಸ್ಸಿನಲ್ಲಿ ಆಳವಾಗಿ ಬೇರೂರಿತ್ತು. ಮದುವೆಯ ಅಗತ್ಯ ಕಂಡುಬರುವುದಕ್ಕೆ ಮುಂಚೆಯೇ ಅವಳು ಶಾಮುವಿನ ಪತ್ನಿಯಾಗಿದ್ದಳು. ಮದುವೆಯಲ್ಲಿ ಅವಳಾಸೆಯ ಹೋಮವಾಯಿತು. ಗಂಡನೊಡನೆ ಬಾಳಬೇಕು, ಹೆಂಡತಿಗೆ ಗಂಡನೇ ದಿಕ್ಕು, ಅವನನ್ನು ಬಿಟ್ಟು ದೂರವಿರುವುದು ಭೂಷಣವಲ್ಲ ಎಂಬ ಹಿಂದೂ ಸಮಾಜದ ಕಾನೂನಿಗೆ ಅವಳು ತಲೆಬಾಗಿದ್ದಳೇ ಹೊರತು ಗಂಡನನ್ನು ಕಂಡರೆ ಅಮಿತಪ್ರೇಮ ಎಂದೂ ಅವಳಲ್ಲಿ ಮೂಡಿರಲಿಲ್ಲ. ದಾಂಪತ್ಯ ಜೀವನಕ್ಕಾಗಿ ಮೀರ ಎಂದೂ ಮೋಹಗೊಂಡಿರಲಿಲ್ಲ. ಒಮ್ಮೊಮ್ಮೆ ಅದರ ಸೆಳೆತವಿದ್ದರೂ, ಆ ಆಕರ್ಷಣೆಯಿಂದಾಗಿ ಅವಳು ಶಾಮುವಿನೊಡನೆ ಸಹಕರಿಸಿದ್ದರೂ ಬದುಕಿನಲ್ಲಿ ದಾಂಪತ್ಯ ಜೀವನಕ್ಕೇ ಪ್ರಧಾನಪಾತ್ರವನ್ನು ಕೊಟ್ಟಿರಲಿಲ್ಲ. ತನ್ನ ಗೆಳತಿಯರಾದ

ರಾಜು, ಚಂಪಾ, ನರ್ಮದಾ ಬಂದಿದ್ದಾಗ ರಾತ್ರಿ ತನ್ನ ಕೋರಿಕೆಯನ್ನು ತಿರಸ್ಕರಿಸಿ ಶಾಮು ತನ್ನ ಮೇಲೆ ಅತ್ಯಾಚಾರ ನಡೆಸಿದಾಗಿನಿಂದ ವೀರಳಿಗೆ ಆ ಜೀವನದಲ್ಲಿ ಇದ್ದ ಅಲ್ಪ ಸ್ವಲ್ಪ ಬೆಡಗೂ, ಮಾಸಿಹೋಗಿ, ಒಂದು ರೀತಿಯ ಜುಗುಪ್ಸೆ, ಅಸಹ್ಯ ತಲೆದೋರಿದ್ದವು.

ವೀಣ ಜನ್ಮ ತಾಳಿದಾಗಿನಿಂದ ಮೀರಳಿಗೆ ಬದುಕಿನಲ್ಲಿ ಉತ್ಸಾಹ ಹುಟ್ಟಿತ್ತು. ಅವಳ ಬಾಳಿಗೊಂದು ಅರ್ಥ ಬಂದಿತ್ತು. ವೀಣ ತನ್ನೊಡನಿದ್ದರೆ ತಾನು ಯಾರೊಡನೆ ಬೇಕಾದರೂ, ಎಲ್ಲಿ ಬೇಕಾದರೂ ಸುಖವಾಗಿ ಇರಬಲ್ಲೆ ಎಂಬ ಆತ್ಮ ವಿಶ್ವಾಸ ಮೀರಳಲ್ಲಿ ಮೊಳಕೆಯಿಟ್ಟಿತ್ತು. ಶಾಮು ತನ್ನ ಗಂಡ ನೆಂದು ಮೀರ ಪ್ರೀತಿಸದಿದ್ದರೂ ತನ್ನ ಮಗಳ ತಂದೆ ಎಂಬ ಒಂದು ಕಾರಣ ದಿಂದ ಅವನನ್ನು ವಿಶ್ವಾಸದಿಂದ ಕಾಣತೊಡಗಿದ್ದಳು. ವೀಣಳ ಸಾವಿನಿಂದ ತಮ್ಮಿಬ್ಬರಿಗೂ ಬರಸಿಡಿಲು ಬಡಿದಂತಾಗಿದೆ ಎಂಬ ವಿಚಾರ ಅವಳಿಗೆ ತಿಳಿ ಯದೇ ಇರಲಿಲ್ಲ. ಶಾಮುವೂ ತನ್ನಷ್ಟೇ ಮೂಕವ್ಯಥೆಯಿಂದ ಸೊರಗುತ್ತಿ ದ್ದಾನೆ ಎಂದು ಅವಳಲ್ಲಿ ಸಹಾನುಭೂತಿ ಉದಯಿಸಿತ್ತು. ಮೀರ ಓದಲು ಶಾಮು ತನ್ನ ಒಪ್ಪಿಗೆ ಕೊಟ್ಟು, ಧನಸಹಾಯ ಮಾಡಲು ತಾನಾಗಿಯೇ ಒಪ್ಪಿದಾಗ ಮೀರ ಅವನನ್ನು ಆದರದಿಂದ ಕಾಣಲಾರಂಭಿಸಿದ್ದಳು. ತಾನು ಅವನನ್ನು ತಪ್ಪು ತಿಳಿದುಕೊಂಡಿರಲಿಲ್ಲವಷ್ಟೇ ಎಂದವಳು ಯೋಚಿಸುತ್ತಿದ್ದಳು.

ಏಟು ಬಿದ್ದ ಒರಟು ಕಲ್ಲು ವಿಗ್ರಹದ ರೂಪ ತಾಳುವಂತೆ, ಬದುಕಿನಲ್ಲಿ ಪೆಟ್ಟು ತಿಂದ ಮೀರ, ಶಾಮುವಿನ ಹೃದಯಗಳು ಪಕ್ವವಾಗತೊಡಗಿದ್ದವು. ತನ್ನಂತಹ ಹುಡುಗಿಯ ಕೈ ಹಿಡಿದು ಶಾಮುವಿನ ಬದುಕು ನೀರಸವಾಯಿ ತೆಂದು ಮೀರ ತಿಳಿದಿದ್ದಳು. ಅವನ ಬಾಳಿಗೆ ಹೊಂದಿಕೊಂಡು, ಪತಿಯೇ ದೇವರೆಂದು ಭಾವಿಸುತ್ತಾ ಅವನ ಸುಖದಲ್ಲಿ ತನ್ನ ಸುಖವನ್ನು ಕಂಡು ಕೊಳ್ಳುವ ಹುಡುಗಿಯಾಗಿದ್ದಿದ್ದರೆ ಶಾಮುವಿನಷ್ಟು ಸುಖಿ ಯಾರೂ ಇರುತ್ತಿರಲಿಲ್ಲವೋ ಏನೋ? ಆ ಯೋಚನೆ ಬಂದಾಗಲೆಲ್ಲಾ ತಪ್ಪಿನ ಭಾರ ದಿಂದ ಅವಳ ತಲೆ ಬಾಗುತ್ತಿತ್ತು.

ವೀಣಳ ಮೃತ್ಯು ಗಂಡ ಹೆಂಡಿರ ನಾಲಿಗೆಯ ಶಕ್ತಿಯನ್ನು ಉಡುಗಿ ಸಿತ್ತು.

* * * *

ಮೆಡಿಕಲ್ ಕಾಲೇಜಿಗೆ ಸೇರಲು ಮೀರ ಅಪ್ಲಿಕೇಷನ್ ಫಾರಮ್ಮನ್ನು ತಂದಿದ್ದಳು. ಫಾರಮ್ಮನ್ನು ಭರ್ತಿಮಾಡಿ ಅದರೊಡನೆ ಕಳುಹಿಸಬೇಕಾಗಿದ್ದ ಇತರ ಸರ್ಟಿಫಿಕೇಟ್, ಮಾರ್ಕ್ಸ್ ಕಾರ್ಡುಗಳನ್ನು ಪಡೆಯಲು ಅವಳು

ಮೈಸೂರಿಗೆ ಹೋಗಬೇಕಾಗಿತ್ತು.

ಶಾಮುವಿನೊಡನೆ ಉಪ್ಪಿಟ್ಟು ತಿನ್ನುವಾಗ ಮೈಸೂರಿಗೆ ಹೋಗುವ ಸುದ್ದಿಯನ್ನು ಅವನ ಕಿವಿಯ ಮೇಲೆ ಹಾಕಬೇಕೆನಿಸಿದರೂ ವೆಂಕಮ್ಮನವರೆದುರಿಗೆ ಆ ವಿಚಾರವನ್ನು ಪ್ರಸ್ತಾಪ ಮಾಡುವ ಮನಸ್ಸಿಲ್ಲದೆ ಮೀರ ಸುಮ್ಮನಾದಳು. ಶಾಮು ತಿಂಡಿ ತಿಂದು, ಗದ್ದೆ ತೋಟ ಯಾವ ಸ್ಥಿತಿಯಲ್ಲಿದೆಯೋ ತಿಳಿಯಬೇಕೆಂದು ಹೊರಗೆ ಹೊರಡುವ ಸಿದ್ಧತೆಯಲ್ಲಿದ್ದ. ಮೀರ ಶಾಮುವನ್ನು ಅನುಸರಿಸಿ ಹಿಂದೆ ಬಂದಳು.

"ಮತ್ತೇ........" ಮಾತು ತೆಗೆದಳು ಮೀರ.

"ಏನು?"

"ನಿಮ್ಮ ಕೈಲಿ ಸ್ವಲ್ಪ ಮಾತನಾಡಬೇಕಾಗಿದೆ"

"ನಡಿ. ಡ್ರಾಯಿಂಗ್ ರೂಮಿಗೆ ಹೋಗೋಣ."

ಮೀರ ಡ್ರಾಯಿಂಗ್ ರೂಮಿನಲ್ಲಿದ್ದ ಸೋಫದ ಮೇಲೆ ಕುಳಿತಳು. ಶಾಮು ಅವಳ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತ. ಮೀರಳಿಗೆ ಮಾತು ಹೇಗೆ ಮೊದಲುಮಾಡಬೇಕೆಂಬುದೇ ತಿಳಿಯಲಿಲ್ಲ.

"ಏನಾಗಬೇಕಿತ್ತು?" ಶಾಮುವೇ ಅವಳನ್ನು ಕೇಳಿದ.

"ಕಾಲೇಜಿಗೆ ಸೇರಲು ಬೇಕಾದ ಸರ್ಟಿಫಿಕೇಟುಗಳನ್ನು ಪಡೆಯಲು ನಾನು ಮೈಸೂರಿಗೆ ಹೋಗಬೇಕಾಗಿದೆ."

"ಕಾಲೇಜಿಗೆ ಕಾಗದ ಬರೆದರೆ ಅವರೇ ಕಳುಹಿಸಲಾರರೇ?"

"ಕಳುಹಿಸುತ್ತಾರೆ. ಆದರೆ ನಿಧಾನವಾಗಬಹುದು. ಆದುದರಿಂದ ನಾನೇ ಒಂದು ದಿನ ಮೈಸೂರಿಗೆ ಹೋಗಿ ನನ್ನ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು ಬರುತ್ತೇನೆ."

ಒಂದು ಗಳಿಗೆ ಮಾತನಾಡದೆ ಶಾಮು ಮೌನವಾಗಿ ಕುಳಿತಿದ್ದ. ಅನಂತರ ತಗ್ಗಿಸಿದ ತಲೆಯನ್ನು ಎತ್ತಿ

"ನಿಮ್ಮ ದೊಡ್ಡಪ್ಪನ ಮನೆಗೆ ಹೋಗ್ತೀಯೇನು?" ಎಂದ. ಅವನು ಮಾತುಗಳನ್ನು ಬಹಳ ಪ್ರಯಾಸದಿಂದ ಆಡುತ್ತಿರುವಂತೆ ತೋರಿತು.

"ಹೂಂ. ಒಂದೆರಡು ದಿನ ಇರೋದಕ್ಕೆ ಎಲ್ಲಾದರೇನು? ಆಮೇಲೆ ಕಾಲೇಜು ಹಾಸ್ಟೆಲು ತೆಗೆಯುವವರೆವಿಗೆ ಅಲ್ಲೇ ಇರುತ್ತೇನೆ. ಹಾಸ್ಟೆಲಿಗೆ ಬೇರೆ ಅಪ್ಲಿಕೇಶನ್ ಹಾಕಿದೀನಿ."

"ಒಳ್ಳೆಯದು" ಎಂದು ಮಾತ್ರ ನುಡಿದು ಶಾಮು ಹೊರಗೆ ಹೊರಟು ಹೋದ.

ಶಾಮುವಿನ ಊಹೆಯಂತೆಯೇ ರೈತರು ಒಡೆಯನ ನಿರಾಸಕ್ತಿಯ ಪರಿಣಾಮವಾಗಿ ಹೊಲ, ಗದ್ದೆ, ತೋಟವನ್ನು ಅಲಕ್ಷಿಸಿದ್ದರು. ಕಾಳ, ಶಿವಯ್ಯ, ಮುನೀಗೌಡ ಎಲ್ಲರೂ ತಮ್ಮ ತಮ್ಮ ಗುಡಿಸಿಲಿನ ಬಾಗಿಲುಗಳಲ್ಲಿ ಬೀಡಿ ಸೇದುತ್ತಾ ಕುಳಿತಿದ್ದರು. ಶಾಮು ಗದ್ದೆಯ ಕಡೆ ಹೊರಟಿರುವುದನ್ನು ನೋಡಿಯೂ ಅವರು ಉದಾಸೀನರಾಗಿ 'ಹುಚ್ಚಲೆ ದಾಟಕ್ಕೆ ಒಂಟಿದಾರೆ' ಎಂದುಕೊಂಡು ಸುಮ್ಮನಿದ್ದರು. ಆದರೆ ಶಾಮು ಗುಡಿಸಿಲುಗಳ ಮುಂದೆ ನಿಂತು ದರ್ಪದಿಂದ 'ಕಾಳಾ, ಜೊಮ್ಮಾ' ಎಂದು ರೈತರುಗಳ ಹೆಸರನ್ನು ಹಿಡಿದು ಕೂಗಿ ಒಬ್ಬೊಬ್ಬರನ್ನಾಗಿ ಹೊರಗೆ ಹೊರಡಿಸಿದ.

"ತೆಂಗಿನ ಗಿಡಗಳಿಗೆ ಪಾತಿಮಾಡಿ ಮರಳು, ಉಪ್ಪು, ಗೊಬ್ಬರ ಹಾಕಿ ನೀರು ಬಿಡು. ಕಾಲುವೆಯಿಂದ ನೀರ ಹರಿಯಿಸು. ನನ್ನ ಮುಖದಲ್ಲಿ ಏನು ನೋಡ್ತಾ ನಿಂತುಕೊಳ್ಳುತ್ತೀಯ? ಕಾಳಾ, ನಿಂಬೆಗಿಡದ ಪಾತಿಯಲ್ಲಿರುವ ಕಳೇನೆಲ್ಲಾ ಕೀಳು."

ಶಾಮು ಮೊದಲಿನಂತೆ ತೋಟ ಗದ್ದೆಯಲ್ಲಿ ಆಸಕ್ತಿ ವಹಿಸಿರುವುದನ್ನು ನೋಡಿ ರೈತರು ಆಶ್ಚರ್ಯಭರಿತರಾದರು.

ಸಂಜೆ ಏಳುಗಂಟೆಯವರೆವಿಗೆ ಶಾಮು ನಿಂತು ಎಲ್ಲವನ್ನೂ ಒಂದು ತಹಬಂದಿಗೆ ತಂದು ಮನೆಗೆ ಹೊರಟ. ಮನೆಗೆ ಹೊರಡುವುದಕ್ಕೆ ಮುಂಚೆ ರೈತರನ್ನು ಕರೆದು,

"ನಾಳೆಯಿಂದ ಯಾರೂ ಹೀಗೆ ಮಾಡಿದರೆ ಆಗೋದಿಲ್ಲ. ನೀವು ಹೇಗೆ ಮಾಡಿದರೂ ಮಾಡಿಸಿಕೊಳ್ತೀನೀಂತ ಅಂದ್ಕೊಂಡಿದೀರೇನು? ಹುಷಾರಾಗಿರಿ" ಎಂದು ಎಚ್ಚರಿಕೆ ಕೊಟ್ಟು ನಿಂಗನ ಕಡೆ ತಿರುಗಿ,

"ನಾಳೆ ಹೊತ್ತಾರೇಗೆ ಗಾಡಿ ಹೂಡಿರು. ಅಮ್ಮಾವರು ಮೈಸೂರಿಗೆ ಹೋಗ್ತಾರೆ." ಎಂದು ಹೇಳಿ ಮನೆಗೆ ಹಿಂತಿರುಗಿದ.

ಶಾಮು ಮನೆಗೆ ಬಂದಾಗ ಮಿೀರ ಲಾಂದ್ರದ ಕೆಳಗೆ ಕುಳಿತು ವೆಂಕುವಿನೊಡನೆ ಮಾತನಾಡುತ್ತಿದ್ದಳು. ಶಾಮು ಬಂದೊಡನೆ ವೆಂಕು ಉತ್ಸಾಹದಿಂದ

"ಶಾಮಣ್ಣ, ಮಿೀರ ನಾಳೆ ಮೈಸೂರಿಗೆ ಹೋಗ್ತಾರೇನು?" ಎಂದಳು. ಶಾಮುವಿಗೆ ತಾನು ಎತ್ತಿ ಆಡಿಸಿದ ಜೋಯಿಸರ ಮಗಳು ವೆಂಕುವಿನಲ್ಲಿ ಅಪಾರ ವಿಶ್ವಾಸವಿತ್ತು.

ವೆಂಕುವಿನ ಮಾತು ತನ್ನ ಕಿವಿಗೆ ಬೀಳಲಿಲ್ಲವೆಂಬಂತೆ ಶಾಮು ಒಳಗೆ

ಹೋದ. ಶಾಮು ತನ್ನ ಪ್ರಶ್ನೆಗೆ ಉತ್ತರ ಕೊಡದೆ ಒಳಗೆ ಹೋದುದನ್ನು ನೋಡಿ ವೆಂಕು ಅಪ್ರತಿಭಳಾದಳು.

ಶಾಮು ವೆಂಕುವಿನ ಮನಸ್ಸನ್ನು ಉದ್ದೇಶಪೂರ್ವಕವಾಗಿ ನೋಯಿಸಿರಲಿಲ್ಲ. ಅವನ ಮನಸ್ಸು ಬೇರೆ ಆಲೋಚನೆಗಳಿಂದ ತುಂಬಿತ್ತು.

ಮೀರ ಮೆಡಿಕಲ್ ಕಾಲೇಜಿಗೆ ಸೇರುವುದು ಶಾಮುವಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಮೀರಾಳ ಸ್ಥಿತಿ ನೋಡಿ ಅವನು ಗಾಬರಿಯಾಗಿದ್ದ. ಹಿಂದೊಮ್ಮೆ ಅವಳೇ ಹೇಳಿದ್ದಂತೆ 'ಹುಚ್ಚು ಹಿಡಿಯಬಹುದು, ದೇಶಾಂತರ ಓಡಿಹೋಗಬಹುದು, ಆತ್ಮಹತ್ಯೆ ಮಾಡಿಕೊಳ್ಳಬಹುದು' ಎಂದು ಅಂಜಿ ಶಾಮು ಅವಳು ಮನಬಂದಂತೆ ಇರಲಿ ಎಂದು ತನ್ನ ಒಪ್ಪಿಗೆ ಕೊಟ್ಟಿದ್ದ. ಮೊದಲೇ ನೊಂದು ಗಾಯಗೊಂಡಿರುವ ಮನಸ್ಸನ್ನು ಬಲಾತ್ಕಾರದಿಂದ ಕಟ್ಟಿಹಾಕಿ ನೋಯಿಸುವುದರಲ್ಲಿ ಯಾವ ಅರ್ಥವೂ ಇಲ್ಲವೆಂದು ಶಾಮು ತಿಳಿದಿದ್ದ. ವ್ಯಾಸಂಗದಿಂದ ಅವಳು ಮತ್ತೆ ಮೊದಲಿನ ಮೀರಳಾಗಬಹುದು ಎಂಬ ದೂರದ ಆಸೆಯೊಂದು ಮಿನುಗುತ್ತಿತ್ತು ಅವನ ಹೃದಯಾಂತರಾಳದಲ್ಲಿ. ಅವನ ಮನಸ್ಸು ಅವಳನ್ನು ಕಾಲೇಜಿಗೆ ಕಳುಹಿಸಲು ನಿಶ್ಚಯಿಸಿದ್ದರೂ ಅವನ ಮನೋಹೋರಾಟ ಕಡಿಮೆಯಾಗಿರಲಿಲ್ಲ. ಮೀರಳೂ ಹೊರಟು ಹೋದಮೇಲೆ ತನ್ನ ಗತಿ ಏನು? ತಾನೊಬ್ಬನೇ ದೇಗುಲದಂತಹ ಮನೆಯಲ್ಲಿ ಇರುವುದಾದರೂ ಹೇಗೆ? ತನಗೆ ಹೊಲ, ಗದ್ದೆ, ತೋಟಗಳಿರುವಾಗ ಯೋಚಿಸಬೇಕಾದ ಅಗತ್ಯವೇನಿದೆ? ಅವುಗಳನ್ನು ನೋಡಿಕೊಳ್ಳುವುದರಲ್ಲಿ ತನ್ನ ಸಮಯ ಹೋಗುವುದಿಲ್ಲವೇ? ಆದರೆ........ಜಮೀನನ್ನು ನೋಡಿಕೊಳ್ಳುವುದೇ ತನ್ನ ಬಾಳಿನ ಗುರಿಯೇನು? ತನ್ನ ಹೃದಯಕ್ಕೆ ಮತ್ತೊಂದು ಹೃದಯದ ಸಹಾನುಭೂತಿ, ಗೆಳೆತನ ಬೇಕಿಲ್ಲವೇ? ಯಾರಿಗಾಗಿ ತಾನು ಆಸ್ತಿ ವೃದ್ಧಿಪಡಿಸಬೇಕು? ಯಾರಿಗಾಗಿ ತಾನು ದುಡಿಯಬೇಕು?

ಈ ಪ್ರಶ್ನೆಗಳು ಶಾಮುವಿನ ಮನಸ್ಸಿನಲ್ಲಿ ಪದೆ ಪದೇ ಏಳುತ್ತಿದ್ದವು. ಆದರೆ ಅವುಗಳಿಗೆ ಸರಿಯಾದ ಉತ್ತರ ಮಾತ್ರ ಸಿಕ್ಕಿರಲಿಲ್ಲ.

* * * *

ಬೆಳಗಿನ ಪೆಟಲ್ ಟ್ರೈನು ಎಂಟೂವರೆಗೇ ಹಿರೋಡೆಗೆ ಬರುತ್ತಿದ್ದುದರಿಂದ ಮೀರ ರಾತ್ರಿಯೇ ಹೊರಡುವ ಸಿದ್ಧತೆಗಳನ್ನು ಮಾಡಿದಳು. ಚಿಕ್ಕದ ಸೂಟ್‌ಕೇಸಿಗೆ ಎರಡು ವಾಯಿಲ್ ಸೀರೆ, ರವಿಕೆಗಳನ್ನು ಮಡಿಸಿಟ್ಟು ತನಗೆ ಅಗತ್ಯವಾಗಿ ಬೇಕಾಗುವ ಇತರ ಸಾಮಾನುಗಳನ್ನು ತೆಗೆದಿರಿಸಿ

ಕೊಂಡಳು. ಶಾಮು ಮೀರಳ ಸಿದ್ಧತೆಗಳನ್ನು ಗಮನಿಸಿದರೂ ಗಮನಿಸದವನಂತೆ ಸುಮ್ಮನಿದ್ದುಬಿಟ್ಟ. ತನ್ನ ವೇದನೆಯನ್ನು ಅದುಮಿಡಲು ಅವನು ಔದಾಸೀನ್ಯದ ಸೋಗು ಹಾಕಿದ್ದ.

ಮೀರ ಬೆಳಗಿನ ಜಾವ ಆರುಗಂಟೆಗೇ ಎದ್ದು, ತಲೆ ಬಾಚಿ ಹೂ ಮುಡಿದು, ಕಾಫಿ ಕುಡಿದು ಬರಲು ವೆಂಕಮ್ಮನವರ ಬಳಿಗೆ ಬಂದಳು. ವೆಂಕಮ್ಮನವರು ಆಶ್ಚರ್ಯದಿಂದ

" ಇದೇನೆ ತಾಯಿ, ಇಷ್ಟು ಬೇಗ ಎಲ್ಲಿಗೆ ಹೊರಟೆ ?" ಎಂದರು.

" ಮೈಸೂರಿಗೆ ಹೊರಟಿದೀನಿ."

" ನಿನ್ನೆ ರಾತ್ರಿ ಹೇಳಿದ್ದರೆ ಬೆಳಿಗ್ಗೆ ಎದ್ದು ಕಾಫಿ ಮಾಡ್ತಿದ್ದೆ. ನೀನು ಮೈಸೂರಿಗೆ ಹೊರಟಿರುವುದು ನನಗೆ ಗೊತ್ತಿಲ್ಲ. ಹಾಲು ಕಾದಿದೆ. ಕೊಡಲೆ?"

" ನಿನ್ನೆ ರಾತ್ರಿ ನಾನು ನಿಮಗೆ ಏನೂ ಹೇಳಲಿಲ್ಲವೇ ?"

" ಇಲ್ಲ."

" ಹಾಳು ಮರೆವು ಬಂದಿದೆ. ಯಾಕೋ ಬುದ್ಧಿ ತೀರ ವಿಕಲ್ಪವಾಗಿದೆ."

ವೆಂಕಮ್ಮನವರು ಹಾಲನ್ನು ಬಟ್ಟಲಿಗೆ ಹಾಕುತ್ತಾ " ಶಾಮಣ್ಣನೂ ಬರುತ್ತಾನೇನು ?" ಎಂದರು.

" ಇಲ್ಲ."

" ಒಬ್ಬಳೇ ಹೋಗ್ತೀಯೇನು ?"

" ಭಯವೇನು ? ಕಂಡೂ ಕಾಣದ ಊರಾದರೆ ಹೆದರಬೇಕು."

" ತಾಯಿ, ನಾನೊಂದು ಮಾತು ಹೇಳ್ತೀನಿ. ಕೋಪಿಸಿಕೊಳ್ಳಬೇಡ. ಶಾಮಣ್ಣನ್ನ ಮಗುವಾದಾಗಿನಿಂದ ನಾನು ಎತ್ತಿ ಆಡಿಸಿದೀನಿ. ಅವನ ಸ್ವಭಾವ ನನಗೆ ಚೆನ್ನಾಗಿ ಗೊತ್ತು. ಮೇಲೆ ತುಂಬಾ ಒರಟು ಎನಿಸಿದರೂ ಅವನ ಹೃದಯ ಬಹಳ ಮೃದು—ಒಳಗೆ ತಿರುಳು ಮೃದುವಾಗಿದ್ದರೂ ಮೇಲಿನ ಕರಟ ಒರಟಾಗಿರೋ ಹಾಗೆ. ನನಗೇನೋ ಈಗಿನ ಸ್ಥಿತೀಲಿ ನೀನು ಶಾಮಣ್ಣನ್ನ ಬಿಟ್ಟು ಮೈಸೂರಿಗೆ ಹೋಗೋದು ಸರಿಯಲ್ಲ ಎನಿಸುತ್ತಿದೆ."

ಮೀರ ಒಂದು ಮಾತೂ ಆಡದೆ ನಿಧಾನವಾಗಿ ಹಾಲು ಕುಡಿದು ಮುಗಿಸಿದಳು. ಅವಳು ಮಾತನಾಡದಿರುವುದನ್ನು ನೋಡಿ ವೆಂಕಮ್ಮನವರು ಮುಂದುವರೆಸಿದರು.

" ನಾನು ಯಾಕೆ ಹೀಗೆ ಹೇಳ್ತಿದೀನೀಂದ್ರೆ ಜಾನಿ ಹೋದ ದುಃಖ ಅವನನ್ನು ಹಗಲಿರುಳೂ ತಿನ್ನುತ್ತಿದೆ. ಸಂತೋಷಾನ ಇತರರೊಡನೆ

ಹಂಚಿಕೊಂಡರೆ ಹೆಚ್ಚಾಗತ್ತೆ. ದುಃಖಾನ ಇತರರೊಡನೆ ಹೇಳಿಕೊಂಡರೆ ಕಡಿಮೆಯಾಗುತ್ತದೆ. ಸುಖದ ದಿನಗಳಲ್ಲಿ ನೀನು ಅವನೊಡನಿದ್ದು ಈಗ ಮೈಸೂರಿಗೆ ಹೊರಟಿರುವುದು ಸರಿಯಲ್ಲ. ನೀನೂ ಹೊರಟು ಹೋದರೆ ಶಾಮಣ್ಣ ಇದ್ದಿದ್ದೂ ಮಂಕಾಗಿ ಬಿಡುತ್ತಾನೆ. ಮೈಸೂರಿನಲ್ಲಿ ತುಂಬ ದಿನವಿರಬೇಡ. ಬೇಗ ಬಂದು ಬಿಡಮ್ಮ."

ವೆಂಕಮ್ಮನವರ ಮಾತು ಕೇಳಿ ಮೀರಳಿಗೆ ಮುಳ್ಳು ತುಳಿದಂತಾಯಿತು. ಇನ್ನೂ ಇದೇ ಪ್ರಾರಂಭವಾಗುತ್ತಿದೆ. ಆಗಲೇ ಮುಗಿಸಿಬಿಡು ಎಂದು ಹೇಳುತ್ತಿರುವುದನ್ನು ಕೇಳಿ ಮೀರಳಿಗೆ ಏನು ಉತ್ತರ ಕೊಡಬೇಕೋ ತಿಳಿಯದಾಯಿತು.

ಮೀರ ಎಲ್ಲಿಯೋ ನೋಡುತ್ತಾ "ಆಗಲಿ. ಬೇಗ ಬರುತ್ತೇನೆ" ಎಂದಳು. ಮೀರಳ ಮಾತು ಕೇಳಿ ವೆಂಕಮ್ಮನವರು ಪ್ರಸನ್ನಗೊಂಡು

"ನನಗೆ ಗೊತ್ತು. ನೀನು ಶಾಮಣ್ಣನ್ನ ಬಿಟ್ಟು ತುಂಬಾ ದಿನ ಇರೋದಿಲ್ಲಾಂತ. ಓದಿದ ಹುಡುಗಿ ನೀನು. ನಿನಗೆ ಅಷ್ಟು ತಿಳಿಯುವುದಿಲ್ಲವೇ ? ಶಾಮಣ್ಣನ ಸ್ವಭಾವ ನಿನಗೇನು ಗೊತ್ತಿಲ್ಲವೆ ?" ಎಂದರು.

ನಿಂಗ ಎತ್ತುಗಳನ್ನು ಹೂಡಿ ಗಾಡಿಯನ್ನು ಮನೆಯ ಮುಂದೆ ನಿಲ್ಲಿಸಿದ್ದ. ಮೀರ ಕೈಲಿ ಸೂಟ್‌ಕೇಸ್ ಹಿಡಿದಿರುವುದನ್ನು ನೋಡಿ ನಿಂಗ,

"ಕೊಡಿ ತಾಯಿ. ಗಾಡ್ಯಾಗಿಡ್ತೀನಿ" ಎನ್ನುತ್ತಾ ಅವಳ ಕೈಯಿಂದ ಪೆಟ್ಟಿಗೆ ತೆಗೆದುಕೊಂಡ. ಮೀರ ಅಚ್ಚರಿಯಿಂದ

"ಇದೇನೋ ನಿಂಗ. ಗಾಡಿ ಹೂಡೋದಿಕ್ಕೆ ನಿನಗ್ಯಾರು........"

"ಬುದ್ಧಿಯೋರು ನಿನ್ನೆ ಮಧ್ಯಾಹ್ನವೇ ಗಾಡಿ ಹೂಡಾಕೆ ಹೇಳಿದ್ದರು"

ಶಾಮುವಿನ ಔದಾರ್ಯ ಮೀರಳನ್ನು ಮತ್ತೆ ತಿವಿಯಿತು.

ಮೀರ ಶಾಮು ಮಲಗಿದ್ದ ರೂಮಿನೊಳಗೆ ಬಂದು ಹೊಸಿಲ ಬಳಿ ನಿಂತಳು. ಶಾಮು ಗೋಡೆಯ ಕಡೆ ಮುಖ ಮಾಡಿಕೊಂಡು ನಿಂತಿದ್ದ.

"ನಾನು ಹೋಗಿ ಬರುತ್ತೇನೆ."

"ದುಡ್ಡಿದೆ ತಾನೆ ?"

"ಹೂಂ."

"ಒಳ್ಳೆಯದು." ಶಾಮು ಗೋಡೆಯನ್ನೇ ನೋಡುತ್ತಾ ಬೀಳ್ಕೊಟ್ಟ.

ಮೀರ ಗಾಡಿ ಹತ್ತಿ ಕುಳಿತಳು. ಎತ್ತುಗಳು ನಿಧಾನವಾಗಿ ಹೊರಟವು. ಅವಳು ತನ್ನ ಯೋಚನೆಗಳಲ್ಲಿ ಮುಳುಗಿದ್ದಾಗ ನಿಂಗ

"ಇಳೀರಿ ತಾಯಿ. ಟೇಸನ್ ಬತ್ತು" ಎಂದ.

ಮೀರ ರೈಲನ್ನು ಎದುರುನೋಡುತ್ತಾ ನಿಂತಿದ್ದಳು. ನಿಂಗನೂ ನಿಂತಿರುವುದನ್ನು ನೋಡಿ.

"ನೀನು ಹೋಗಪ್ಪ. ಸೂಟ್‌ಕೇಸ್ ನಾನೇ ತಗೋತೀನಿ. ಭಾರ ವಿಲ್ಲ" ಎಂದಳು.

ಒಂಟಿಯಾಗಿ ನಿಂತಿದ್ದ ಚೆಲುವೆಯನ್ನು ನೋಡಿ ಕೆಲಸವಿಲ್ಲದೇ ಓಡಾಡುತ್ತಿದ್ದವರಿಗೆ ಹೊಸ ಉತ್ಸಾಹ ಹುಟ್ಟಿತು. ನೋಡುವವರ ಒಂದು ಕಣ್ಣು ಹತ್ತಾಯಿತು. ಕೆಲವರು ಮೀರಳ ಬಳಿ ಸುಳಿದಾಡಿ ಅವಳ ಗಮನ ವನ್ನು ಸೆಳೆಯಲು ಯತ್ನಿಸಿದರು. ಒಬ್ಬ ರಸಿಕ "ಸುಂದರ ನಾರೀ ಪ್ರೀತಮ ಪ್ಯಾರೀ........" ಎಂದು ಸಿಳ್ಳೆ ಹಾಕಿದ. ಆದರೆ ಮೀರಳಿಗೆ ಯಾವುದರ ಪರಿವೆಯೂ ಇರಲಿಲ್ಲ. ಆಮೆ ತನ್ನ ಚಿಪ್ಪಿನಲ್ಲಿ ಅಡಗಿಕೊಳ್ಳುವಂತೆ ಮೀರ ತನ್ನ ಚಿಂತೆಯಲ್ಲಿ ಮೈಮರೆತಿದ್ದಳು.

ದೂರದಲ್ಲಿ ರೈಲು ಕೂಗಿದ ಸದ್ದು ಕೇಳಿ ಮೀರ ಎಚ್ಚರಗೊಂಡಳು. ನೂಕುನುಗ್ಗಲಿನಲ್ಲಿ ದಾರಿ ಮಾಡಿಕೊಂಡು ಹೋಗಿ ಇಂಟರ್ ಕಂಪಾರ್ಟ್ ಮೆಂಟನ್ನು ಹತ್ತಿದಳು. ರೈಲು ಹೊರಟಮೇಲೆ ಮೀರ ತನ್ನ ಸುತ್ತಲಿದ್ದವ ರನ್ನು ಗಮನಿಸಿದಳು. ಅವಳ ಎದುರಿಗೆ ಗಂಡ, ಹೆಂಡತಿ, ಐದಾರು ವರ್ಷದ ಹುಡುಗಿಯೊಂದು ಕುಳಿತಿದ್ದರು. ಆ ಹುಡುಗಿ ಅವರ ಮಗಳಿರಬೇಕೆಂದು ಮೀರ ತರ್ಕಿಸಿದಳು. ಆ ಹುಡುಗಿ ಆಗಾಗ್ಗೆ ಬಾಗಿಲಿನ ಬಳಿಗೆ ಹೋಗಿ ನಿಲ್ಲುತ್ತಿದ್ದಳು. ಮಗಳು ಕಿಟಕಿಯಿಂದಾಚೆ ಬಗ್ಗಿ ನೋಡುತ್ತಿರುವುದನ್ನು ನೋಡಿ ತಾಯಿ ಕೂಗಿದಳು.

"ಶೋಭಾ, ಕಿಟಕಿಯಿಂದಾಚೆ ಬಗ್ಗಬೇಡ. ಕಿಡಿ ಬರುತ್ತದೆ."

"ಕಿಡಿ ಎಲ್ಲಿಂದ ಬರುತ್ತೆ?"

"ಎಲ್ಲಿಂದ ಬರುತ್ತೋ ನಂಗೊತ್ತಿಲ್ಲ. ಬಾ ಬಿಸ್ಕತ್ತು ಕೊಡ್ತೀನಿ."

ಶೋಭಾ ಬಿಸ್ಕತ್ತಿನ ಹೆಸರು ಕೇಳಿ ತಾಯಿಯ ಪಕ್ಕದಲ್ಲಿ ಬಂದು ಕುಳಿತಳು.

ಶೋಭಾ ತುಂಬಾ ಮುದ್ದಾಗಿದ್ದಳು. ದುಂಡು ಮುಖ, ಹೊಳಪಾದ ಚಂಚಲಗಣ್ಣು, ಮೊಂಡು ಮೂಗು, ಅಲೆ ಅಲೆಯಾದ ಬಾಬ್, ಚೀಟಿಯ ಫ್ರಾಕಿನ ಪುಟ್ಟ ಶೋಭ ಮೀರಳ ಮನಸ್ಸನ್ನು ಒಂದು ನಿಮಿಷದಲ್ಲಿ ಸೂರೆ ಗೊಂಡಳು. ಶೋಭಳನ್ನು ನೋಡುತ್ತಿದ್ದಂತೆಯೇ ಮೀರಳಿಗೆ ವೀಣಳ ನೆನಪು ಬಂತು. ಹೃದಯ ಭಾರವಾಗಿ ಕಣ್ಣುಗಳು ತೇವಗೊಂಡವು. ಶೋಭಳ ತಾಯಿ ಮೀರಳ ಪರಿಚಯ ಮಾಡಿಕೊಳ್ಳುವ ಉದ್ದೇಶದಿಂದ ಅವಳ

ಕಡೆಯೇ ನೋಡುತ್ತಿದ್ದಳು. ತನ್ನ ಕಣ್ಣೀರು ಅವರಿಗೆ ಕಾಣಬಾರದೆಂದು ವೀಾರ ಕಿಟಕಿಯ ಕಡೆ ತಿರುಗಿಕೊಂಡಳು. ದುಃಖ ಸ್ವಲ್ಪ ಕಡಿಮೆಯಾದ ಮೇಲೆ ವೀಾರ ಪುನಃ ಅವರ ಕಡೆ ನೋಡಿದಳು. ಬಿಸ್ಕತ್ತು ಕಡಿಯುತ್ತಿದ್ದ ಶೋಭಾ ವೀಾರಳನ್ನು ನೋಡಿ ನಕ್ಕಳು. ವೀಾರ ನಗಲೇಬೇಕಾಯಿತು. ಶೋಭಳ ತಾಯಿ ಮಾತಿಗೆ ಮೊದಲು ಮಾಡಿದರು.

"ಯಾವೂರಿಗೆ ?"

"ಮೈಸೂರಿಗೆ. ನೀವು ?"

"ಸಧ್ಯಕ್ಕೆ ಮೈಸೂರಿಗೆ. ಮಂಗಳೂರಿನಿಂದ ಬಂದಿದೀವಿ—ಮೈಸೂರು ನೋಡೋಣಾಂತ. ನಿಮ್ಮ ಹೆಸರು ?'

"ವೀಾರ."

"ಓದುತ್ತಿದೀರಾ ?"

ವೀಾರ ಒಂದು ಗಳಿಗೆ ಸುಮ್ಮನಿದ್ದು "ಹೂಂ" ಎಂದಳು.

"ಏನು ಓದುತ್ತಿದೀರಿ ?"

"ಇಂಟರ್ ಆಗಿದೆ. ಮೆಡಿಕಲ್‌ಗೆ ಸೇರಬೇಕೆಂದಿದೇನೆ."

"ಬಹಳ ಸಂತೋಷ. ನನಗೂ ಓದಲು ಬಹಳ ಆಸೆಯಿತ್ತು. ಇಂಟರ್ ಆದಮೇಲೆ ಮದುವೆಯಾಯಿತು. ಪ್ರೈವೇಟಾಗಿ ನಾಗಪುರ ಯೂನಿವರ್ಸಿಟಿಯ ಪರೀಕ್ಷೆಗೆ ಕುಳಿತು ಬಿ.ಎ. ಮುಗಿಸೋಣವೆಂದು ಮನೆಯಲ್ಲೇ ಓದುತ್ತಿದ್ದೆ. ಆದರೆ ಈ ಶೋಭಳಿಂದಾಗಿ ನನ್ನ ಓದು ಅಲ್ಲಿಗೇ ಮುಗಿಯಿತು."

ವಸಂತಿ ಮಾತನಾಡುತ್ತಾ ಅಕ್ಕರೆಯಿಂದ ಶೋಭಳ ಕಡೆ ನೋಡಿದಳು ವಸಂತಿಯ ಗಂಡ ಹೆಂಡತಿಯ ಕಡೆ ಕಳ್ಳನೋಟ ಬೀರಿ ನಕ್ಕರು. ಅವರ ಸುಖ ಸಂಸಾರ ನೋಡಿ ವೀಾರಳ ಕುದಿಯುತ್ತಿದ್ದ ಹೃದಯ ತಂಪಾಯಿತು. ಹಾಗಾದರೆ ಸಂಸಾರದಲ್ಲಿದ್ದೂ ಸುಖವಾಗಿರುವವರು ಇದಾರೆಯೇ ? ತಾನು ತಿಳಿದುಕೊಂಡಿರುವಂತೆ ಪ್ರಪಂಚ ಕೇವಲ ದುಃಖಿಗಳ ತೌರೂರು ಮಾತ್ರವಲ್ಲ. ವಸಂತಿ ನಿಜವಾಗಿಯೂ ಎಷ್ಟು ಸುಖಿ ! ಗಂಡ ಹೆಂಡತಿ ಎಷ್ಟು ಅನ್ಯೋನ್ಯವಾಗಿದ್ದಾರೆ ! ಅವರಿಬ್ಬರನ್ನೂ ಪ್ರೇಮ ಬಂಧನದಿಂದ ಬಂಧಿಸಿದ್ದಾಳೆ ಅವರ ಮಗಳು ಶೋಭ. ಈ ಎಲ್ಲ ಸುಖಗಳಿಂದ ತಾನು ವಂಚಿತಳು. ತಾನು ಮಾಡಿದ ತಪ್ಪಾದರೂ ಏನು ?

"ಈಗ ಶೋಭಾ ದೊಡ್ಡೋಳಾಗಿದಾಳೆ. ಓದಬಹುದಲ್ಲಾ ?"

"ಈಗ ಓದೋಕೆ ಆಗೋದಿಲ್ಲ ಕಣ್ರಿ. ಒಂದು ಗಳಿಗೆ ಕತೆ ಪುಸ್ತಕ ಕೈಲಿ ಹಿಡಿದು ಕುಳಿತರೂ ಶೋಭಾಗೆ ಕೋಪ ಬಂದುಬಿಡುತ್ತದೆ."

ಮೀರಳ ಮನಸ್ಸು ಮತ್ತೆ ವೀಣಳನ್ನು ನೆನೆಯಿತು. ವೀಣಳೂ ಸಹ ಎಷ್ಟೋ ಬಾರಿ ಮೀರ ಓದುತ್ತಾ ಕುಳಿತಿದ್ದಾಗ ಓಡಿ ಬಂದು ಕೈಯಿಂದ ಪುಸ್ತಕ ಕಿತ್ತು ಎಸೆದು

"ಅಮ್ಮ, ನಂಜೊತೆ ಆಟಕ್ಕೆ ಬಾಮ್ಮ" ಎಂದು ಕರೆಯುತ್ತಿದ್ದಳು.

"ಅದೇನೋ ನಿಜ. ಈಗ ಓದೋದೊಂದ್ರೆ ಕಷ್ಟವೇ ಸರಿ"

"ನೀವು ಮೆಡಿಕಲ್ ಓದಿ ಏನ್ಮಾಡ್ತೀರಿ?" ವಸಂತಿ ಕೇಳಿದಳು.

"ಕಂಡೇ ಇದೆ. ಡಾಕ್ಟರಾಗ್ತೀನಿ."

"ಓದಿ ಕೆಲಸ ಮಾಡಲು ನನಗೂ ಬಹಳ ಆಸೆ. ಏನು ಸಂಸಾರವೋ? ಸಂಸಾರದಲ್ಲಿದ್ದರೆ ಜವಾಬ್ದಾರಿ ಬಹಳ. ಓದಿ ನಮ್ಮ ಪಾಡಿಗೆ ನಾವು ಕೆಲಸ ಮಾಡಿಕೊಂಡಿರುವುದಕ್ಕಿಂತ........"

"ಪಾಪ! ಈಗ ನಿನಗೆ ಕಡಿಮೆಯಾಗಿರುವುದೇನೋ?"

ಇದುವರೆಗೂ ಮೌನವಾಗಿ ಕುಳಿತಿದ್ದ ವಸಂತಿಯ ಗಂಡ ಹೆಂಡತಿಯ ದೂರುಗಳನ್ನು ಸಹಿಸಲಾರದೇ ನಡುವೆ ಬಾಯಿ ಹಾಕಿ ಕೇಳಿದರು.

"ಹೆಂಗಸರ ಕಷ್ಟ ನಿಮಗೇನು ಗೊತ್ತಾಗತ್ತೆ ಬಿಡಿ" ವಸಂತಿ ಗಂಡನ ಪ್ರಶ್ನೆಗೆ ಉತ್ತರ ಹೇಳಿದರು.

"ಕೆಲಸಕ್ಕೆ ಸೇರಿರುವ ಹೆಂಗಸರೆಲ್ಲಾ ಸುಖವಾಗಿರುತ್ತಾರೇಂತ ಹೇಳೋಕ್ಕಾಗುತ್ತದೆಯೇ ವಸಂತೀ ಬಾಯಿ?" ಮೀರ ಕೇಳಿದಳು.

"ನಮಗಿಂತ ಅವರು ಸುಖವಾಗಿರುತ್ತಾರೆ."

"ನಮಗೆ ಬಹಳ ಅನ್ಯಾಯ ಮಾಡ್ತಿದಿ ವಸಂತಾ" ಅವಳ ಗಂಡ ಎಂದರು.

"ಎರಡು ಬಗೆಯ ಜೀವನದಲ್ಲೂ ಕಷ್ಟ, ಸುಖ ಇವೆ." ಮೀರ ವೇದಾಂತಿಯಂತೆ ಮಾತನಾಡಿದಳು.

"ಸಂಸಾರದ ಕಷ್ಟ ಸುಖ ನಿಮಗೇನು ಗೊತ್ತು? ಇನ್ನೂ ಓದುತ್ತಾ ಇರುವ ನಿಮಗೇನು ತಿಳಿಯುತ್ತದೆ ಬಿಡಿ. ಹಾಯಾಗಿದೀರಿ."

ಮೀರ ಮುಂದೆ ಮಾತನಾಡಲಿಲ್ಲ. ತಾನು ಅನುಭವಿಸಿರುವುದರ ಹತ್ತರಲ್ಲಿ ಒಂದು ಪಾಲನ್ನು ಅನುಭವಿಸಿದಾಳೋ ಇಲ್ಲವೋ?

ಮೀರಳ ಮುಖದಲ್ಲಿ ನೋವಿನ ಗೆರೆಗಳು ಕ್ಷಣಕಾಲ ಮಿಂಚಿ ಮರೆಯಾದವು. ವಸಂತಿ ಕಿಟಕಿಯ ಬಳಿ ನಿಂತಿದ್ದ ತನ್ನ ಮಗಳನ್ನು ಗದರಿಸುತ್ತಿದ್ದುದರಿಂದ ಮೀರಳ ಮುಖದಲ್ಲಿ ವ್ಯಕ್ತವಾಗಿದ್ದ ಅಪಾರ ಯಾತನೆಯನ್ನು ಗಮನಿಸಲಿಲ್ಲ. ಮೈಸೂರು ಬರುವವರೆವಿಗೆ ಅವರ ಮಾತು ಕತೆ ಒಂದೇ ಸಮನೆ ನಡೆದಿತ್ತು.

ಮೀರಾ ದೊಡ್ಡಪ್ಪನ ಮನೆ ತಲುಪಿದಾಗ ಹನ್ನೊಂದೂವರೆಯಾಗಿತ್ತು. ದೊಡ್ಡಪ್ಪನಿಗೆ ಅವಳು ಕಾಗದ ಬರದಿರಲಿಲ್ಲವಾದುದರಿಂದ ಅವಳು ಬರುವ ವಿಷಯ ಯಾರಿಗೂ ತಿಳಿದಿರಲಿಲ್ಲ. ಮೀರ ಮನೆಗೆ ಬಂದಾಗ ಕೃಷ್ಣಪ್ಪನವರು ಮನೆಯಲ್ಲಿರಲಿಲ್ಲ. ಶ್ರೀಪಾದು ಬಿ. ಎಸ್‌ಸಿ. ಟೆಕ್ಸ್‌ಟೈಲ್ ಮುಗಿಸಿ ಬೆಂಗಳೂರಿನ ಗಿರಣಿಯೊಂದರಲ್ಲಿ ನೂರೈನತ್ತು ರೂಪಾಯಿನ ಕೆಲಸಕ್ಕೆ ಸೇರಿದ್ದ. ಶ್ರೀಪಾದು ಅಣ್ಣ ಗೋವಿಂದನ ಮನೆಯಲ್ಲಿರುತ್ತಿದ್ದ. ಶ್ರೀಹರಿಗೆ ಧಾರವಾಡದ ಕರ್ಣಾಟಕ ಕಾಲೇಜಿನಲ್ಲಿ ಉಪಾಧ್ಯಾಯನ ಕೆಲಸವಿತ್ತು.

ಮೀರ ಬಾಗಿಲು ತಟ್ಟಿದಾಗ ಕಮಲಮ್ಮನವರು ಬಂದು ಬಾಗಿಲು ತೆಗೆದರು. ಮೀರಳನ್ನು ನೋಡಿ ಆಶ್ಚರ್ಯ ವ್ಯಕ್ತಪಡಿಸಿ

" ಬಾಮ್ಮ. ಕಾಗದ ಬರೆದಿದ್ರೆ ಇವರು ಸ್ಟೇಷನ್ನಿಗೆ ಬರುತ್ತಿದ್ದರು. ಶಾಮಣ್ಣ ಬರಲಿಲ್ಲವೇ ? ಎಲ್ಲರೂ ಆರೋಗ್ಯವೇ ? " ಎಂದು ಕೇಳಿದರು. ಮೀರ ಅನಿರೀಕ್ಷಿತವಾಗಿ ಬಂದುದು ಕಮಲಮ್ಮನವರಿಗೆ ನಿಜವಾಗಿಯೂ ತುಂಬ ಸಂತೋಷವನ್ನುಂಟು ಮಾಡಿತ್ತು. ನಾಲ್ಕು ಜನ ಗಂಡು ಮಕ್ಕಳಿದ್ದರೂ ಎಲ್ಲರೂ ವಿದ್ಯಾಭ್ಯಾಸ ಮುಗಿಸಿ ನೌಕರಿ ಹಿಡಿದು ದೂರ ಹೊರಟು ಹೋಗಿದ್ದರು. ಶ್ರೀಪಾದು ಬೆಂಗಳೂರಿನಲ್ಲಿ ನೆಲಸಿ ಒಂದು ವರ್ಷವಾಗಿತ್ತು. ಅಂದಿನಿಂದ ಗಂಡ ಹೆಂಡತಿ ಇಬ್ಬರೇ ಮನೆಯಲ್ಲಿರುತ್ತಿದ್ದರು. ಕೃಷ್ಣಪ್ಪನವರಿಗಿನ್ನೂ ರಿಟೈರ್ ಆಗಿರಲಿಲ್ಲ. ಮನೆಯಲ್ಲಿ ಪತಿಯೊಬ್ಬರನ್ನೇ ಬಿಟ್ಟು, ಅವರ ಊಟ ತಿಂಡಿಗೆ ತೊಂದರೆ ಮಾಡಿ ಮಕ್ಕಳ ಮನೆಯಲ್ಲಿರುವ ಮನಸ್ಸು ಕಮಲಮ್ಮನವರಿಗಿರಲಿಲ್ಲ. ಗೋಪಾಲ, ಗೋವಿಂದ ಆಗಾಗ್ಗೆ ತಾಯಿಯನ್ನು ತಮ್ಮಲ್ಲಿಗೆ ಬರುವಂತೆ ಕರೆಯುತ್ತಿದ್ದರು. ಆದರೆ ಕೃಷ್ಣಪ್ಪನವರಿಗೆ ತೊಂದರೆಯಾಗುವುದೆಂದು ಅವರು ಮಕ್ಕಳ ಆಹ್ವಾನವನ್ನು ಅಂಗೀಕರಿಸಲಿಲ್ಲ. ಕೃಷ್ಣಪ್ಪನವರು ಕೆಲಸಕ್ಕೆ ಹೊರಟುಹೋದರೆ ಕಮಲಮ್ಮನವರಿಗೆ ಸಮಯವೇ ಹೋಗುತ್ತಿರಲಿಲ್ಲ. ಸಂಜೆಯ ಹೊತ್ತು ಆಗಾಗ್ಗೆ ತಮ್ಮ ಬೀಗರಾದ ಕಾವೇರಮ್ಮನ ಮನೆಗೆ ಹೋಗಿ ಬರುತ್ತಿದ್ದರು. ಆದರೂ ತುಂಬಿದ ಸಂಸಾರದಲ್ಲಿ ಬೆಳೆದು, ದೊಡ್ಡ ಮನೆಯನ್ನು ಸೇರಿದ್ದ ಆಕೆಗೆ ಕಾಲ ಕಳೆಯುವುದು ತುಂಬಾ ಕಷ್ಟವಾಗಿತ್ತು.

ಕಮಲಮ್ಮನವರು ಮೀರಳನ್ನು ಸಂಭ್ರಮದಿಂದ ಸ್ವಾಗತಿಸಿದರು. ಊಟಕ್ಕೆ ಮತ್ತೊಂದು ಪಲ್ಯ ಮಾಡಿ ಹಪ್ಪಳ, ಸಂಡಿಗೆ ಕರಿದರು.

" ಯಾಕಮ್ಮಾ ಬಡವಾಗಿದೀಯಾ ? " ಎಂದು ಅಕ್ಕರೆಯಿಂದ ವಿಚಾರಿಸಿ

" ಊಟಕ್ಕೇಳು. ಎಷ್ಟು ಹಸಿವಾಗಿದೆಯೋ " ಎಂದು ಕಮಲಮ್ಮ ಬಲವಂತದಿಂದ ಅವಳನ್ನು ಊಟಕ್ಕೆಬ್ಬಿಸಿದರು.

ಮೀರ ಊಟ ಮಾಡುತ್ತಿದ್ದಂತೆ " ಎರಡು ತಿಂಗಳು ಇಲ್ಲೇ ಇರು. ನನಗೂ ಒಬ್ಬಳೇ ಇದ್ದು ಬೇಜಾರಾಗಿದೆ " ಎಂದರು ಕಮಲಮ್ಮ.

" ಶ್ರೀಹರಿಗೆ ಮದುವೆ ಮಾಡಿ ಅವನ ಹೆಂಡತೀನ ಇಲ್ಲೇ........ "

'' ಸರಿ. ಅವರಿಗೆ ಮದುವೆ ಮಾಡಿದ ಮೇಲೆ ಅವರವರ ಹೆಂಡತೀರನ್ನ ಕಟ್ಟಿಕೊಂಡು ತಮ್ಮ ಪಾಡಿಗೆ ತಾವು ಓಡಿಹೋಗ್ತಾರೆ.''

'' ಮತ್ತೆ ಮದುವೆ ಮಾಡಿಕೊಳ್ಳೋದು ಯಾಕೆ? ನಿಮ್ಮ ಹತ್ತಿರ ಬಿಡಕ್ಕೇನು ?''

'' ಬೇಡ ತಾಯಿ. ಗಂಡ ಹೆಂಡತಿ ಅವರು ಸುಖವಾಗಿ ಎಲ್ಲಾದರೂ ಇರಲಿ. ನನಗೆ ಅಷ್ಟು ಸಾಕು. ಆದರೆ ಶ್ರೀಪಾದೂದೆ ನನಗೆ ಯೋಚನೆಯಾಗಿದೆ. ಒಂದೊಂದು ಸಲ ಕೆಲಸ ಬಿಟ್ಟಾದರೂ ಬಂದುಬಿಡೂಂತ ಕಾಗದ ಬರೆಯಲೇಂತ ಯೋಚನೆ ಮಾಡ್ತೀನಿ.''

'' ಶ್ರೀಪಾದು ಎಷ್ಟಾಗಲಿ ನಿಮ್ಮ ಕೈಗೂಸಲ್ಲವೇ ? ಇಪ್ಪತ್ತನಾಲ್ಕು ವರ್ಷದ ಹಾಲುಗಲ್ಲದ ಕಂದ '' ಮೀರ ದೊಡ್ಡಮ್ಮನನ್ನ ಕೀಟಲೆ ಮಾಡಿದಳು.

ಊಟವಾದ ಸ್ವಲ್ಪ ಹೊತ್ತಿನವರೆವಿಗೆ ಮೀರ ದೊಡ್ಡಮ್ಮನೊಡನೆ ಹರಟೆ ಹೊಡೆಯುತ್ತಿದ್ದು ಅನಂತರ

'' ನನ್ನ ಸ್ನೇಹಿತೆಯೊಬ್ಬಳ ಮನೆಗೆ ಹೋಗ್ಬಿಟ್ಟು ಬರ್ತೀನಿ" ಎಂದಳು.

'' ಈ ಬಿಸಲಿನಲ್ಲಿ ಹೋಗ್ತೀಯಾ ?''

'' ಸಂಜೆ ಅವಳು ಸಿಕ್ತಾಳೋ ಇಲ್ಲವೋ ? ಸಂಜೆ ಸಮಾಜಕ್ಕೆ ಹೊರಟುಹೋಗಿರುತ್ತಾಳೆ.''

'' ಛತ್ರೀನಾದರೂ ತಗೊಂಡು ಹೋಗು.''

'' ಬೇಡ ದೊಡ್ಡಮ್ಮ.'' ಎನ್ನುತ್ತಾ ಮೀರಾ ಹೊರಟಳು. ಅವಳು ಮಹಾರಾಣಿ ಕಾಲೇಜು ಸೇರಿದಾಗ ಮಧ್ಯಾನ್ಹ ಒಂದು ಗಂಟೆಯಾಗಿತ್ತು. ರಜಾ ದಿನವಾದುದರಿಂದ ಕಾಲೇಜು ಮೌನವಾಗಿ ತಪಸ್ಸು ಮಾಡುತ್ತಿರುವಂತೆ ತೋರಿತು. ಐದೂವರೆ ವರ್ಷಗಳ ಹಿಂದೆ ತಾನು ಅದೇ ಕಾಲೇಜಿನ ಅಚ್ಚುಮೆಚ್ಚಿನ ವಿದ್ಯಾರ್ಥಿನಿಯಾಗಿದ್ದುದನ್ನು ಮೀರ ನೆನೆದಳು. ಚರ್ಚಾಕೂಟಗಳಲ್ಲಿ, ಆಟಗಳ ಸ್ಪರ್ಧೆಯಲ್ಲಿ, ನಾಟಕಗಳಲ್ಲಿ ಭಾಗವಹಿಸಿ ಪ್ರತಿಯೊಂದರಲ್ಲಿಯೂ ಅನೇಕ ಬಹುಮಾನಗಳನ್ನು ಪಡೆದಿದ್ದ ದೃಶ್ಯಗಳು ಮತ್ತೆ

ಅವಳ ಕಣ್ಣುಗಳ ಮುಂದೆ ಸುಳಿದವು. ಪ್ರತಿಯೊಂದರಲ್ಲಿಯೂ ತನಗೇ ಮೊದಲ ಬಹುಮಾನ. ನಾಟಕಗಳಲ್ಲಿ ವೀರಳೇ ನೂರ್ ಜಹಾನ್, ಸಂಯುಕ್ತಾ.

ಅವಳ ಹೃದಯ ಮಧುರ ನೆನಪುಗಳಿಂದ ಮೃದುವಾಯಿತು. ತಾನು ಮತ್ತೊಮ್ಮೆ ವಿದ್ಯಾರ್ಥಿನಿಯಾಗಬಹುದು. ಮತ್ತೆ ನೂರ್‌ಜಹಾನಳ ಪಾತ್ರ ವಹಿಸಬಹುದು. ಮತ್ತೆ ಮೊದಲ ಬಹುಮಾನ ಗಳಿಸಬಹುದು. ಆದರೆ ಐದೂವರೆ ವರ್ಷಗಳ ಹಿಂದಿನ ವೀರ ತಾನಾಗಲು ಸಾಧ್ಯವೆ? ಏನನ್ನು ಕೊಟ್ಟರೆ ತಾನೇ ಆ ಎಳೆತನ, ಚೈತನ್ಯ, ಉತ್ಸಾಹ ಮತ್ತೆ ಹಿಂತಿರುಗಿ ಬರುತ್ತದೆ?

ಇದೇ ಡ್ರಾಮ ತೆಗೆದುಕೊಳ್ಳುತ್ತಿದ್ದ ಕ್ಲಾಸು. ಉಪಾಧ್ಯಾಯರು ಮಾಡಿದ 'ವೆನಿಸ್ ನಗರದ ವರ್ತಕ' ಈಗಲೂ ನೆನಪಿದೆ. ಅವರನ್ನು ತಾವೇನು ಕಡಿಮೆ ಕೀಟಲೆ ಮಾಡುತ್ತಿದ್ದರೇ? ಪಾಪ! ನಾಟಕ ತೆಗೆದುಕೊಳ್ಳುತ್ತಿದ್ದ ಉಪಾಧ್ಯಾಯರು ಇನ್ನೂ ತರುಣರಾಗಿದ್ದುದ್ದರಿಂದ ಅವರ ಗೋಳು ಯಾರಿಗೂ ಬೇಡ. ಒಂದು ದಿನ ನಾಚಿಕೆ, ಸಂಕೋಚದಿಂದ ಗಾಬರಿಯಾಗಿ ರಾಜೇಶ್ವರಿಯ ಪ್ರಶ್ನೆಗೆ ಉತ್ತರ ಹೇಳಲಾರದೆ ಡಸ್ಟರಿನಿಂದಲೇ ಮುಖವನ್ನು ಒರಸಿಕೊಂಡು ಬಿಟ್ಟಿದ್ದರು.

ಇಲ್ಲಿ ಕನ್ನಡ ಕ್ಲಾಸು—ಕನ್ನಡ ತರಗತಿಯೆಂದರೆ ಹುಡುಗಿಯರಿಗೆಲ್ಲಾ ಚತುರ್ಭುಜ ಬಂದುಬಿಡುತ್ತಿತ್ತು. ಕೊನೆಯ ಬೆಂಚಿನಲ್ಲಿ ಕುಳಿತು 'ಫಿಲಂ ಇಂಡಿಯ', 'ಫಿಲಂ ಫೇರ್' ಓದಿದವರೇ ಹೆಚ್ಚು. ಕನ್ನಡ ತಾನೇ—ಓದದೇ ಇದ್ದರೂ ಪಾಸಾಗುತ್ತದೆ ಎಂದು ಧೋರಣೆ ತಾಳಿದ್ದ ವಿನೋದ ಕನ್ನಡದಲ್ಲೇ ಫೇಲಾಗಿದ್ದಳು.

ವಿರಾಮಕಾಲದಲ್ಲಿ ಎಲ್ಲರೂ ಬಿಸಿಲುಮಚ್ಚಿನ ಮೇಲೆ ಹೋಗಿ ಅದೀಬಳನ್ನು ಪೀಡಿಸಿ ಅವಳಿಂದ 'ಬೈಜೂ ಬಾವರಾ' ಹಾಡುಗಳನ್ನು ಹಾಡಿಸಿ ಕಲಿಯಲು ಪ್ರಯತ್ನಿಸುತ್ತಿದ್ದರು. 'ಗಂಗಾ ಕೀ ಮೌಜ್ ಮೇ' ಹಾಡು ಕಲಿಯದಿದ್ದರೆ ತನ್ನ ಜೀವನವೇ ವ್ಯರ್ಥ ಎಂದು ಭಾವಿಸಿದ್ದ ಯಶೋದ ಈಗ ಎಲ್ಲಿದಾಳೋ? 'ಡಿಕ್ಷನ್ ಡಿ ಅನ್ನಿಯಟ್‌ನಲ್ಲೋ' ಎಂಬುದಕ್ಕೆ ಬದಲಾಗಿ 'ಲಾಜಿಕ್ ಓದಿ ನಾನ್ ಕೆಟ್ಟೆನಲ್ಲೋ' ಎಂದು ಬೋರ್ಡಿನ ಮೇಲೆ ಬರೆದಿದ್ದ ಪೆದ್ದಿ ಪದ್ಮ ಈಗ ದೊಡ್ಡ ಲೇಖಕಿಯಾಗಿದ್ದಾಳೆ. ಇನ್ನೂರ ಹದಿನೆಂಟು ಸೀರೆಗಳ ಒಡತಿ ವನಜಾ 'ದೇವರು ಮಳೆಹನಿಗಳಿಗೆ ಬದಲಾಗಿ ಸೀರೆಗಳನ್ನು ಆಕಾಶದಿಂದ ಉದುರಿಸಬಾರದೆ' ಎನ್ನುತಿದ್ದಳು. ಮತ್ತೊಬ್ಬ ವಿಜಯ

ಲಕ್ಷ್ಮಿ ಪಂಡಿತಳಾಗಲು ಕನಸು ಕಾಣುತ್ತಿದ್ದ ಕನಕ, ಸಿನಿಮಾ ನಟಿಯಾಗಲು ಹಂಬಲಿಸುತ್ತಿದ್ದ ಮೀನಾಕ್ಷಿ ಅವರೆಲ್ಲರೂ ಅವಳ ಮುಂದೆ ಸುಳಿದರು.

ಮೀನಾಕ್ಷಿ ಮದುವೆಯಾಗಿ ಅತ್ತೆಯ ಮನೆ ಸೇರಿದ್ದಳು. ಅವಳು ಸಿನಿಮಾ ನಟಿಯಾಗಲು ಕಾಣುತ್ತಿದ್ದ ಕನಸು ಒಂದು ವಿಧದಲ್ಲಿ ಪೂರ್ಣವಾಗಿತ್ತು. ಅಲಂಕಾರಪ್ರಿಯೆ ಮೀನಾಕ್ಷಿಯನ್ನು ಅವಳತ್ತೆ "ಸಾಕು ಸುಮ್ಮನಿರು. ಸಿನಿಮಾ ನಟಿಯ ಹಾಗೆ ಅಲಂಕಾರ ಮಾಡಿಕೊಳ್ಳೊದನ್ನ ಬಿಟ್ಟರೆ ನಿನಗೇನು ತಿಳಿಯುತ್ತದೆ" ಎಂದು ಮೂದಲಿಸುತ್ತಿದ್ದರಂತೆ.

ಮೀರ ಒಂದು ಚೀಟಿಯಲ್ಲಿ ತಾನು ಇಂಟರ್ ಪಾಸ್ ಮಾಡಿದ ವರ್ಷದ ರಿಜಿಸ್ಟರ್ ನಂಬರನ್ನು ಗುರುತುಹಾಕಿ ಕೊಟ್ಟಳು. ಗುಮಾಸ್ತರು 'ನಾಡಿದ್ದು ಬನ್ನಿ' ಎಂದರು.

ಮೀರ ಮನೆಗೆ ಬಂದಾಗ ಕಮಲಮ್ಮನವರು ತಿಂಡಿ ಮಾಡುತ್ತಿದ್ದರು. ಮೀರ ಬಂದುದನ್ನು ನೋಡಿ

"ನನ್ನ ಸ್ನೇಹಿತೆ ಸಿಕ್ಕಿದಳೇ" ಎಂದರು.

"ಹೂಂ" ಎಂದು ಮೀರ ಮಾತು ಬದಲಾಯಿಸಿದಳು.

ಮೀರಳಿಗೆ ಸಂಜೆ ಮನೆಯಲ್ಲಿಯೇ ಕಾಲ ಕಳೆಯಲು ಬೇಸರವಾಯಿತು. ನರ್ಮದೆಯ ಮನೆಗೆ ಹೋಗೋಣವೆಂದರೆ ಅವಳು ಅಕ್ಕನ ಮನೆಯಲ್ಲಿ ಎರಡು ದಿನವಿದ್ದು ಬರಲು ಬೊಂಬಾಯಿಗೆ ಹೊರಟು ಹೋಗಿದ್ದಳು. ಮಾರನೆಯ ದಿನ ದೊಡ್ಡಮ್ಮನ ಹಿಂದೆ, ಮುಂದೆ ಸುತ್ತಾಡುತ್ತಾ ಮೀರ ಕಾಲ ಕಳೆದಳು.

ಇಂಟರ್ ಸರ್ಟಿಫಿಕೇಟನ್ನು ಪಡೆದು ಮೆಡಿಕಲ್ ಕಾಲೇಜಿಗೆ ಅಪ್ಲಿಕೇಷನ್ ಹಾಕಿದ ಮಧ್ಯಾಹ್ನವೇ ಮೀರ ಹಳ್ಳಿಗೆ ಹೊರಟಳು.

"ಎರಡು ದಿನ ಗಂಡನ್ನ ಬಿಟ್ಟದ್ದಕ್ಕೇ ಬೇಜಾರಾಯಿತೇ?" ಎಂದು ಕಮಲಮ್ಮನವರು ಮೀರಳನ್ನು ಹಾಸ್ಯಮಾಡಿದರು.

"ಹೇಗಿದ್ದರೂ ಪುನಃ...." ಎಂದು ಹೇಳುತ್ತಾ ಮೀರ ನಾಲಿಗೆ ಕಚ್ಚಿಕೊಂಡು "ಯಾವಾಗಲಾದರೂ ಬಂದರಾಯಿತು" ಎಂದಳು.

ಹಳ್ಳಿಗೆ ಹೊರಟಾಗ ಅವಳ ಹೃದಯ ಎಂದಿಗಿಂತಲೂ ಸ್ವಲ್ಪ ಹಗುರವಾಗಿದ್ದರೂ ಚಿಂತೆಯ ಕೀಟ ಅವಳನ್ನು ಕೊರೆಯುತ್ತಿತ್ತು. ಮೆಡಿಕಲ್ ಕಾಲೇಜಿಗೆ ಪ್ರವೇಶ ಸಿಗುವುದು ಅತ್ಯಂತ ಕಠಿನವೆಂಬುದು ಅವಳಿಗೆ ತಿಳಿದಿತ್ತು. ವಿದ್ಯಾರ್ಥಿಗಳ ಬುದ್ಧಿ, ಆಸಕ್ತಿ, ಪರೀಕ್ಷೆಯಲ್ಲಿ ಪಡೆದ ನಂಬರು ಇವುಗಳನ್ನು ಅನುಸರಿಸಿ ಪ್ರವೇಶ ಕೊಡುವುದಾದರೆ ಮೀರಳಿಗೆ ಸ್ಥಾನ ಸಿಕ್ಕು

ತ್ತಿದ್ದುದರಲ್ಲಿ ಯಾವ ಸಂಶಯವೂ ಇರಲಿಲ್ಲ. ಆದರೆ ಬುದ್ಧಿಗಿಂತಲೂ ಗಣ್ಯವ್ಯಕ್ತಿಗಳ ಪ್ರಭಾವ, ಜಾತಿ ಮುಖ್ಯವಾಗಿದ್ದುದರಿಂದ ಮೀರಳ ಮನಸ್ಸು ವ್ಯಾಕುಲಗೊಂಡಿತ್ತು. ಅದರಲ್ಲೂ ಎಲ್ಲ ವೃತ್ತಿಗಿಂತಲೂ ಅತ್ಯಂತ ಜವಾಬ್ದಾರಿಯುಳ್ಳ ವೈದ್ಯ ವೃತ್ತಿಯಲ್ಲಿ ಜಾಣ್ಮೆಗಿಂತಲೂ ಜಾತಿಯನ್ನು ನೋಡುವುದರಲ್ಲಿ ಯಾವ ಅರ್ಥವಿದೆ? ವೈದ್ಯರಲ್ಲಿ ಭರವಸೆಯಿಟ್ಟು ರೋಗದಿಂದ ನರಳುವ ವ್ಯಕ್ತಿ ತನ್ನ ಜೀವನದ ಆಸೆ, ಆಕಾಂಕ್ಷೆಗಳನ್ನೆಲ್ಲಾ ವೈದ್ಯನ ಚಾತುರ್ಯದ ಮೇಲೆ ಹೊರಿಸಿ ಅವನ ಬಳಿಗೆ ಕಂಗೆಟ್ಟು ಅನಾಥನಂತೆ ಬಂದಾಗ, ಸರಿಯಾಗಿ 'ಡಯೋಗ್ನೋಸ್' ಮಾಡಲು ಬಾರದ ವೈದ್ಯ ರೋಗದ ಮೂಲ ಕಾರಣ ತಿಳಿಯಲಾರದೇ ಬೇರೊಂದು ರೀತಿ ಅರ್ಥಮಾಡಿಕೊಂಡು ಔಷಧಿ ಕೊಟ್ಟರೆ ಗತಿಯೇನು? ಶಸ್ತ್ರಚಿಕಿತ್ಸೆ ಎಂತಹ ಜವಾಬ್ದಾರಿಯ ಕೆಲಸ! ರೋಗಿಯ ಬದುಕು ಸಾವು ವೈದ್ಯನ ಕೈಯಲ್ಲಿರುವ ಚಾಕು, ಕತ್ತರಿಗಳ ಪ್ರಯೋಗದಲ್ಲಿ ರುವುದಿಲ್ಲವೇ? ವೈದ್ಯ ವೃತ್ತಿಯಂತಹ ಗುರುತರ ಕೆಲಸದಲ್ಲಿಯೂ ಜಾತಿ, ಪ್ರಭಾವ ನೋಡುವುದೇ?

ಮೀರಳ ವಿಚಾರಲಹರಿ ಒಂದೇ ದಿಕ್ಕಿನಲ್ಲಿ ಓಡುತ್ತಿತ್ತು. ಈ ಅನ್ಯಾಯಗಳಿಗೆ ಕೊನೆ ಎಂದಿಗೆ? ಬೇಲಿಯೇ ಹೊಲ ಮೇಯಲು ಹೊರಟ ರೇನು ಗತಿ? ರಕ್ಷಿಸಬೇಕಾದವರೇ ಭಕ್ಷಿಸತೊಡಗಿದರೆ ಕಾಪಾಡುವವರು ಯಾರು?

ಮೀರಳ ಮನಸ್ಸು ಸಂತಾಪದಿಂದ ಉರಿಯಿತು. ದೇಶವನ್ನೆಲ್ಲಾ ಒಟ್ಟಿಗೆ ಸುಟ್ಟು ಭಸ್ಮಮಾಡಿ, ಹೊಸ ರಾಜ್ಯ ನಿರ್ಮಾಣ ಮಾಡಿದರೇ ಹೊಸ ಭಾವನೆಗಳು ಸಾಧ್ಯವೇನೋ ಎನಿಸಿತು.

ಒಂದು ಪಕ್ಷ ತನಗೆ ಕಾಲೇಜಿನಲ್ಲಿ ಪ್ರವೇಶ ಸಿಗದಿದ್ದರೆ? ಅದೊಂದು ಹಂಬಲದಿಂದಲೇ ಮೀರ ಬದುಕಿಗೆ ಇನ್ನೂ ಹತ್ತಿಕೊಂಡಿದ್ದಳು. ವೈದ್ಯಳಾಗಬೇಕೆಂಬ ಆಶಾಸೂತ್ರ ಮೀರಳನ್ನು ಬಾಳ್ವೆಯ ಕಂಭಕ್ಕೆ ಬಿಗಿದಿತ್ತು.

ಮೀರ ಯಾವಾಗ ಹಿಂತಿರುಗಿ ಬರುವಳೆಂಬುದು ಹಳ್ಳಿಯಲ್ಲಿ ಯಾರಿಗೂ ತಿಳಿದಿರಲಿಲ್ಲ. ನೆತ್ತಿಯ ಮೇಲೆ ಸೂರ್ಯ ಸುಡುತ್ತಿದ್ದುದರಿಂದ ಮೀರ ಗಾಡಿ ಮಾಡಿಕೊಂಡು ಹಳ್ಳಿಯನ್ನು ತಲುಪಿದಳು.

ಅವಳು ಮನೆ ಸೇರಿದಾಗ ಶಾಮು ಇನ್ನೂ ಮನೆಗೆ ಬಂದಿರಲಿಲ್ಲ. ಮೀರ ಒಳಗೆ ಬಂದು ಆರಾಮುಕುರ್ಚಿಯಲ್ಲಿ ಕುಳಿತಳು. ವೆಂಕಮ್ಮನವರು ಅವಳ ಬಳಿ ನಿಂತು ಹಿಗ್ಗಿನಿಂದ

"ಒಂದು ಕಾಗದ ಬರೆದಿದ್ದರೆ ಶಾಮು ಗಾಡಿ ಕಳಿಸುತ್ತಿದ್ದ. ಎರಡು

ದಿನ ನೀನು ಮನೆ ಬಿಟ್ಟು ಹೋಗಿದ್ದಕ್ಕೆ ಮನೆಯೆಲ್ಲಾ ಬಿಕೋಂತಿತ್ತು. ನೀನು ಬಂದ ಮೇಲೆ ಎಷ್ಟೋ ಕಳೆ ಬಂತು" ಎಂದರು.

ಮೀರ ಕಣ್ಣು ಮುಚ್ಚಿ ಸುಮ್ಮನೆ ಒರಗಿದ್ದಳು.

"ಸಧ್ಯ ನಿನ್ನ ಗಂಡನ್ನ ನೀನೇ ಒಪ್ಪಿಸಿಕೋ ತಾಯಿ. ಎರಡು ದಿನದಿಂದ ಅವನು ಸರಿಯಾಗಿ ಮನೆಗೇ ಬರುತ್ತಿಲ್ಲ. ನಿನ್ನೆ ದಿನ ಅವನು ಬೆಳಗಿನ ಊಟಕ್ಕೆ ಮನೆಗೆ ಬಂದಾಗ ಸಂಜೆ ಐದು ಗಂಟೆಯಾಗಿತ್ತು. ರಾತ್ರಿ 'ಹಸಿವಿಲ್ಲ' ಎಂದು ಹೇಳಿ ಹಾಗೇ ಮಲಗಿಬಿಟ್ಟ."

ಮೀರ ಕಣ್ಣು ಬಿಟ್ಟು "ಇವತ್ತಿನ್ನೂ ಊಟಕ್ಕೆ ಬಂದಿಲ್ಲವೇ?" ಎಂದಳು.

"ಇಲ್ಲ."

ಮೀರ ಎದ್ದು ನಿಂತು ಕೂಗಿದಳು "ಬೋರಾ, ಬೋರಾ."

ಕೊಟ್ಟಿಗೆಯಲ್ಲಿ ಕೆಲಸ ಮಾಡುತ್ತಿದ್ದ ಬೋರ ಓಡಿ ಬಂದ.

"ರಾಯರನ್ನು ಊಟಕ್ಕೆ ಕರೆದುಕೊಂಡು ಬಾ."

ಬೋರ ಹೊರಟಮೇಲೆ ವೆಂಕಮ್ಮನವರು ಹಿಂದಿನಿಂದ ಕೂಗಿ ಹೇಳಿದರು, "ಅಮ್ಮಾವರು ಹೇಳಿದರೂಂತ ಹೇಳೋ."

ಬೋರ ಶಾಮುವನ್ನು ಕರೆದುಕೊಂಡು ಬರುವಾಗ ಮೂರು ಗಂಟೆಯಾಗಿತ್ತು. ಶಾಮುವಿನ ಮುಖ ಬಿಸಲಿನ ಝಳಕ್ಕೆ ಕೆಂಪಾಗಿತ್ತು. ಕಣ್ಣುಗಳಲ್ಲಿ ಆಯಾಸ ತೇಲುತ್ತಿತ್ತು.

ಶಾಮು ಒಳಗೆ ಬಂದೊಡನೆ ಮೀರ ತಾನೇ ಒಳಗೆ ಹೋಗಿ ತಟ್ಟೆ ಹಾಕಿ ನೀರಿಟ್ಟಳು. ಶಾಮು ಊಟಕ್ಕೆ ಬಂದು ಕಳಿತ. ಮೀರ ಅವನಿಗೆ ಸ್ವಲ್ಪ ದೂರದಲ್ಲಿ ಕುಳಿತಳು.

ತಾನು ಮೈಸೂರಿಗೆ ಹೋಗುವುದನ್ನು ಶಾಮು ಮನಸ್ಸಿಗೆ ತುಂಬಾ ಹಚ್ಚಿಕೊಂಡಿರುವುದು ಮೀರಳಿಗೆ ತಿಳಿದಿತ್ತು. ಅವನಿಗೆ ಎರಡು ಸಮಾಧಾನದ ಮಾತು ಹೇಳಬೇಕೆನ್ನಿಸಿತು. ಆದರೆ ಶಾಮು ಅವಳ ಪ್ರಶ್ನೆಗಳಿಗೆಲ್ಲಾ ಮೊಟಕಾಗಿ ಉತ್ತರ ಕೊಟ್ಟದ್ದುದರಿಂದ ಅವಳನ್ನು ಸಂಭಾಷಣೆಗೆಳೆಯುವುದು ಸಾಧ್ಯವಾಗಲಿಲ್ಲ.

ಆದರೆ ರಾತ್ರಿಯೂ ಸುಮ್ಮನಿರುವುದು ಅವಳಿಗಾಗಲಿಲ್ಲ. ರಾತ್ರಿ ಮೀರ ತಾನಾಗಿಯೇ ಮಾತಿಗಾರಂಭಮಾಡಿದಳು. ಅವರಿಬ್ಬರ ನಡುವೆ ಮಿಣುಕು ದೀಪ ಅತ್ತಿಂದಿತ್ತ ಒಲೆದಾಡುತ್ತಿತ್ತು—ಇಬ್ಬರ ಮಾತುಗಳನ್ನೂ ಕೇಳಿಸಿಕೊಳ್ಳುವಂತೆ.

"ನೀವೇಕೆ ಹೀಗೆ ಮಾಡ್ತೀರಿ?"

"ಹೇಗೆ ಮಾಡ್ತಿದೀನಿ?"

"ನಿನ್ನೆ ದಿನ ಸಂಜೆ ಐದು ಗಂಟೆಗೆ ಊಟ ಮಾಡಿದಿರಂತೆ. ರಾತ್ರಿ ಊಟ ಮಾಡಲೇ ಇಲ್ಲವಂತೆ........"

ಶಾಮು ಮಾತನಾಡಲಿಲ್ಲ. ಮೀರ ಮುಂದುವರಿಸಿದಳು.

"ನನಗೆ ಗೊತ್ತು ನೀವು ಯಾಕೆ ಹೀಗೆ ಮಾಡ್ತೀರೀಂತ. ನಾನು ಮೆಡಿಕಲ್‌ಗೆ ಹೋಗುವುದು ನಿಮಗಿಷ್ಟವಿಲ್ಲ...."

"ಛೇ ನೀನು ನೆಮ್ಮದಿಯಿಂದಿರೋದು ನನಗೆ ಮುಖ್ಯ"ಶಾಮು ನಡುವೆ ಬಾಯಿ ಹಾಕಿ ಹೇಳಿದ.

"ನಿಮಗೆ ನಾನು ನೆಮ್ಮದಿಯಿಂದಿರೋದು ಬೇಕಾಗಿದೆ. ಅಲ್ವೆ?"

"ಹೌದು."

"ನನ್ನ ನೆಮ್ಮದಿಗಾಗಿ, ಸುಖಕ್ಕಾಗಿ ನೀವೇನು ಮಾಡಲೂ ಸಿದ್ಧವಾಗಿ ದೀರಾ ?"

"ಹೂಂ."

"ಹಾಗಾದರೆ ನೀವು ಹೀಗೆ ಕೊರಗು ಹಚ್ಚಿಕೊಂಡರೆ ನನ್ನ ನೆಮ್ಮದಿ ಭಂಗವಾಗುತ್ತದೆ. ನೀವು ಹೊತ್ತಿಗೆ ಸರಿಯಾಗಿ ಊಟ ತಿಂಡಿಗೆ ಬರದಿದ್ದರೆ ನನಗೆ ಸಂತೋಷವಿರುವುದಿಲ್ಲ."

"...........".

"ನಾನು ನಿಮ್ಮ ಮೇಲೆ ಕೋಪಿಸಿಕೊಂಡು ಕಾಲೇಜು ಸೇರಲು ಹೋಗು ತ್ತಿಲ್ಲ. ಈ ಹಳ್ಳಿಯಲ್ಲಿ ಹೇಗೆ ಕಾಲ ಕಳೆಯಬೇಕೋ ನನಗೆ ತಿಳಿಯುತ್ತಿಲ್ಲ. ಹಳೆಯ ನೆನಪುಗಳಿಂದ ಮುಕ್ತಳಾಗಲು ನನಗಿರುವ ದಾರಿ ಇದೊಂದು ಮಾತ್ರ. ನನ್ನ ಬುದ್ಧಿ, ಮನಸ್ಸಿಗೆ ವಿರಾಮ ಕೊಡದೆ ದುಡಿಯಬೇಕು. ಮೆಡಿಕಲ್ ಮುಗಿಸಿ ಸಾಧ್ಯವಾದರೆ ಹಳ್ಳಿಗೇ ಹಿಂದಿರುಗಿ ಕೆಲಸ ಮಾಡುವ ಅಪೇಕ್ಷೆಯಿದೆ...."

ಶಾಮು ತಟ್ಟನೆ ಮೀರಳ ಕೈ ಹಿಡಿದು ಕಣ್ಣರಳಿಸಿ

"ನಿಜವೇ ?" ಎಂದ.

ಮಗುವಿನಂತೆ ಆಶ್ಚರ್ಯಗೊಂಡಿದ್ದ ಶಾಮುವಿನ ಮುಖ ನೋಡಿ ಮೀರ ನಸುನಕ್ಕು

"ಈಗಂತೂ ಹಾಗೆ ಯೋಚಿಸಿದೀನಿ. ಮುಂದೇನಾಗುವುದೋ ಹೇಳ ಲಾರೆ. ಈ ಗಳಿಗೆ ನಮ್ಮದು. ನಾಳೆಯಲ್ಲಿ ನನಗೆ ನಂಬಿಕೆಯಿಲ್ಲ. ಮೆಡಿಕಲ್

ಮುಗಿಯುವವರವಿಗೆ ನಾನು ಬದುಕಿದ್ದರೆ ಇಲ್ಲಿಗೇ—ನಿಮ್ಮಲ್ಲಿಗೇ-ಬರುತ್ತೇನೆ. ಹೆಂಡತಿಯಂತಲ್ಲ—ಗೆಳತಿಯ ಹಾಗೆ. ಆದರೆ ನಾನು ಯಾವ ಕೆಲಸವೂ ಇಲ್ಲದೆ ನಿಮ್ಮ ಸುಖವೇ ನನ್ನ ಸುಖ ಎಂದು ತಿಳಿದು ಇಲ್ಲಿಯೇ ಇರಲಾರೆ. ಗಂಡನೇ ನನ್ನ ದೇವರು, ಅವನ ಸುಖ ತನ್ನ ಸುಖ ಎಂದು ಭಾವಿಸುವ ಕಾಲ ಹೋಯಿತು. ಹೆಂಗಸು ತನ್ನ ಪತಿಗಿಂತಲೂ ತನ್ನ ವ್ಯಕ್ತಿತ್ವ, ಅಭಿಪ್ರಾಯ, ಆತ್ಮವನ್ನು ಪ್ರೀತಿಸುತ್ತಾಳೆ. ನನ್ನ ಮಹದಾಸೆಯನ್ನು ನೀವು ಗೌರವಿಸುತ್ತಿರುವುದಕ್ಕಾಗಿ ನಾನು ಅತ್ಯಂತ ಕೃತಜ್ಞಳು."

ಶಾಮು ಮೌನವಾಗಿ ದೀಪವನ್ನು ನೋಡುತ್ತಾ ಕುಳಿತಿದ್ದ. ಮೀರ ಆಡಿದ ಮಾತುಗಳಲ್ಲಿ ಒಂದು ವಾಕ್ಯ ಅವನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿತು.

"ನಾನು ಹಳ್ಳಿಗೇ ಬಂದು ಕೆಲಸ ಮಾಡುತ್ತೇನೆ."

ಅದೊಂದು ವಾಕ್ಯ ಅವನಿಗೆ ಚೈತನ್ಯವನ್ನು ನೀಡಿತ್ತು.

"ನೀವು ಕೊರಗಬಾರದು. ನೀವು ಸಂತೋಷವಾಗಿಯೇ ನನ್ನನ್ನು ಕಳುಹಿಸಿಕೊಡಿ. ಆಗ ನನಗೂ ಮನಸ್ಸಿಗೆ ಸಮಾಧಾನವಿರುತ್ತದೆ."

ಶಾಮು ಉತ್ತರ ಕೊಡದಿದ್ದರೂ ಅವನ ಮನಸ್ಸು ಸಮಾಧಾನಗೊಂಡಿತ್ತು. ಕುದಿಯುತ್ತಿದ್ದ ಅವನ ಮನಸ್ಸು ಮೀರಳ ತಂಗಾಳಿಯಂತಹ ಮಾತುಗಳನ್ನು ಕೇಳಿ ಶಾಂತವಾಯಿತು.

* * * *

ಮಾರನೆಯ ದಿನದಿಂದ ಮೀರಳಿಗೆ ಅಂಚೆಯವನನ್ನು ನೋಡುವುದೇ ಒಂದು ದೊಡ್ಡ ಕೆಲಸವಾಯಿತು. ಊಟ, ತಿಂಡಿ, ನಿದ್ದೆ ಎಲ್ಲವನ್ನೂ ಮರೆತು ಪೋಸ್ಟಿನ ದಾರಿ ಕಾಯುತ್ತಾ ಕುಳಿತುಬಿಟ್ಟಿದ್ದಳು.

ಮೈಸೂರಿನಿಂದ ಮೀರ ಬಂದನಂತರ ಅವಳು ಯಾವಾಗಲೂ ಅನ್ಯಮನಸ್ಕಳಾಗಿರುವುದನ್ನು ವೆಂಕಮ್ಮನವರು ಮೊದಲು ಗಮನಿಸಿದರು. ಎಷ್ಟೋ ಬಾರಿ "ಹೋದ ಮಗಳ ಚಿಂತೆಯಿರಬೇಕು" ಎನಿಸಿದರೂ ಅವರ ಮನಸ್ಸು "ಊಹೂಂ. ಇರಲಾರದು. ಬೇರಾವುದೋ ಚಿಂತೆ ಇರಬೇಕು" ಎಂದು ನುಡಿಯುತ್ತಿತ್ತು.

ವೀಣಳ ನೆನಪು ಮೀರಳ ಹೃದಯವನ್ನು ಹಿಂಡಿದಾಗ ಅವಳು ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿಬಿಡುತ್ತಿದ್ದಳು. ಮುಖದಲ್ಲಿ ದುಃಖ, ನಿರಾಶೆಯ ಹೊರತು ಬೇರಾವ ಭಾವನೆಗಳಿಗೂ ಅವಕಾಶವಿರುತ್ತಿರಲಿಲ್ಲ.

ಆದರೆ ಈಗ ನೆಪಮಾತ್ರಕ್ಕೆ ಕೈಲಿ ಪುಸ್ತಕವಿರುತ್ತಿತ್ತು. ಆಗಾಗ್ಗೆ

ಆಸೆಯ ಹೊಂಬೆಳಕು ಅವಳ ಬೊಗಸೆಗಂಗಳಲ್ಲಿ ಮಿಂಚಿ ಮರೆಯಾಗುತ್ತಿತ್ತು. ಕಣ್ಣುಗಳನ್ನು ಕವಿದಿದ್ದ ದುಃಖದ ತೆರೆಯನ್ನು ಸರಿಸಿ ಆಸೆಯ ದೀಪ ಬೆಳಕನ್ನೆರಚಿ ಮತ್ತೆ ಮಂಕಾಗುತ್ತಿತ್ತು.

ಮೀರ ಅತ್ಯಂತ ಆತುರ, ಕಳವಳದಿಂದ ನಿರೀಕ್ಷಿಸುತ್ತಿದ್ದ ದಿನ ಕೊನೆಗೂ ಬಂದಿತು. ಮೀರಳ ಹೆಸರಿಗೆ ಬಂದಿದ್ದ ಲಕೋಟೆಯೊಂದನ್ನು ಅಂಚೆಯವನು ಅವಳ ಕೈಗಿತ್ತು ಹೊರಟುಹೋದ. ಮೀರ ನಡುಗುವ ಕೈಗಳಿಂದ ಕವರನ್ನು ಒಡೆದಳು.

ಪತ್ರದಲ್ಲಿ ಒಂದು ನಿರ್ದಿಷ್ಟ ದಿನವನ್ನು ತಿಳಿಸಿ, ಆ ದಿನ ಚುನಾವಣಾ ಸಮಿತಿಯವರೊಡನೆ 'ಇಂಟರ್‌ವ್ಯೂ'ಗೆ ಬರಬೇಕೆಂದು ತಿಳಿಸಿತ್ತು. ತನ್ನ ಬದುಕಿನಾಸೆ ಅವರ ಕೈಲಿದೆ ಎಂದರಿತ ಮೀರಳ ಮನಸ್ಸು ಸಂದೇಹದ ಸುಳಿಗೆ ಸಿಕ್ಕಿ ತಿರುಗಿತು.

ಶಾಮು ಬಂದೊಡನೆ ಮೀರ ಮಾತನಾಡದೇ ಕಾಗದವನ್ನು ಅವನ ಕೈಲಿಟ್ಟಳು. ಶಾಮು ಕಾಗದ ಓದಿಕೊಂಡ. ಮೀರ ಪರೀಕ್ಷಕಳಂತೆ ಅವನ ಮುಖವನ್ನೇ ನೋಡುತ್ತಿದ್ದಳು. ತುಟಿ ಸೊಟ್ಟುಮಾಡಿ ಶಾಮು ನಕ್ಕು 'ಸಂತೋಷ' ಎಂದ. ಶಾಮುವಿನ ಬಾಯಿ ಸೊಟ್ಟಾಗುವುದಕ್ಕೆ ಮುಂಚೆಯೇ ಹಣೆಯ ಮೇಲೆ ಮೂಡಿದ ನೋವಿನ ಗೆರೆಯನ್ನು ಮೀರಳ ಚುರುಕು ಕಣ್ಣುಗಳು ಗುರುತಿಸಿದ್ದವು.

"ಯಾವತ್ತು ಹೋಗಲಿ?"

"ನಿನ್ನಿಷ್ಟ"

"ಹೀಗೆಲ್ಲಾ ಹೇಳಿದರೆ ಆಗೋದಿಲ್ಲ. ಸರಿಯಾಗಿ ಹೇಳಿ."

"ಇಂಟರ್‌ವ್ಯೂಗೆ ಹಿಂದಿನ ದಿನ ಹೋಗು."

"ಆಗಲಿ."

ಮೀರ ಎರಡನೆಯ ಬಾರಿ ಮೈಸೂರಿಗೆ ಹೊರಟಾಗ ವೆಂಕಮ್ಮನವರಿಗೆ ಅನುಮಾನವಾಯಿತು. ಒಂದು ತಿಂಗಳಿನೊಳಗೆ ಎರಡು ಸಲ ಮೈಸೂರಿಗೆ ಹೋಗುವ ಕಾರಣವಾದರೂ ಏನು? ತಮ್ಮ ಕುತೂಹಲವನ್ನು ಅದುಮಿಡಲಾರದೇ ವೆಂಕಮ್ಮನವರು ಕೇಳಿದರು.

"ಇದೇನು ತಾಯಿ. ಇಷ್ಟು ಬೇಗ ಪುನಃ ಹೊರಟುಬಿಟ್ಟೆ?"

ಮೀರಳಿಗೆ ವಾಸ್ತವಾಂಶ ತಿಳಿಸುವ ಮನಸ್ಸಾಗಲಿಲ್ಲ. ತನಗೆ ಸೀಟು ಸಿಗುವುದೋ ಇಲ್ಲವೋ?

"ಏನೋ ನನಗೆ ಹುಷಾರಿಲ್ಲ. ಸ್ವಲ್ಪ ಔಷಧಿ ತಗೋಬೇಕಿತ್ತು."

" ಏನಾಗಿದೆಯಮ್ಮ ?" ವೆಂಕಮ್ಮನವರು ಗಾಬರಿಯಿಂದ ಕೇಳಿದರು.

" ಗಾಬರಿಯಾಗುವಂತಹದೇನೂ ಇಲ್ಲ. ಡಾಕ್ಟರಿಗೆ ತೋರಿಸಿ ಒಳ್ಳೇ ಟಾನಿಕ್ಕು ತಗೋಬೇಕು ಅಷ್ಟೆ."

" ಹಾಗೇ ಮಾಡಮ್ಮ. ಸರಿಯಾದವರಿಗೆ ತೋರಿಸಿಕೊಂಡು ಬಾ. ಮನೆ ಕಡೆ ಏನೂ ಯೋಚನೆ ಮಾಡಬೇಡ. ನಾನು ಎಲ್ಲಾ ನೋಡಿಕೊಳ್ಳುತ್ತೇನೆ. ಎರಡು ದಿನ ಹೆಚ್ಚು ಕಮ್ಮಿಯಾದರೂ ಪರವಾಗಿಲ್ಲ."

ವೆಂಕಮ್ಮನವರ ಮಾತುಗಳು ಮೀರಳನ್ನು ಅಣಕಿಸಿದವು.

ಮೀರ ಮೈಸೂರಿಗೆ ಎರಡನೆ ಬಾರಿ ಬಂದಾಗ ಕಮಲಮ್ಮನವರಿಗೂ ಆಶ್ಚರ್ಯವಾಯಿತು. ಅವರು ಅದನ್ನು ತೋರಗೊಡದೆ

" ಬಾಮ್ಮ " ಎಂದರು.

ಮಾರನೆಯ ದಿನ ಬೆಳಿಗ್ಗೆ ಮೀರ ಹಿರಿಯವರಿಗೆ ಮಾರ್ಕೆಟ್ಟಿಗೆ ಹೋಗಿ ಬರುವುದಾಗಿ ಹೇಳಿ ಮೆಡಿಕಲ್ ಕಾಲೇಜಿಗೆ ಹೊರಟಳು. ಆಗಲೇ ಅಲ್ಲಿ ಅನೇಕ ಹುಡುಗ, ಹುಡುಗಿಯರು ಬಂದು ಕುಳಿತಿದ್ದರು. ಎಲ್ಲರ ಮುಖದ ಮೇಲೂ ತಳಮಳ, ಅನುಮಾನ, ಭೀತಿ ತಾಂಡವವಾಡುತ್ತಿದ್ದವು. ಅಲ್ಲಿ ಕುಳಿತಿದ್ದವರಲ್ಲಿ ಮೀರಳಿಗೆ ಯಾರ ಪರಿಚಯವೂ ಇರಲಿಲ್ಲ. ಮೀರ ಮೌನವಾಗಿ ಬೆಂಚೊಂದರಮೇಲೆ ಕುಳಿತಳು. ಎಲ್ಲರೂ ಒಬ್ಬರಿಗೊಬ್ಬರು ಸಣ್ಣ ಧ್ವನಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಮೀರಳ ಪಕ್ಕದಲ್ಲಿ ಸುಮಾರು ಇಪ್ಪತ್ತು ವರ್ಷದ ತರುಣಿಯೊಬ್ಬಳು ಕುಳಿತಿದ್ದಳು. ಆಕೆಯ ಮುಖ ನೋಡಿದ ಕೂಡಲೇ ಅವಳು ಮೈಸೂರಿನವಳಲ್ಲವೆಂಬುದು ಮೀರಳಿಗೆ ಗೊತ್ತಾಯಿತು. ಅವಳು ಎರಡು ಜಡೆ ಹೆಣೆದು ಉಂಗರದಂತಿದ್ದ ಲೋಲಾಕುಗಳನ್ನು ಹಾಕಿಕೊಂಡಿದ್ದಳು. ಕಸೂತಿ ಕೆಲಸ ಮಾಡಿದ್ದ ಬಿಳಿಯ ವಾಯಿಲ್ ಸೀರೆ ಯುಟ್ಟು ಕತ್ತು ಮುಚ್ಚುವ ಮೊಳಕೈಯನ್ನು ದಾಟಿದ್ದ ಹಸಿರುಜೋಲಿಯನ್ನು ಹಾಕಿಕೊಂಡಿದ್ದಳು. ಆಕೆ ಮೀರಳನ್ನು ನೋಡಿ ಮುಗುಳ್ನಗೆ ಬೀರಿ ಇಂಗ್ಲೀಷಿನಲ್ಲಿ

" ನಿಮ್ಮ ಹೆಸರೇನು ?" ಎಂದು ಕೇಳಿದಳು.

" ಮೀರ. ತಾವು—?"

" ವಿಜಯ—ಮಿಸ್ ವಿಜಯ ಪರಾಂಜಪೆ."

" ನೀವು ಈ ಊರಿನವರಲ್ಲವೇನೋ ?"

" ಅಲ್ಲ. ನಾನು ಮಹಾರಾಷ್ಟ್ರದವಳು. ನಮ್ಮ ಸ್ಥಳ ಪೂನಾ."

" ಮತ್ತೆ ಇಲ್ಲಿ ಕಾಲೇಜಿಗೆ ಸೇರಲು ಕಾರಣ ?"

"ನಮ್ಮ ತಂದೆಗೆ ಪೂನಾದಲ್ಲಿ ಕೆಲಸವಿತ್ತು. ಅಲ್ಲಿ ರಿಟೈರ್ ಆದನಂತರ ಇಲ್ಲಿಯ ಮಿಲ್ಲಿನಲ್ಲಿ ಮ್ಯಾನೇಜರರ ಕೆಲಸ ಸಿಕ್ಕಿತು. ಇಲ್ಲಿಯೇ ನಾವು ಐದಾರು ವರ್ಷಗಳು ಇರಬೇಕೆಂದು ತೋರುತ್ತದೆ. ಪೂನಾದಲ್ಲಿ ನಾನು ಸೇರಿದರೆ ಹಾಸ್ಟೆಲಿನಲ್ಲಿ ಇರಬೇಕು. ಅದಕ್ಕೋಸ್ಕರ ಇಲ್ಲೇ ಸೇರೋಣವೆಂದು ನಿರ್ಧರಿಸಿದ್ದೇನೆ."

"ನೀವು ಇಂಟರ್ ಮುಗಿಸಿ ಬಂದಿರುವಿರಾ?"

"ಹೌದು. ನೀವು?"

"ನಾನೂ ಅಷ್ಟೆ."

ಅಷ್ಟರಲ್ಲಿ ಇಂಟರ್‌ವ್ಯೂ ಮುಗಿಸಿಕೊಂಡು ಹುಡುಗನೊಬ್ಬ ಹೊರಗೆ ಬಂದ. ಅವನು ಬಂದೊಡನೆ ಇತರ ಹುಡುಗರು ಅವನನ್ನು ಮುತ್ತಿಕೊಂಡರು.

"ಏನು ಕೇಳಿದರೋ, ಏನಾಯಿತೋ, ಯಾರ್ಯಾರಿದ್ದರು?"

ಆ ಹುಡುಗ ಸಪ್ಪೆ ದನಿಯಿಂದ "ಕೆಲಸಕ್ಕೆ ಬಾರದ ಪ್ರಶ್ನೆಗಳನ್ನು ಕೇಳ್ತಾರೆ ಕಣೋ. ಇಂಟರ್‌ವ್ಯೂ ಒಂದು ನಾಟಕ ಅಷ್ಟೆ. ಯಾರ್ಯಾರಿಗೆ ಸೀಟು ಕೊಡಬೇಕೂಂತ ಮೊದಲೇ ನಿರ್ಧರ ಮಾಡಿಕೊಂಡು ಇಂಟರ್‌ವ್ಯೂಗೆ ಕರೆಯುತ್ತಾರೆ. ಸರ್ಕಾರಿ ಕೆಲಸದಲ್ಲಿರುವವರ ಮಕ್ಕಳಿಗೆ, ಅಳಿಯಂದಿರಿಗೇ ಸೀಟು ಮುಡಿಪು. ನಮ್ಮಂತಹ ಪರದೇಶಿಗಳಿಗೆಲ್ಲಾ ಬುದ್ಧಿಯಿದ್ದರೂ ವ್ಯರ್ಥ. ನಾನು ದೊಡ್ಡ ಅಧಿಕಾರಿಯ ಮನೆಯವನಲ್ಲ, ಜೊತೆಗೆ ಸರ್ಕಾರದ ದೃಷ್ಟಿಯಲ್ಲಿ ಉತ್ತಮ ಜಾತಿಗೆ ಸೇರಿದವನು. ಆದುದರಿಂದ ನಮ್ಮನ್ನ ತುಳಿಯಬೇಕಾಗಿರುವುದು ತನ್ನ ಕರ್ತವ್ಯಾಂತ ಸರ್ಕಾರ ಭಾವಿಸಿದೆ....."

"ಹಾಗಾದರೆ ಇವೆಲ್ಲಾ ನಿಜವೇನೋ?"

"ಎಲ್ಲಾ ಅಕ್ಷರಶಃ ನಿಜ. ತಾಯಿ ಕಿರಿಮಗುವನ್ನು ಹೆಚ್ಚು ಗಮನವಿಟ್ಟು ಜೋಪಾನ ಮಾಡಬೇಕೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ಹಿರಿಯ ಮಗುವನ್ನು ಕೊಂದು, ಅದರ ತುತ್ತನ್ನೂ ಅಪಹರಿಸಿ ಕಿರಿಯ ಮಗುವಿಗೆ ಕೊಡುವುದು ಯಾವ ನ್ಯಾಯ? ಹಿಂದಿರುವವರು ಮುಂದೆ ಬರಬೇಕು. ನಿಜ. ಆದರೆ ಮುಂದಿರುವವರನ್ನು ತುಳಿದು ಅವರ ಸಮಾಧಿಯ ಮೇಲೆ ಪ್ರಗತಿಯ ಕಟ್ಟಡ ಕಟ್ಟಲು ಹೊರಟಿದೆ ಸ್ವಾತಂತ್ರ್ಯ ಸಾಧಿಸಿರುವ ಸರ್ಕಾರ"

ಆ ಹುಡುಗ ಆವೇಶದಿಂದ ಮಾತನಾಡಿದ. ಅವನ ಮುಖ ಕೋಪದಿಂದ ಕೆಂಪಾಗಿತ್ತು. ಉಳಿದವರು ಬೆರಗಾಗಿ ಅವನ ಮುಖವನ್ನೇ ನೋಡುತ್ತಿದ್ದರು. ವಿಜಯಳಿಗೆ ಅವನ ಮಾತುಗಳು ಅರ್ಥವಾಗದಿದ್ದರೂ ಅವನು ಆವೇಶದಿಂದ ಮಾತನಾಡುತ್ತಿರುವನೆಂಬುದು ತಿಳಿಯಿತು. ಅವಳು ಮೀರಳ ಕಡೆ ತಿರುಗಿ

" ಏನು ಹೇಳ್ತಿದಾನೆ ?" ಎಂದಳು.

" ಇಂಟರ್‌ವ್ಯೂ ಎಲ್ಲಾ ಬರೀ ಬೂಟಾಟ ಅಂತ ಹೇಳ್ತಿದಾನೆ."

ಮೀರಳಿಗೆ ಒಳಗಿನಿಂದ ಕರೆ ಬಂದಿತು. ಮೀರ ಎದ್ದು ನಿಂತಳು. ವಿಜಯ ನಕ್ಕು "ಗುಡ್ ಲಕ್" ಎಂದಳು ರಾಗವಾಗಿ.

ಮೀರ ಪ್ರವೇಶಿಸಿದ ಕೊಟಡಿಯಲ್ಲಿ ಹನ್ನೊಂದು ಜನ ಕುಳಿತಿದ್ದರು. ಅವರಲ್ಲಿ ಮೀರಳಿಗೆ ಯಾರ ಪರಿಚಯವೂ ಇರಲಿಲ್ಲ. ಮೀರ ಒಳಗೆ ಹೋದೊಡನೆ ಕೈಮುಗಿದಳು. ಅವರಲ್ಲಿ ಒಬ್ಬರ ಕೈಯಲ್ಲಿ ಮೀರ ಹಾಕಿದ ಅರ್ಜಿಇತ್ತು.

ಅವರಲ್ಲೊಬ್ಬರು ಕೇಳಿದರು " ನಿನ್ನ ಹೆಸರೇನಮ್ಮ ?"

" ಮೀರ."

" ಇಂಟರ್ ಆಗಿ ಎಷ್ಟು ವರ್ಷ ಆಯಿತು ?"

" ಆರು ವರ್ಷ ಆಯಿತು."

" ಆರು ವರ್ಷಕ್ಕೆ ಹಿಂದೇನೇ ಯಾಕೆ ಸೇರಲಿಲ್ಲ ?"

" ಆಗ ಸೇರೋಕಾಗಲಿಲ್ಲ."

" ಯಾಕೆ ?"

" ಅಂತಹ ಸಂದರ್ಭ ಬಂದಿತ್ತು."

" ಏನೂಂತ ಕೇಳಬಹುದೇ ?"

ಅವರ ಪ್ರಶ್ನೆಗಳು ಅನಾವಶ್ಯಕ ಎಂದು ಮೀರಳಿಗೆ ತೋರಿತು.

" ಮದುವೆ ಆದುದರಿಂದ ಮೆಡಿಕಲ್‌ಗೆ ಸೇರೋಕ್ಕಾಗಲಿಲ್ಲ."

" ಈಗ ?"

" ಈಗ ನಮ್ಮ ಯಜಮಾನರು ನಾನು ಓದಲು ಒಪ್ಪಿದ್ದಾರೆ."

" ಈಗ ನೀವು ಓದಲು ಯಾಕೆ ನಿರ್ಧರಿಸಿರುವಿರಿ ?"

" ಮೆಡಿಕಲ್ ಓದಲು ನನಗೆ ಮೊದಲಿನಿಂದಲೂ ಆಸೆಯಿತ್ತು. ನಮ್ಮಣ್ಣ ಗೋಪಾಲ ಇದೇ ಕಾಲೇಜಿನಲ್ಲಿ ಓದಿದವನು."

"ಮೆಡಿಕಲ್‌ಗೆ ಬದಲು ಬೇರೇನಾದರೂ ಓದಬಹುದಲ್ಲಾ "

" ನನಗೆ ವೈದ್ಯಳಾಗಬೇಕೆಂದು ಆಸೆಯಿದೆ."

" ಮುಂದೆ ?"

" ಸರ್ಕಾರಿ ಕೆಲಸದ ಆಸೆಯಿಲ್ಲ. ಹಳ್ಳಿಗೆ ಹಿಂತಿರುಗಿ ನಮ್ಮ ರೈತರ ಸೇವೆ ಮಾಡುವ ಹಂಬಲಿದೆ."

ಅವರು ಮೀರಳ ಮಾರ್ಕ್ಸ್ ಕಾರ್ಡನ್ನು ಎರಡು ನಿಮಿಷ ನೋಡಿ

" ಸರಿ. ಹೋಗಬಹುದು " ಎಂದರು.

ಮೀರ ಕೈ ಮುಗಿದು ಹೊರಗೆ ಬಂದಳು. ಮೀರ ಹೊರಗೆ ಬಂದೊಡನೆ ವಿಜಯ ಪರಾಂಜಪೆ ಪಿಸುಮಾತಿನಲ್ಲಿ " ಅನ್ಯಾಯವಾಗಿ ಹುಡುಗರ ಸೀಟುಗಳಿಗೆ ಕಲ್ಲುಹಾಕುವುದಕ್ಕೆ. ಯಾಕೆ ಬರುತ್ತೀರೀಂತ ಕೇಳಿದರೇನು?" ಎಂದಳು.

" ನನಗೆ ಹಾಗೆ ಹೇಳಲಿಲ್ಲ. ನಾನಿನ್ನು ಹೋಗ್ತೀನಿ."

" ಒಳ್ಳೆಯದು. ಇಬ್ಬರ ಅದೃಷ್ಟವೂ ಚೆನ್ನಾಗಿದ್ದರೆ ಒಬ್ಬರನ್ನೊಬ್ಬರು ನೋಡಬಹುದು."

ಆ ದಿನವೆಲ್ಲ ವಿಜಯಳ ಮಗುವಿನಂತಹ ಮುಖ ಮೀರಳ ಕಣ್ಣಿಗೆ ಕಟ್ಟಿದಂತಿತ್ತು.

* * * *

ಮೀರ ಮೈಸೂರಿಗೆ ಹೋದ ಸಂಜೆ ಶಾಮು ಜೋಯಿಸರ ಮನೆಗೆ ಹೋಗಿ, ಬೇಜಾರು ಪರಿಹಾರ ಮಾಡಿಕೊಳ್ಳುವ ಸಲುವಾಗಿ ಹರಟೆ ಹೊಡೆಯುತ್ತ ಕುಳಿತಿದ್ದ. ಜೋಯಿಸರು ಮನೆಯಲ್ಲಿಲ್ಲದಿದ್ದರೂ ಅವರ ಹೆಂಡತಿ, ವೆಂಕು ಮನೆಯಲ್ಲಿದ್ದರು. ಮಾತಿಗೆ ಮಾತು ಬಂದು ಶಾಮು

" ಮೀರ ಇಲ್ಲಿ ಇನ್ನೆಷ್ಟು ದಿನವಿರುತ್ತಾಳೋ " ಎಂದುಬಿಟ್ಟ. ಆಮೇಲೆ ತನ್ನ ತಪ್ಪಿನ ಅರಿವಾಗಿ ನಾಲಿಗೆ ಕಚ್ಚಿಕೊಂಡ.

ಶಾಮುವಿನ ಮಾತು ಕೇಳಿ ಜೋಯಿಸರ ಹೆಂಡತಿಗೆ ಆಶ್ಚರ್ಯವಾಯಿತು. ಅವರು ಬೆರಗಾಗಿ

" ಹಾಗಂದರೇನೋ ಶಾಮಣ್ಣಾ ?'' ಎಂದರು.

" ಇನ್ನೇನಿಲ್ಲ, ಮೀರಳಿಗೆ........ಹಳ್ಳಿ ಬೇಜಾರಾಗಿದೆ.......ಸ್ವಲ್ಪ ದಿನ ಮೈಸೂರಿನಲ್ಲಿದ್ದು ಬರ್‍ತಾಳೆ." ಶಾಮು ಹಿಡಿದು ಹಿಡಿದು ಮಾತನಾಡಿದ.

" ನೀನೂ ಹೋಗ್ತೀಯೇನು ?"

" ಇಲ್ಲ."

" ಮತ್ತೆ ಮೀರ ಒಬ್ಬಳನ್ನೇ ಕಳಿಸಿಬಿಡ್ತೀಯೇನು ? ಅವಳಿಲ್ಲದಿದ್ದರೆ ನಿನಗೆ ಊಟ ತಿಂಡಿ ಕೂಡ ಬೇಜಾರೂಂತ ವೆಂಕಮ್ಮನವರು...."

" ಛೇ ಹಾಗೇನಿಲ್ಲ. ಹಳೇ ನೆನಪನ್ನೆಲ್ಲಾ ಮರೆಯಲೀಂತ....ಇಲ್ಲೇ ಇದ್ರೆ ತುಂಬ ಸಂಕಟಪಡ್ತಾಳೆ. ನೀವೇ ನೋಡ್ತಿದೀರಲ್ಲಾ ಹೇಗಿದ್ದವಳು ಹೇಗಾಗಿದಾಳೆ ?"

" ನೀನು ತಾನೇ ಇನ್ನೇನು ? ನಿನ್ನ ಬಣ್ಣ, ಮೈ ಕಟ್ಟು ಎಲ್ಲಿ

ಹೋಯಿತೋ ದೇವರಿಗೇ ಗೊತ್ತು. ಶಾಮಣ್ಣ, ನಾನು ನಿನಗೆ ತಾಯಿ ಇದ್ದ ಹಾಗೆ ಇದೀನಿ. ಒಂದು ಮಾತು ಹೇಳಿದರೆ ತಪ್ಪಾಗೋದಿಲ್ಲ. ಮೀರ ಹೊರಟು ಹೋದರೆ ನೀನು ಇನ್ನೂ ಮಂಕಾಗಿಬಿಡ್ತೀಯ. ಹೋಗುವ ಹಾಗಿದ್ದರೆ ನೀನೂ ಅವಳ ಜೊತೆ ಹೋಗು."

"ನಾನು ಹೋಗುವುದು ಸಾಧ್ಯವೇ ಇಲ್ಲ."

"ಯಾಕೆ ?"

"ಹೊಲ, ಗದ್ದೆ, ಎತ್ತುಗಳನ್ನು ಬಿಟ್ಟು ನಾನು ಹೋಗಲಾರೆ. ಜಾನಿ ಹೋದ ಹೊಸತರಲ್ಲಿ ನನಗೆ ಯಾವುದರಲ್ಲಿಯೂ ಆಸಕ್ತಿಯಿರಲಿಲ್ಲ. ಅಷ್ಟರಲ್ಲೇ ಎಲ್ಲರೂ ತಮ್ಮ ಕೆಲಸ ಮರೆತುಬಿಟ್ಟಿದ್ದರು."

"ಮೀರ ಹೊರಟು ಹೋದರೆ ನೀನು ತುಂಬಾ ಪೆಚ್ಚಾಗ್ತೀಯಲ್ಲ?"

"ಮೀರ ಇಲ್ಲಿರುವುದೂ ಸಾಧ್ಯವಿಲ್ಲ. ನಾನು ಹೋಗುವುದೂ ಸಾಧ್ಯವಿಲ್ಲ. ಮೀರ ಇಲ್ಲೇ ಇದ್ದರೆ ಕ್ರಮೇಣ ಹುಚ್ಚಾಸ್ಪತ್ರೆಗೆ ಸೇರಿಸಬೇಕಾಗತ್ತದೆ. ಅವಳು ಮೈಸೂರಿನಲ್ಲಿ ಮುಂದೆ ಓದಿ...."

ಜೋಯಿಸರ ಹೆಂಡತಿ ಚಕಿತರಾದರು.

"ಏನು ! ಮೀರ ಓದುತ್ತಾಳೆಯೇ ? ಅದೂ ಈ ವಯಸ್ಸಿನಲ್ಲಿ !"

"ಹೂಂ. ಮೀರ ಮೆಡಿಕಲ್ ಕಾಲೇಜಿನಲ್ಲಿ ಓದಿ ಡಾಕ್ಟರಾಗುತ್ತಾಳೆ. ವಿದ್ಯೆ ಕಲಿಯಲು ಯಾವ ವಯಸ್ಸಾದರೇನು ? ನನಗೂ ಅವಳನ್ನು ಕಳಿಸೋದಕ್ಕೆ ಇಷ್ಟವಿಲ್ಲ. ಆದರೆ ಅವಳನ್ನು ಹುಚ್ಚಾಸ್ಪತ್ರೆಯಲ್ಲಿ ನೋಡುವುದಕ್ಕಿಂತಕೂ ಮೆಡಿಕಲ್ ಕಾಲೇಜಿನಲ್ಲಿ ನೋಡುವುದು ಮೇಲಲ್ಲವೇ ?"

ಶಾಮು ಮಾತನಾಡುತ್ತಲೇ ಎದ್ದು ನಿಂತು 'ಬರ್ತೀನಿ' ಎಂದು ಸಹ ಹೇಳವೆ ಹೊರಟು ಹೋದ.

ಜೋಯಿಸರ ಹೆಂಡತಿಗೆ ಮೀರಳ ನಡವಳಿಕೆ ಒಂದು ಒಗಟೆಯಾಯಿತು. ಅಪಾರ ಸಂಪತ್ತನ್ನೂ, ಅರಸು ಮಗನಂತಹ ಗಂಡನನ್ನೂ ಬಿಟ್ಟು ಓದಲು ಹೊರಟಿರುವ ಮೀರ ಅವರಿಗೆ ಆಗಲೇ ಹುಚ್ಚಿಯಂತೆ ತೋರಿದಳು. ಆ ಸುದ್ದಿ ಕೇಳಿದಾಗಿನಿಂದಲೂ ಅವರ ಮನಸ್ಸಿನ ಸ್ವಾಧೀನ ತಪ್ಪಿಹೋಯಿತು. ದಿನಚರಿಯ ಕೆಲಸಗಳೊಂದಿಗೆ ದೇವರಿಗೆ ದೀಪ ಹಚ್ಚುವುದು ಸಹ ಮರೆತು ಹೋಯಿತು. ಅವರು ಚಾಪೆಯ ಮೇಲೆ ಕುಳಿತು ಗಲ್ಲಕ್ಕೆ ಕೈ ಕೊಟ್ಟು

"ಇದೇನು ಕೇಡಮ್ಮ ಗಂಡ ಹೆಂಡತಿಯನ್ನು ಬಿಟ್ಟು ಹೋಗುವುದನ್ನು ನಾನು ಕೇಳಿದ್ದೆ. ಆದರೆ ಹೆಂಡತಿ ಗಂಡನ್ನ ಬಿಟ್ಟು ಹೋಗುವುದನ್ನು ನಾನು ಎಲ್ಲಿಯೂ ಕೇಳಿರಲಿಲ್ಲ." ಎಂದುಕೊಂಡರು.

ಮನೆಯಲ್ಲಿ ಕುಳಿತಿರುವುದು ಸಾಧ್ಯವಾಗದೆ "ವೆಂಕೂ, ನೀನೇ ಹಾಲು ಕರೆದು ಒಲೆ ಹೊತ್ತಿಸಿರು. ನಾನು ದೇವಸ್ಥಾನಕ್ಕೆ ಹೋಗಿ ಬರುತ್ತೇನೆ" ಎಂದು ಕಾಯಿ ಎಲೆ ಅಡಿಕೆಯನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೊರಟರು.

ದೇವಸ್ಥಾನದಿಂದ ಅವರು ಮನಸ್ಸಿನ ತಳಮಳವನ್ನು ಕಡಿಮೆ ಮಾಡುವುದಕ್ಕಾಗಿ ಪಂಡಿತರ ಮನೆಗೆ ಹೋದರು. ಪಂಡಿತರ ಹೆಂಡತಿ ಪುಟ್ಟಮ್ಮ "ಬನ್ನಿ ಸಾಕಮ್ಮ" ಎಂದರು.

"ಕೆರೆ ಹತ್ತಿರ ಹೋಗೋಣ ಬನ್ನಿ" ಎಂದರು ಸಾಕಮ್ಮ.

ಇಬ್ಬರೂ ಕೆರೆಯಂಚಿನ ಬಳಿ ನಡೆದರು. ಸಾಕಮ್ಮನವರು ಸ್ವಭಾವತಃ ಮಾತುಗಾತಿ. ಆದರೆ ಶಾಮುವಿನಿಂದ ಮೀರಳ ಸುದ್ದಿ ತಿಳಿದಾಗಿನಿಂದಲೂ ಅವರ ಬಾಯಿ ಕಟ್ಟಿಹೋಗಿತ್ತು. ಸಾಕಮ್ಮನವರ ಮೌನವನ್ನು ಗಮನಿಸಿದ ಪುಟ್ಟಮ್ಮನವರು

"ಇದೇನು ಸಾಕಮ್ಮ, ಬಾಯಬಿಟ್ಟರೆ ಮುತ್ತು ಸುರಿಯುತ್ತದೆ ಎನ್ನುವ ಹಾಗೆ ಕೂತಿದೀರಲ್ಲಾ?"

ಸಾಕಮ್ಮ ಬಾಯಿಬಿಟ್ಟರು "ಈ ಹುಡುಗಿ ಕರ್ಮ ನೋಡಿ ನನಗೆ ವ್ಯಥೆಯಾಗುತ್ತಿದೆ."

"ವೆಂಕೂ ವಿಚಾರ ಹೇಳ್ತಿದೀರೇನು?"

"ಮೀರನ ವಿಚಾರ ಹೇಳ್ತಿದೀನಿ. ವೆಂಕು ವಿಷಯ ಅಲ್ಲ."

"ಯಾಕೆ ಅವಳಿಗೇನಾಗಿದೆ? ರಾಣಿ ಇದ್ದ ಹಾಗೆ ಇದಾಳೆ. ಅವಳಿಗೆಂತಹ ಕರ್ಮ ಇರಬಹುದು? ಮಗಳು ಹೋದ ದುಃಖ ಇರಬಹುದು. ಆದರೆ ಆ ದುಃಖ ಎಷ್ಟು ದಿನವಿರುತ್ತದೆ ಹೇಳಿ. ಗೋಡೆ ಇದ್ದರೆ ಸಾವಿರ ಚಿತ್ತಾರಾಂತ ಗಾದೆ ಕೇಳಿಲ್ಲವೇ? ಕಂಕುಳಿಗೆ ಇನ್ನೊಂದು ಮಗು ಬರುವವರೆಗೆ ದುಃಖ ಪಡ್ತಾಳೆ, ಆಮೇಲೆ ಸರಿಹೋಗ್ತಾಳೆ."

"ಜಾನಿಗೆ ಐದು ವರ್ಷವಾಗಿತ್ತು. ಅದೇಕೋ ಜಾನಿಯ ಹಿಂದೆ ಮಕ್ಕಳಾಗಲೇ ಇಲ್ಲ. ಹುಳಿತು ಹೋಗುವಷ್ಟು ಆಸ್ತಿ ಅದೆ. ವರ್ಷಕ್ಕೊಂದು ಮಗುವಾಗಬಾರದೆ?"

"ಈಗಿನ ಕಾಲದ ಹುಡುಗರು ಏನೇನು ಮಾಡ್ತಾರೋ ದೇವರಿಗೆ ಗೊತ್ತು."

"ನೋಡಿ ಈಗ ಮೀರಳಿಗೆ ಹಳ್ಳಿ ಬೇಜಾರಾಗಿದೆಯಂತೆ. ಮೈಸೂರಿಗೆ ಓದೋಕೆ ಹೋಗ್ತಾಳಂತೆ" ಎಂದರು ಸಾಕಮ್ಮ.

ಪುಟ್ಟಮ್ಮ ಬೆಚ್ಚಿ "ಏನು?" ಎಂದರು.

"ವೀರ ಗಂಡನ್ನ ಬಿಟ್ಟು ಮೈಸೂರಿಗೆ ಹೋಗಿ ಓದುತ್ತಾಳಂತೆ."

"ಯಾಕೆ ಅವಳಿಗೇನು ಕಡಿಮೆಯಾಗಿದೆ? ಓದಿ ಕೆಲಸ ಮಾಡಿ ದುಡ್ಡು ಸಂಪಾದಿಸಬೇಕಾಗಿದೆಯೇನು? ದೇವರು ಕೈ ತುಂಬಾ ಕೊಟ್ಟಿದ್ದಾನೆ. ಅದನ್ನು ಅನುಭವಿಸಿಕೊಂಡಿದ್ದರೆ ಸಾಲ್ಲದೆ?"

"ನಿಜ ಪುಟ್ಟಮ್ಮ. ಈ ಮಾತು ಕೇಳಿದಾಗಿನಿಂದ ಬೇಸರವಾಗಿ ವೀರಳಿಗೆ ಒಳ್ಳೆ ಬುದ್ಧಿ ಕೊಡಲೀಂತ ದೇವಸ್ಥಾನಕ್ಕೆ ಬಂದೆ."

"ಅವಳನ್ನ ಕರಸಿ ಎರಡು ಬುದ್ಧಿ ಮಾತು ಯಾಕೆ ಹೇಳಬಾರದು?" ಪುಟ್ಟಮ್ಮನವರು ಕಳವಳದಿಂದ ನುಡಿದರು.

"ಹೂ. ಶಾಮಣ್ಣ ತಾನೆ ಯಾಕೆ ಇಷ್ಟಕ್ಕೆ ಅವಕಾಶ ಕೊಟ್ಟ? ಕಡ್ಡಿ ಎರಡು ತುಂಡು ಮಾಡಿದ ಹಾಗೆ ಖಂಡಿತ ಆಗೋದಿಲ್ಲ ಎನ್ನಬಾರದೆ?"

"ನಾನು ಶಾಮಣ್ಣನಿಗೆ ಈ ಮಾತು ಹೇಳಿದೆ. ಆದರೆ ಅವನು ನನ್ನ ಮಾತನ್ನು ಒಪ್ಪಿಕೊಳ್ಳಲಿಲ್ಲ."

"ಇನ್ನೊಂದೆರಡು ಮಕ್ಕಳಾದರೂ ಆದರೆ ಜಾನೀನ ಮರೆಯುತ್ತಾರೇನೋ?"

"ಯಾರಿಗೆ ಗೊತ್ತಮ್ಮ."

"ವೀರನ್ನ ಒಂದು ದಿನ ನನ್ನ ಮನೇಗೆ ಊಟಕ್ಕೆ ಕರೆಯುತ್ತೇನೆ. ಆಗ ಎರಡು ಬುದ್ಧಿ ಮಾತು ಹೇಳೋಣ."

"ಅವಳು 'ನಿಮಗೇನು ನನ್ನಿಷ್ಟ' ಎಂದರೆ?" ಸಾಕಮ್ಮನವರು ತಮ್ಮ ಸಂಶಯವನ್ನು ವ್ಯಕ್ತಪಡಿಸಿದರು.

"ಅವಳು ಹಾಗೆ ಮಾಡೋದಿಲ್ಲ. ದೊಡ್ಡವರಲ್ಲಿ ಅವಳಿಗೆ ಗೌರವ ಇದೆ" ಎಂದು ಪುಟ್ಟಮ್ಮನವರು ಅಭಿಮಾನದಿಂದ ನುಡಿದರು.

ವೀರ ಹಳ್ಳಿಗೆ ಬಂದ ಮಾರನೆಯ ದಿನವೇ ಸಾಕಮ್ಮನವರ ಮಗಳು ವೆಂಕೂ ಬಂದು ಕರೆದಳು.

"ವೀರಕ್ಕ, ಇವತ್ತು ನನ್ನ ಮನೇಗೆ ಊಟಕ್ಕೆ ಬರಬೇಕಂತೆ. ಅಮ್ಮ ಹೇಳಿ ಕಳಿಸಿದಾಳೆ."

ವೀರ ಒಂದು ನಿಮಿಷ ಅನುಮಾನಿಸಿ "ಇವರಿನ್ನೂ ಮನೆಗೆ ಬಂದಿಲ್ಲವಲ್ಲಾ" ಎಂದು ರಾಗ ತೆಗೆದಳು.

"ಶಾಮಣ್ಣ ಮನೆಗೆ ಬರೋದು ಎಷ್ಟು ಹೊತ್ತಾಗತ್ತೋ ಏನೋ. ನೀವು ಬನ್ನಿ. ಬಿಸಿಯಾಗಿದ್ದಾಗಲೇ ಶಾಮಿಗೆ ಚೆನ್ನ."

ಅಲ್ಲಿಯೇ ಹೂಬತ್ತಿ ಮಾಡುತ್ತಾ ಕುಳಿತಿದ್ದ ವೆಂಕಮ್ಮನವರು "ಹೋಗು. ಪಾಪ, ಅಷ್ಟು ವಿಶ್ವಾಸದಿಂದ ಹೇಳಿಕಳಿಸಿದಾರೆ. ಶಾಮಣ್ಣ ಬಂದರೆ ನಾನು ಹೇಳ್ತೀನಿ" ಎಂದರು.

ಇನ್ನೂ ಯಾವುದನ್ನೂ ನಿರ್ಧರಿಸದಿದ್ದ ಮನಸ್ಸು ವೆಂಕಮ್ಮನವರ ಮಾತನ್ನು ಕೇಳಿ 'ಆಗಲಿ' ಎಂದಿತು.

ಮೀರ ಜೋಯಿಸರ ಮನೆಗೆ ಹೋಗುವ ಹೊತ್ತಿಗೆ ಪಂಡಿತರ ಹೆಂಡತಿ ಪುಟ್ಟಮ್ಮನವರು ಬಂದು ಕುಳಿತಿದ್ದರು. ಸಾಕಮ್ಮನವರು ಮೀರಳನ್ನು ನೋಡಿ "ಬಾಮ್ಮ, ಮೈಸೂರಿನಿಂದ ಯಾವಾಗ ಬಂದೆ?" ಎಂದರು.

"ನಿನ್ನೆ ಬಂದೆ."

"ಎಲ್ಲಾ ಅಲ್ಲಿ ಆರೋಗ್ಯವೇ ?"

"ಹೂಂ."

"ಒಳಗೇ ಹೋಗೋಣ ಬನ್ನಿ" ಎನ್ನುತ್ತಾ ಸಾಕಮ್ಮನವರು ಅಡಿಗೆ ಮನೆಗೆ ಹೊದರು.

ನಡುಮನೆಯಲ್ಲಿ ಬಾಳೆಎಲೆ ಹಾಕಿದ್ದರು. ಸಾಕಮ್ಮನವರು ಬಡಿಸ ತೊಡಗಿದರು. ಮಾತಿನ ನಡುವೆ ಊಟ ಸಾಗಿತು. ಊಟವಾದ ನಂತರ ಸಾಕಮ್ಮನವರು ಒಂದು ಡಬ್ಬಿಯಲ್ಲಿ ಸ್ವಲ್ಪ ಶಾಮಿಗೆ, ಕಾಯಿಹಾಲು ಹಾಕಿ ವೆಂಕುವನ್ನು ಕರೆದು

"ಅರ್ಚಕರ ಮನೆಗೆ ಕೊಟ್ಟು ಬಾ" ಎಂದರು.

ವೆಂಕು ಅರ್ಚಕರ ಮನೆಗೆ ಹೋದರೆ ತನ್ನ ಓರಗೆಯವಳಾದ ಶಾರದೆ ಯೊಡನೆ ಮಾತನಾಡುತ್ತಾ ಕುಳಿತುಬಿಡುವಳೆಂದು ಅವರಿಗೆ ತಿಳಿದಿತ್ತು. ಅವಳು ಡಬ್ಬಿ ಹಿಡಿದು ಹೊರಟಾಗ ಎಂದಿನಂತೆ ಅವರು

"ಬೇಗ ಬಂದುಬಿಡು" ಎನ್ನಲಿಲ್ಲ.

ಸಾಕಮ್ಮನವರ ಮಗ ವೆಂಕಟೇಶ ರಸ್ತೆಯಲ್ಲಿ ಆಡಿಕೊಳ್ಳುತ್ತಿದ್ದ.

ಜೋಯಿಸರು ರೂಮಿನಲ್ಲಿ ತೋಳಿಗೆ ತಲೆಕೊಟ್ಟು ಮಲಗಿದ್ದರು. ಜಗ ಲಿಯ ಮೇಲೆ ಸಾಕಮ್ಮನವರು ಚಾಪೆ ತಂದು ಹಾಕಿ ಎಲೆ ಅಡಿಕೆಯ ತಟ್ಟೆ ಯನ್ನಿರಿಸಿ "ತಗೊಳ್ಳಿ ಪುಟ್ಟಮ್ಮನವರೇ. ತಗೋಮ್ಮ ಮೀರ" ಎಂದರು.

"ನನಗೆ ಬೇಡ" ಮೀರ ನಯವಾಗಿ ಹೇಳಿದಳು.

ಪುಟ್ಟಮ್ಮನವರು ಎಲೆಗೆ ಸುಣ್ಣ ಹಚ್ಚುತ್ತಾ ಮಾತಿಗಾರಂಭ ಮಾಡಿ ದರು.

"ಮೀರು ನಾನೊಂದು ವಿಷಯಾನ ಕೇಳಬೇಕೆಂದಿದೇನೆ. ನೀನು ತಪ್ಪು ತಿಳಿದುಕೊಳ್ಳೋದಿಲ್ಲಾಂದರೆ ಕೇಳುತ್ತೇನೆ."

ಚಾಪೆಯ ಕಡ್ಡಿಯನ್ನು ಉಗುರಿನಿಂದ ಕೀಳುತ್ತಿದ್ದ ಮೀರ ಪುಟ್ಟಮ್ಮ ನವರ ಮಾತು ಕೇಳಿ ತಲೆ ಎತ್ತಿದಳು. ಅವರೇನು ಕೇಳಬೇಕೆಂದಿರುವ ರೆಂಬುದು ಮೊದಲು ಅವಳಿಗೆ ತಿಳಿಯಲಿಲ್ಲಿ. ಅರೆಕ್ಷಣದ ನಂತರ ತಾನು ಮೈಸೂರಿಗೆ ಹೋದುದರ ಬಗ್ಗೆ ಕೇಳಬಹುದೆಂದು ಅನುಮಾನವಾಯಿತು. ಕ್ಷೀಣಸ್ವರದಿಂದ "ಕೇಳಿ, ನಾನೇನು ತಿಳಿದುಕೊಳ್ಳೋಲ್ಲ" ಎಂದಳು.

"ನೀನು ಮೈಸೂರಿಗೆ ಓದೋಕೆ ಹೋಗ್ತೀಯಂತೆ ನಿಜವೇ ?"

"..........."

"ನಿಜವೇ ಮೀರಾ ?"

"ನಿಜ."

"ಯಾಕೆ ?"

"ನನ್ನ ಮನಸ್ಸನ್ನು ಹಗುರಗೊಳಿಸಲು ನನಗುಳಿದಿರುವ ದಾರಿ ಅದೊಂದೇ."

"ಶಾಮಣ್ಣ ನಿನಗೇನು ಕಡಿಮೆ ಮಾಡಿದಾನೆ ? ನಿನಗೆ ಹಣಕ್ಕೆ ಕೊರ ತೆಯೇ ? ಶಾಮಣ್ಣ ಹಿಂಸೆ ಮಾಡ್ತಾನೆಯೇ ? ಅವನನ್ನು ಬಿಟ್ಟು ಹೋಗು ವುದು ನ್ಯಾಯವೇನಮ್ಮ ? ಹೆಂಗಸಿನ ಜಾಗ ಗಂಡನ ಮನೆಯಲ್ಲಿ ಮೀರ. ನೀನೇಕೆ ಓದಬೇಕು ?"

ಮೀರ ಅಸಹಾಯಕಳಂತೆ ನುಡಿದಳು

"ನಾನು ವೀಣಳನ್ನು ಮರೆಯಲಾರೆ. ಅವಳನ್ನು ಮರೆಯಬೇಕಾದರೆ ನಾನು ಓದಬೇಕು. ಕೆಲಸ ಮಾಡಲೇ ಬೇಕು. ನಿಮಗೆ ಗೊತ್ತಿಲ್ಲ–ನನ್ನ ಕರುಳು, ಹೃದಯ ಹೇಗೆ ಸುಟ್ಟು ಹೋಗುತ್ತಿದೇಂತ. ಚಿಂತಾಗ್ನಿಯಲ್ಲಿ ನಾನು ಬೇಯು ತ್ತಿದ್ದೇನೆ. ನನಗೆ ಹಣವಿರಬಹುದು. ಆದರೂ ನಾನು ಸುಖಿಯಾಗಿಲ್ಲ. ನೀವು ಹೇಳಿದಂತೆ ಅವರು ಒಳ್ಳೆಯವರು. ಅದರೆ ನನ್ನ ತಪ್ಪು–ನಾನು ಇಲ್ಲಿಗೆ ಹೊಂದಿ ಕೊಳ್ಳಲಾರದೇ ಹೋಗಿರುವುದು ನನ್ನ ತಪ್ಪು. ಆದರೆ ನಾನೇನೂ ಮಾಡ ಲಾರೆ. ನನಗೆ ಹಣ ಬೇಡ. ನನಗೆ ಶಾಂತಿ ಬೇಕು........."

ಮೀರಳ ಆವೇಶ ನೋಡಿ ಪುಟ್ಟಮ್ಮನವರು ಗಾಬರಿಯಾದರು.

"ಮೀರ, ಮಗುವನ್ನು ಕಳೆದುಕೊಂಡ ತಾಯಿಯ ಮನಸ್ಸು ಹೇಗಿರು ವುದೆಂಬುದು ನನಗೂ ಗೊತ್ತು. ನಾನೂ ಆ ದುಃಖವನ್ನು ಅನುಭವಿಸಿ ದೀನಿ. ನನ್ನ ಮೊದಲನೆಯ ಮಗು ಎಳೆವಿನಿಂದ ಸತ್ತು ಹೋಯಿತು. ಆಗ ನಾನೂ ನಿನ್ನಂತೆಯೇ ದುಃಖಪಟ್ಟೆ. ಆದರೆ ಈಗ ಇತರ ಮಕ್ಕಳ ಮುಖ ನೋಡಿ ಸಮಾಧಾನ ತಂದುಕೊಂಡಿಲ್ಲವೇ ?"

"ಆದರೆ....ಆದರೆ....ನಿಮ್ಮ ಸ್ಥಿತಿಯೇ ಬೇರೆ. ನಾನಿರುವ ಸ್ಥಿತಿಯೇ ಬೇರೆ" ಎನ್ನುತ್ತಾ ಮೀರ ಮೊಳಕಾಲ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅತ್ತಳು.

ಮೀರ ದಾರಿಗಾಣದ ಮಗುವಿನಂತೆ ಅಳಬಹುದು ಎಂದು ಪುಟ್ಟಮ್ಮನವರು ಭಾವಿಸಿರಲಿಲ್ಲ. ಮೀರ ಧೈರ್ಯಶಾಲಿ, ಕೆಚ್ಚೆದೆಯ ಹುಡುಗಿ ಎಂಬುದೇ ಅವರ ಭಾವನೆಯಾಗಿತ್ತು. ಅವಳು ಈಗ ತಮ್ಮೆದುರಿಗೆ ಕುಳಿತು ಎಳೆಯ ಮಗುವಿನಂತೆ ಅಳುತ್ತಿರುವುದನ್ನು ನೋಡಿ ಅವರಿಗೆ ಏನೂ ತೋರ ಲಿಲ್ಲ. ಸಾಕಮ್ಮನವರು ಮೀರಳ ಬಳಿಗೆ ಬಂದು ಆದರದಿಂದ ಅವಳ ತಲೆ ಸವರಿ

"ಅಳಬೇಡಮ್ಮ. ಆದದ್ದು ಆಗಿಹೋಯಿತು" ಎಂದರು.

ಕ್ರಮೇಣ ಮೀರಳ ದುಃಖ ಶಾಂತವಾಯಿತು.

ಅವಳ ದುಃಖದಾವೇಗ ಕಡಿಮೆಯಾದ ಮೇಲೆ ಪುಟ್ಟಮ್ಮನವರು ಕೇಳಿದರು.

"ಮಕ್ಕಳಿಲ್ಲದಿದ್ದರೆ ಗಂಡನೊಡನಿರಲು ಸಾಧ್ಯವಿಲ್ಲವೇ ಮೀರ? ನಮ್ಮ ದೊಡ್ಡಮ್ಮನಿಗೂ ಮಕ್ಕಳಿಲ್ಲ. ಆದರೆ ಅವರಿಗೆ ಗಂಡನೆಂದರೆ ಎಷ್ಟು ಭಕ್ತಿ, ಪ್ರೀತಿ. ಅರವತ್ತು ವರ್ಷದ ಮೇಲಾಗಿದ್ದರೂ ಗಂಡ, ಹೆಂಡತಿ ನಿನ್ನೆ ಮೊನ್ನೆ ಮದುವೆಯಾದವರ ಹಾಗೆ ಇದಾರೆ."

"ಇರಬಹುದು. ಆದರೆ ನಿಮ್ಮ ದೊಡ್ಡಮ್ಮ ಬೆಳೆದ ಕಾಲ, ಸನ್ನಿವೇಶಗಳಿಗೂ, ನಾನು ದೊಡ್ಡವಳಾದ ಕಾಲ ಸನ್ನಿವೇಶಗಳಿಗೂ ಬಹಳ ವ್ಯತ್ಯಾಸವಿದೆ. ಅವರು ಗಂಡನನ್ನು ಪ್ರತ್ಯಕ್ಷ ದೇವರು ಎಂದು ಭಾವಿಸಿದ್ದಾರೆ. ಗಂಡ ಹಾಕಿದ ಗೆರೆ ದಾಟುವುದು ತಪ್ಪು ಎಂದು ತಿಳಿದಿದ್ದಾರೆ. ಗಂಡನಲ್ಲೇ ಸರ್ವಸುಖ ಸಂಪತ್ತು, ವೈಭವ ಕಾಣುತ್ತಿದ್ದಾರೆ...."

"ನೀನು?"

"ನಾನು ಪತಿಯನ್ನು ಪರದೈವ ಎಂದು ಭಾವಿಸಿಲ್ಲ. ಗಂಡನೂ ನನ್ನಂತೆಯೇ ಒಬ್ಬ ಮನುಷ್ಯ ಎಂದು ಭಾವಿಸಿದ್ದೇನೆ. ನನ್ನ ಧ್ಯೇಯ, ಆಕ್ಷಾಂಕ್ಷೆಗಳಿಗೆ ಪತಿ ಅಡ್ಡ ಬಂದರೆ ಅವರ ಮಾತು ಮೀರಿ ನಡೆಯುವುದು ತಪ್ಪಲ್ಲ ಎಂದು ಭಾವಿಸಿದ್ದೇನೆ."

ಮೀರಳ ಮಾತು ಕೇಳಿ ಹಿರಿಯ ಮುತ್ತೈದೆಯರಿಬ್ಬರೂ ಅಚ್ಚರಿಗೊಂಡರು. ಹಳೆಯ ವಾತಾವರಣದಲ್ಲಿ ಬೆಳೆದು ಪತಿಯೇ ಪರದೈವ ಎಂಬ ಪಾಠ ಕಲಿತಿದ್ದ ಅವರಿಗೆ ಮೀರಳ ಮಾತುಗಳು ಹಿಡಿಸಲಿಲ್ಲ. ಗಂಡನ ಮಾತು ಮೀರಿ ನಡೆಯುವುದೆಂದರೆ ಅವರ ದೃಷ್ಟಿಯಲ್ಲಿ ಕ್ಷಮಿಸಲಾಗದಂತಹ ಅನ್ಯಾಯವಾಗಿತ್ತು.

"ಹಿಂದೂ ಹೆಂಗಸರಿಗೆ ಗಂಡನೇ ದೇವರಮ್ಮ. ಗಂಡನ ಮಾತು ಮೀರುವುದು ಮಹಾ ಪಾಪ."

"ಆದರೆ ನಾನು ಹಾಗೆ ತಿಳಿಯಲಿಲ್ಲ. ಅವರ ಕೈ ಹಿಡಿದ ನಾನು ಭಾಗ್ಯಶಾಲಿ. ಆದರೆ ಅವರು ಭಾಗ್ಯಹೀನರು, ಅವರೂ ನನ್ನ ಆಸೆಗೆ ಬೆಂಬಲ ಕೊಡುತ್ತಿದ್ದಾರೆ. ಅದಕ್ಕಾಗಿ ನಾನು ಕೃತಜ್ಞಳು."

"ಶಾಮಣ್ಣ ಇನ್ನೂ ಹುಡುಗ. ಹೆಂಡತಿಯಿಲ್ಲದೆ ಎಷ್ಟು ದಿನ ಹೀಗೆಯೇ ಇರುತ್ತಾನೆ? ನೀನು ಆ ಯೋಚನೆ ಮಾಡಬೇಡವೇ?

"ಅವರು ಬೇರೆ ಮದುವೆಯಾಗಲು ನನ್ನ ಅಡ್ಡಿಯೇನೂ ಇಲ್ಲ. ನಾನಿನ್ನು ಬರ್ತೀನಿ" ಎನ್ನುತ್ತಾ ಮೀರ ಎದ್ದು ನಿಂತಳು.

ಸಾಕಮ್ಮನವರು "ನಾನು ನಿನ್ನ ಅಳಿಸುವುದಕ್ಕೆ ಕರೆಸಿದ ಹಾಗಾಯಿತು ಮೀರ. ನಮ್ಮ ಮೇಲೆ ಕೋಪಿಸಿಕೊಳ್ಳಬೇಡ. ಎಷ್ಟಾಗಲಿ ನಾವು ಪೂರ್ವ ಕಾಲದವರು. ನಮ್ಮ, ನಿಮ್ಮ ಭಾವನೆಗಳು ಹೊಂದಲಾರವು" ಎಂದರು.

"ನಿಮ್ಮ ಮಾತಿನಿಂದ ನನಗೇನೂ ಕೋಪವಿಲ್ಲ."

ಕೆನ್ನೆಯ ಮೇಲೆ ನಿಂತಿದ್ದ ಕಣ್ಣೀರಿನ ಗುರುತನ್ನು ಕರವಸ್ತ್ರದಿಂದ ಚೆನ್ನಾಗಿ ಒರೆಸಿಕೊಂಡು ಮೀರ ಹೊರಟುಹೋದಳು.

ಪುಟ್ಟಮ್ಮನವರು ನಿಟ್ಟುಸಿರುಬಿಟ್ಟು "ಒಳ್ಳೆಯ ಹುಡುಗಿ. ಯಾವ ಗ್ರಹಚಾರ ಅವಳನ್ನು ಹೀಗೆ ಕಾಡಿಸುತ್ತಿದೆಯೋ" ಎಂದರು.

ಮೀರ ಗಂಡನನ್ನು ಬಿಟ್ಟು ಓದಲು ಮೈಸೂರಿಗೆ ಹೊರಟಿರುವಳೆಂಬ ಸುದ್ದಿ ಬಾಯಿಂದ ಬಾಯಿಗೆ ಕಾಡ್ಗಿಚ್ಚಿನಂತೆ ಹಬ್ಬಿತು. ಹಳ್ಳಿಯವರು ಮೊದಲು ಈ ಸುದ್ದಿಯನ್ನು ನಂಬಲಿಲ್ಲ. ಆದರೆ ಹಳ್ಳಿಯವರ ಗೌರವಾದರಗಳಿಗೆ ಪಾತ್ರರಾಗಿದ್ದ ಸಾಕಮ್ಮ, ಪುಟ್ಟಮ್ಮನವರಿಂದಲೇ ಈ ಸುದ್ದಿ ಬಂದ ಮೇಲೆ ನಂಬದಿರಲು ಹೇಗೆ ಸಾಧ್ಯ?

ಹಳ್ಳಿಯವರಿಗೆ ಮಾತನಾಡಲು ಹೊಸದೊಂದು ವಿಷಯ ಸಿಕ್ಕಿದಂತಾಯಿತು. ತಲೆ ಹಣ್ಣಾದ ಬೀರಮ್ಮ ಮೊರದಲ್ಲಿ ರಾಗಿ ಕಾಳು ಕೇರುತ್ತಾ ಕೆನ್ನೆ ಸರಪಳಿಯ ರಾಮಕ್ಕನೊಂದಿಗೆ "ಕೇಳಿದೆಯಾವ್ವಾ?" ಎಂದಳು.

"ಕೇಳಿದೆ ಕನವ್ವ. ಕಾಲ ತಲ್ಕೆಳಗಾಗೋಯ್ತು. ಎಂಡಿರೇ ಗಂಡಂಪ್ರನ್ನ ಬುಡೋಕೆ ಮೊದಲು ಮಾಡವ್ರೆ. ಬ್ರಾಂಬ್ರೂ ಹಿಂಗೇ ಮಾಡ್ತಾರಾ?"

"ಶಾಮಪ್ನೋರು ಮೀರವ್ವನಿಗೇನು ಕಡಿಮೆ ಮಾಡವ್ರೆ?"

"ಮಗ ಸತ್ತೋದ ದುಕ್ಕ ಮರೆಯೋಕೆ ಒಂಟವರಂತೆ."

"ಒಂದ್ಸಗ ಹೋವ್ರೇನವ್ವ, ಇನ್ನೊಂದು ಆಯ್ತದೆ. ಮಗು ಸತ್ತೋಯ್ತೂಂತ ಗಂಡನ್ನ ಬುಡಬೇಕಾ?"

"ಆ ಸಿವಂಗೇ ಗೊತ್ತು. ಒಳಗೆ ಏನು ಜಗಳ ಇದ್ದಾತೋ? ಸುಂಕೆ ಹೀಗೆ ಹೇಳ್ತಾರೇಂತ ಕಾಣಸ್ತದೆ."

"ದೊಡ್ಡವರ ಮಾತು ನಮಗೇಕೆ" ಎಂದು ಇಬ್ಬರೂ ಆ ಮಾತನ್ನು ಅಲ್ಲಿಗೆ ನಿಲ್ಲಿಸಿದರು.

ಒಬ್ಬೊಬ್ಬರು ಒಂದೊಂದು ರೀತಿ ಬಾಯಿಗೆ ಬಂದಂತೆ ಮಾತನಾಡಿದರು. ನೀಲಮ್ಮನ ಗಂಡ ಶಿವಯ್ಯ ತಾತ್ಸಾರವಾಗಿ

"ಶಾಮಪ್ನೋರಿಂದಾನೇ ಅವರು ಇಂಗ್ಮಾಡ್ತಿರೋದು. ಸಲಿಗೆ ಕೊಟ್ಟು ಎಂಡ್ತೀನ ತಲೇ ಮ್ಯಾಗೆ ಕುಂಡ್ರಸ್ಕೊಂಡವ್ರೆ. ಇಡಿದು ನಾಲ್ಕು ಬಿಗಿದರೆ ತಾವಾಗೇ ದಾರೀಗೆ ಬರ್ತಾರೆ" ಎಂದ.

ಎಲ್ಲರಿಗಿಂತಲೂ ಹೆಚ್ಚು ಗಾಬರಿಗೊಂಡವರು ವೆಂಕಮ್ಮ. ಚಿಕ್ಕ ವಯಸ್ಸಿನಲ್ಲೇ ವಿಧವೆಯಾದ ಆಕೆ ಇನ್ನೊಬ್ಬರ ಸೇವೆಯಲ್ಲಿ ತಮ್ಮ ಬದುಕಿನ ಸಾರ್ಥಕತೆಯನ್ನು ಕಂಡಿದ್ದರು. ಮೈ ನೆರೆಯುವುದಕ್ಕೆ ಮುಂಚೆಯೇ ಗಂಡನನ್ನು ಕಳೆದುಕೊಂಡು, ಆಕೆ ತಮ್ಮ ಶ್ರೀಮಂತ ನೆಂಟರಾದ ಶಾಮುವಿನ ತಂದೆಯ ಆಸರೆಯನ್ನು ಪಡೆದು ಕೆಲಸ ಮಾಡುತ್ತಿದ್ದರು. ಶಾಮುವಿನ ತಾಯಿ ಆಕೆಯನ್ನು ಕೇವಲ ಪರಿಚಾರಿಕೆಯೆಂದು ಭಾವಿಸಿರಲಿಲ್ಲ. ಗಂಡ, ಹೆಂಡತಿಯರಿಬ್ಬರೂ ವೆಂಕಮ್ಮನವರನ್ನು ಸ್ನೇಹ, ವಿಶ್ವಾಸದಿಂದ ಕಾಣುತ್ತಿದ್ದರು. ಅವರ ಜೀವನ ವೃಕ್ಷಕ್ಕೆ ವೆಂಕಮ್ಮನವರ ಬಾಳಬಳ್ಳಿ ಹೆಣೆದುಕೊಂಡಿತ್ತು. ಶಾಮುವನ್ನು ಅವರು ತಮ್ಮ ಪ್ರಾಣಕ್ಕಿಂತಲೂ ಮಿಗಿಲಾಗಿ ಪ್ರೀತಿಸುತ್ತಿದ್ದರು. ಅವರ ವಂಶಕ್ಕೆಲ್ಲಾ ಶಾಮು ಒಬ್ಬನೇ ಮಗನಾದುದರಿಂದ ಅವನು ನಡೆದರೆ ಬಾಡುವನೇನೋ ಎನ್ನುವ ರೀತಿಯಲ್ಲಿ ವೆಂಕಮ್ಮನವರು ಅವನನ್ನು ನೋಡಿಕೊಳ್ಳುತ್ತಿದ್ದರು. ಶಾಮುವಿನ ಮೋಹದ ಮಡದಿಯನ್ನು ಅವರು ಅಭಿಮಾನ, ಪ್ರೀತಿಯಿಂದ ಕಾಣುತ್ತಿದ್ದರು. ಕೆಲವು ಬಾರಿ ಮೀರಳ ಜಾಣ್ಮೆ, ದಿಟ್ಟತನ, ಮಾತುಗಾರಿಕೆ ಇವುಗಳನ್ನು ನೋಡಿ ಮೆಚ್ಚುಗೆಯಿಂದ

"ತಾಯೀ, ನೀನು ಗಂಡಾಗಿ ಹುಟ್ಟಿದ್ದರೆ ಲೋಕಾನೇ ಆಳ್ತಿದ್ದೆ" ಎನ್ನುತ್ತಿದ್ದರು. ಆಗ ಶಾಮು ನಸುನಗುತ್ತಾ ಮೀರಳನ್ನು ಕೀಟಲೆ ಮಾಡುವವನಂತೆ ನೋಡಿ "ಆಗ ನನ್ನ ಗತಿ!" ಎನ್ನುತ್ತಿದ್ದ.

ಬೇಗುಲದಂತಹ ಶಾಮುವಿನ ಮನೆಗೆ ಓಡಾಡುವ ದೀಪದಂತಿದ್ದ ಮೀರ ಮೈಸೂರಿಗೆ ಹೊರಟಿರುವುದನ್ನು ನೋಡಿ ವೆಂಕಮ್ಮನವರು ದಿಗಿಲು

ಗೊಂಡರು. ಅವರಿಗೆ ಶಾಮಣ್ಣನ ಮುಖಾಂತರ ವೀರಳಿಗೆ ಎರಡು ಮಾತು ಹೇಳಿಸಬೇಕೆನಿಸಿತು.

ಒಂದು ದಿನ ವೀರ ಎಲ್ಲಿಗೋ ಹೋಗಿದ್ದಾಗ ಶಾಮು ಯಾವುದೋ ಕೆಲಸಕ್ಕೆ ಒಳಗೆ ಬಂದ. ಈ ಸಮಯವನ್ನೇ ಕಾಯುತ್ತಿದ್ದ ವೆಂಕಮ್ಮನವು "ಶಾಮಣ್ಣಾ, ಒಂದು ಮಾತು" ಎಂದರು.

ಶಾಮು ಪ್ರಶ್ನಾರ್ಥಕವಾಗಿ ಅವರ ಕಡೆ ನೋಡಿದ.

"ವೀರಾನ ನೀನಾದರೂ ಇಲ್ಲಿಯೇ ಇರಿಸಲಾರೆಯಾ?"

"ಸಾವಿಧ್ಯವಿಲ್ಲ ಅತ್ತೆ."

"ಹೀಗಂದರೆ ಹೇಗಪ್ಪಾ? ಅವಳಿಗೇನು ಕಡಿಮೆಯಾಗಿದೆ?"

"ಅವಳ ಮನಸ್ಸಿಗೆ ಶಾಂತಿಯಿಲ್ಲ."

"ಓದಿದರೆ ಶಾಂತಿ ಬರುತ್ತದೆಯೇ ಶಾಮಣ್ಣಾ. ಶಾಂತಿ ಹೊರಗಿನಿಂದ ಬರುವುದಿಲ್ಲ. ನಮ್ಮ ಮನಸ್ಸಿನಿಂದಲೇ ಬರಬೇಕು."

ಶಾಮು ಒಂದು ಗಳಿಗೆ ತಲೆ ತಗ್ಗಿಸಿ ನಿಂತಿದ್ದು "ಅವಳು ಜಾನಿಯನ್ನ ಮರೆಯೋದಕ್ಕೋಸ್ಕರ ಹೋಗ್ತಾಳೆ" ಎಂದ.

ಜಾನ್ನಿಯ ಹೆಸರು ಬಂದೊಡನೆ ವೆಂಕಮ್ಮನವರ ಕಣ್ಣುಗಳು ಹನಿಗೂಡಿದವು.

"ಎಲ್ಲಿ ಹೋದರೆ ತಾನೆ ಮಗೂನ ಮರೆಯೋದಕ್ಕಾಗತ್ತಪ್ಪಾ? ವಿದ್ಯೆಯಿಂದ ಮಗೂನ ಮರೆಯಲು ಸಾಧ್ಯವೇ? ಇನ್ನೊಂದು ಮಗುವಾದರೆ ಈ ದುಃಖ ತಾನಾಗಿಯೇ ಮರೆತುಹೋಗುತ್ತದೆ."

ವೆಂಕಮ್ಮನವರ ಮಾತು ಕೇಳಿ ಶಾಮು ಪ್ರತ್ಯುತ್ತರ ಕೊಡದೆ ಆ ಜಾಗದಿಂದ ಹೊರಟುಹೋದ. ವೆಂಕಮ್ಮನವರ ಮನಸ್ಸಿನಲ್ಲಿ ಯೋಚನಾತರಂಗಗಳೆದ್ದವು.

ಹಾಗಾದರೆ ಇದುವರೆವಿಗೆ ಯಾವ ಹೆಂಗಸೂ ಮಗುವನ್ನು ಕಳೆದುಕೊಂಡಿಲ್ಲವೆ? ಮಗುವನ್ನು ಕಳೆದುಕೊಂಡವರೆಲ್ಲ ಗಂಡನನ್ನು ಬಿಟ್ಟು ಹೋಗಿರುವರೆ? ಅಭಿಮನ್ಯುವಿನಂತಹ ಮಗನನ್ನು ಕಳೆದುಕೊಂಡು ಸುಭದ್ರೆ ಬದುಕಿರಲಿಲ್ಲವೇ? ಮತ್ತೊಂದು ಕಂದ ಹುಟ್ಟಿ ಈ ಮನೆಯನ್ನು ಮುಸುಕಿರುವ ಕತ್ತಲನ್ನು ಓಡಿಸಿ ನಗೆಯ ಬೆಳದಿಂಗಳನ್ನು ಹರಡಲಾರದೇ?

ವೀರ ಹೊರಟುಹೋದರೆ ಶಾಮು ಸುಖಿಯಾಗಿರುವುದಿಲ್ಲವೆಂಬ ಸಂಗತಿ ವೆಂಕಮ್ಮನವರಿಗೆ ತಿಳಿದಿತ್ತು. ಅವನು ತಾನೆ ಹೆಂಡತಿಗೆ ಯಾಕೆ ಅಷ್ಟೊಂದು ಸಲಿಗೆ ಕೊಡುತ್ತಾನೋ? ಅವಳನ್ನು ತುಂಬಾ ಮುದ್ದಿಸಿ ಹಾಳು

ಮಾಡಿದಾನೆ. ಹೂಂ. ತಮಗೇಕೆ ಆ ವಿಷಯ? ಆದರೂ....ತಮ್ಮ ತೊಡೆಯ ಮೇಲೆ ಬೆಳೆದ ಶಾಮು ಅಸುಖಿಯಾಗಿರುವುದನ್ನು ತಾವು ನೋಡಲು ಸಾಧ್ಯವೇ? ಈ ಹುಡುಗಿಯನ್ನು ಯಾವ ಕೆಟ್ಟ ಗಳಿಗೆಯಲ್ಲಿ ಕೈ ಹಿಡಿದನೋ? ಅಂದಿನಿಂದ ಒಂದಲ್ಲ ಒಂದು ಬಗೆಯ ಹಿಂಸೆ ಇದ್ದೇ ಇದೆ. ಕೊನೆಗೆ ಅವನ ಸೋದರ ಮಾವನ ಮಗಳು ಸರಸಿಯನ್ನು ಕೈ ಹಿಡಿದಿದ್ದರೆ ರಾಜನಂತಿರಬಹುದಾಗಿತ್ತು, ನಿಜ. ಮೀರ ಅನುಪಮ ಸುಂದರಿ. ಸರಸಿಯನ್ನು ಅವಳ ಜೊತೆಯಲ್ಲಿ ನಿಲ್ಲಿಸುವುದೂ ತಪ್ಪಾದೀತು. ಆದರೆ ಕೈ ಹಿಡಿದ ಗಂಡ ನನ್ನು ಸುಖದಲ್ಲಿಡಲಾರದೇ ಹೋದ ಹೆಂಡತಿಯ ಸೌಂದರ್ಯಕ್ಕೆ ಯಾವ ಬೆಲೆ? ಮೀರ ಚಿನ್ನದಂತಹ ಹುಡುಗಿ. ಆದರೆ ಬುದ್ಧಿ ಮಾತ್ರ ಕೊಂಚ.... ಐಬು.

"ವೆಂಕಮ್ಮನವರೇ....ವೆಂಕಮ್ಮನವರೇ" ಮೀರ ಕೂಗಿದಳು.

ವೆಂಕಮ್ಮನವರು ಎಚ್ಚರಗೊಂಡು 'ಏನಮ್ಮಾ' ಎನ್ನುತ್ತಾ ಹೊರಗೆ ಬಂದರು. ಮೀರ ಎಳೆಗರುವೊಂದರ ಹಿಂದೆ ಓಡಾಡುತ್ತಿದ್ದಳು. ಕರು ಅವಳ ಕೈಗೆ ಸಿಕ್ಕದೆ ನುಸುಳಿಕೊಂಡು ಎಗರಾಡುತ್ತಾ ಓಡಿಹೋಗುತ್ತಿತ್ತು. ಅದನ್ನು ಹಿಡಿಯಲು ಹಿಂಬಾಲಿಸಿ ಒಡಿಯಾಡಿ ಮೀರ ಬಸವಳಿದಿದ್ದಳು. ಅವಳ ಗುಂಗುರು ಕೂದಲಿನ ತಲೆ ಗಾಳಿಗೆ ಸಿಕ್ಕಿ ಕೆದರಿದ ಚಪ್ಪರವಾಗಿತ್ತು. ಕೆನ್ನೆ ಬಿಸಲಿನ ಝಳಕ್ಕೆ ಕೆಂಪಾಗಿತ್ತು. ಸೀರೆಯ ಸೆರಗನ್ನು ನಡುವಿಗೆ ಸಿಕ್ಕಿಸಿ ಮೀರ ಎಳೆಯ ಹುಡುಗಿಯಂತೆ ಕರುವಿನ ಹಿಂದೆ ಓಡುತ್ತಿದ್ದಳು. ಉತ್ಸಾಹ ದಲ್ಲಿದ್ದ ಅವಳ ಮುಖ ತುಂಟತನದಿಂದ ಕಳೆಯೇರಿತ್ತು. ದುಃಖದ ಮಾಸಲು ಬಣ್ಣ ಅವಳ ಮುಖದಿಂದ ಮರೆಯಾಗಿ ಚೈತನ್ಯದ ಹೊಳಪಿನಿಂದ ಕಣ್ಣು ಗಳು ಮಿನುಗುತ್ತಿದ್ದವು.

ವೆಂಕಮ್ಮನವರನ್ನು ನೋಡಿ ಮೀರ ಹೇಳಿದಳು.

"ಕರು ಆಗಿನಿಂದ ಹಣ್ಣು ತಿನ್ನುತ್ತಿದೆ. ಬಾಯಿಗೆ ಬುಟ್ಟಿ ಹಾಕೋ ಣಾಂತ ಹಿಡಿಯೋಕೆ ಪ್ರಯತ್ನ ಪಡ್ತಿದೀನಿ. ಆದರೆ ಅದು ನನ್ನ ಕೈಗೆ ಸಿಕ್ತಾನೆ ಇಲ್ಲ."

ಮೀರಳ ಮುಖ ನೋಡಿ ವೆಂಕಮ್ಮನವರಿಗೆ ಅವಳ ಮೇಲಿನ ಕೋಪ ಮರೆಯಾಯಿತು.

ಜಾನಿ ಇನ್ನೂ ಹತ್ತು ವರ್ಷ ಬದುಕಿದರೆ ಹೀಗೇ ಕಾಣುತ್ತಿದ್ದ ಳೇನೋ?

ಚೆಲುವಾಗಿ ಕಾಣುತ್ತಿದ್ದ ಮೀರಳ ಮುಖದಲ್ಲಿ ಜಾನಿಯ ಮುಖ

ವನ್ನು ಚಿತ್ರಿಸಿಕೊಳ್ಳುತ್ತಾ ವೆಂಕಮ್ಮನವರು ನಿಂತುಕೊಂಡರು. ವೆಂಕಮ್ಮ ನವರು ತನ್ನನ್ನೇ ನೋಡುತ್ತಿರುವುದನ್ನು ಗಮನಿಸಿ ಮೀರ ನಾಚಿ

"ಇದೇನು ನನ್ನ ನೋಡ್ತಾ ನಿಂತುಬಿಟ್ಟರಿ?" ಎಂದಳು.

"ಏನಿಲ್ಲಮ್ಮ. ಕಣ್ವಾಶ್ರಮದಲ್ಲಿ ಜಿಂಕೆಯೊಡನೆ ಆಟವಾಡುವಾಗ ಶಕುಂತಳೆ ಹೀಗೇ ಇದ್ದಳೇನೋ ಎಂದುಕೊಳ್ಳುತ್ತಿದ್ದೆ."

"ಈ ಕರೂನ ಕರೆಯಿರಿ."

"ಗಂಗೇ ಬಾ....ಬಾ...." ಎಂದು ಲೊಚಕೆ ಹಾಕಿದರು ವೆಂಕಮ್ಮ ಕರು ವೆಂಕಮ್ಮನವರನ್ನು ನೋಡಿ ಸುಮ್ಮನೆ ನಿಂತುಕೊಂಡಿತು. ವೆಂಕಮ್ಮ ನವರು ಕರುವಿನ ಬಳಿಗೆ ಹೋಗಿ ಕೊರಳಿನಲ್ಲಿ ಜೋಲಾಡುತ್ತಿದ್ದ ಬುಟ್ಟಿ ಯನ್ನು ಅದರ ಬಾಯಿಗೆ ಕವಿದು ಹಾಕಿದರು. ಮೀರ ಪವಾಡವನ್ನು ನೋಡುವವಳಂತೆ ಅವರ ಕೆಲಸವನ್ನು ನೋಡುತ್ತಿದ್ದಳು.

"ನೀವು ಕರೂಗೆ ಅದೇನು ಮಾಟ ಮಾಡಿದೀರೀಂತೀನಿ." ಎಂದಳು ಮೀರ ಅಚ್ಚರಿಯಿಂದ.

ವೆಂಕಮ್ಮನವರು ಬದಲು ಹೇಳಲಿಲ್ಲ. ಆದರೆ

"ನೀನು ಶಾಮಣ್ಣನಿಗೆ ಅದೇನು ಮಾಟ ಮಾಡಿದೀಯೋ ಮಾಯಾಂಗನೆ" ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡರು.

*   *   *   *

ಮೀರಳಿಗೆ ಮೆಡಿಕಲ್ ಕಾಲೇಜಿನಲ್ಲಿ ಸೀಟು ಸಿಕ್ಕಿದ ಸುದ್ದಿ ಬಂದ ದಿನ, ಜೊತೆಗಾರರಿಂದ ಬೇರೆಯಾದ ಎಳೆಗರುವಿನಂತೆ ಶಾಮು ತಲ್ಲಣಿಸಿದ. 'ನೀನು ಓದುವುದು ಸಾಧ್ಯವಿಲ್ಲ' ಎಂದವನು ಹೆಂಡತಿಗೆ ಕಟುವಾಗಿ ಹೇಳ ಲಾರದವನಾಗಿದ್ದ. ಅವಳಿಗೆ ಸ್ವಲ್ಪವಾದರೂ ಸಮಾಧಾನವನ್ನು ನೀಡುವ ಉದ್ದೇಶದಿಂದ ಅವನು ತಾನು ಅಶಾಂತಿಯಲ್ಲಿ ಬೇಯಲು ಸಿದ್ಧನಾಗಿದ್ದ. ಅವ ಳೊಬ್ಬಳಾದರೂ ನೆಮ್ಮದಿಯಿಂದಿರಲಿ ಎಂದವನ ಮನ ಬಯಸಿತ್ತು.

ಮೀರ ಮೈಸೂರಿಗೆ ಹೊರಡಲು ಸಿದ್ಧತೆಗಳನ್ನು ಮಾಡುತ್ತಿದ್ದಳು. ಮೆಡಿಕಲ್ ಕಾಲೇಜಿನ ಹಾಸ್ಟಲಿನಲ್ಲಿ ಆಗಲೇ ಸ್ಥಳವನ್ನು ದೊರೆಕಿಸಿಕೊಂಡಿ ದ್ದಾಗಿತ್ತು. ತಾನು ಮೆಡಿಕಲ್‌ಗೆ ಸೇರುವ ವಿಷಯವನ್ನು ದೊಡ್ಡಪ್ಪನಿಗೆ ತಿಳಿಸಿಯೂ ಆಗಿತ್ತು. ಅವರಿಂದ ಬಂದಿದ್ದ ಬಹು ಭಾರವಾಗಿದ್ದ ಕವರನ್ನು ಅವಳು ಒಡೆದು ಸಹ ನೋಡದೆ ಹರಿದು ಬಿಸಾಡಿದಳು. ಒಳಗೆ ಕಾಗದದಲ್ಲಿ ಏನಿರುವುದೆಂಬುದು ಅವಳಿಗೆ ತಿಳಿದಿತ್ತು.

ಮೀರ ಹೊರಡುವ ದಿನ ನಿಶ್ಚಯವಾದ ಮೇಲಂತೂ ಮನೆಯಲ್ಲಿ ರುದ್ರಮೌನ ಕವಿದಿತ್ತು. ಶಾಮುವಂತೂ ಮನೆಯನ್ನೇ ಸೇರುತ್ತಿರಲಿಲ್ಲ. ಎಷ್ಟೋ ದಿನ ರಾತ್ರಿ ಶಾಮುವಿನ ದಾರಿ ಕಾಯುತ್ತಾ ಮೀರ ಕುರ್ಚಿಯ ಮೇಲೆ ನಿದ್ದೆ ಹೋದುದ್ದೂ ಉಂಟು. ಆರಾಮ ಕುರ್ಚಿಯ ಮೇಲೆ ನಿದ್ರಿಸುತ್ತಿದ್ದ ಹೆಂಡತಿಯ ಮೈಮೇಲೆ ಶಾಲೊಂದನ್ನು ಮೆಲ್ಲನೆ ಹೊದಿಸಿ ಶಾಮು ತಾನು ಮಲಗುತ್ತಿದ್ದ. ಬೆಳಿಗ್ಗೆ ಅವಳಿಗೆ ಎಚ್ಚರವಾಗುವುದಕ್ಕೆ ಮುಂಚೆ ಶಾಮು ಗದ್ದೆಯ ಕಡೆ ಹೊರಟು ಹೋಗುತ್ತಿದ್ದ. ಬೆಳಿಗ್ಗೆ ತನ್ನ ಮೈಮೇಲೆ ಶಾಲು ನೋಡಿ ಒಮ್ಮೊಮ್ಮೆ ಮೀರ ಕುಪಿತಳಾಗುತ್ತಿದ್ದಳು.

"ನನ್ನನ್ನು ಎಬ್ಬಿಸಬಾರದಿತ್ತೇ ?" ಎಂದವಳು ಕೇಳಿದಾಗ ಶಾಮು ನಕ್ಕು ಹೊರಟು ಹೋಗುತ್ತಿದ್ದ.

ಮೀರ ಹೊರಡುವ ಹಿಂದಿನ ದಿನ ಶಾಮು ಗಾಡಿಯನ್ನು ಮುಂಜಾವಿಗೆ ಹೂಡುವಂತೆ ನಿಂಗನಿಗೆ ಹೇಳಿದ್ದ. ವೆಂಕಮ್ಮನವರಿಗೆ ಏನಾದರೂ ತಿಂಡಿ ಮಾಡುವಂತೆ ಸೂಚಿಸಿದ್ದ.

ಹಿಂದಿನ ದಿನ ರಾತ್ರಿ ಮೀರ ತನ್ನ ಟ್ರಂಕಿಗೆ ಬಟ್ಟೆಗಳನ್ನು ಹಾಕಿ ಕೊಳ್ಳುವುದನ್ನೇ ನೋಡುತ್ತಾ ಹಾಸಿಗೆಯನ್ನೊರಗಿ ಕುಳಿತ್ತಿದ್ದ.

ಮಿರ ಟ್ರಂಕಿಗೆ ಸಾಧಾರಣವಾದ ವಾಯಿಲ್, ಚೀಟಿ ಸೀರೆಗಳನ್ನು ಹಾಕಿಕೊಳ್ಳುತ್ತಿದ್ದಳು. ಅವಳಿಗೆ ಅತ್ಯಂತ ಪ್ರಿಯವಾಗಿದ್ದ ಜಾರ್ಜೆಟ್ ಸೀರೆಗಳನ್ನೂ, ಶಾಮು ಮೆಚ್ಚುತ್ತಿದ್ದ ಧರ್ಮಾವರದ ಸೀರೆಗಳನ್ನೂ ಬೇರೆ ಯಾಗಿ ತೆಗೆದಿರಿಸುವುದನ್ನು ನೋಡಿ ಶಾಮು ಕೇಳಿದ.

"ಈ ಸೀರೆಗಳು ಬೇಡವೇ ?"

"ಬೇಡ."

"ಅವೆಲ್ಲಾ ಇಲ್ಲಿ ಯಾಕೆ? ನೀನೇ ತಗೊಂಡು ಹೋಗು."

"ಅಯ್ಯೋ ಬೇಡಿ. ನನಗೆ ನೂಲಿನದು ಸಾಕು."

ಎಷ್ಟು ಸೀರೆಗಳಿದ್ದರೂ ತೃಪ್ತಿಯನ್ನೇ ಕಾಣದಿದ್ದ ಮೀರ ಇಂದು ವಿರಕ್ತಳಾಗಿ 'ಏನೂ ಬೇಡ' ಎಂದು ಹೇಳುತ್ತಿರುವುದನ್ನು ನೋಡಿ ಶಾಮುವಿಗೆ ವ್ಯಥೆಯಾಯಿತು. ವ್ಯಥೆಯೊಡನೆ ಕ್ರೋಧವೂ ಹೆಡೆಯಾಡಿಸಿತು. ಶಾಮು ಧಿಗ್ಗನೆ ಎದ್ದು ಬಂದು ಮೀರ ಬೇಡವೆಂದು ತೆಗೆದಿರಿಸಿದ್ದ ಬೆಲೆ ಬಾಳುವ ಸೀರೆ ಗಳನ್ನು ಅವಳ ಟ್ರಂಕಿನಲ್ಲಿಯೇ ಒರಟಾಗಿ ತುರುಕಿ ನಿನ್ನ 'ಸೀರೆಗಳನ್ನೂ ನಿನ್ನ ಜೊತೆ ತಗೊಂಡು ಹೋಗು' ಎನ್ನುತ್ತಾ ಪೆಟ್ಟಿಗೆಯ ಬಾಗಿಲನ್ನು ಟಪ್ಪನೆ ಹಾಕಿದ. ಇದುವರೆವಿಗೂ ಅತ್ಯಂತ ಶಾಂತನಾಗಿದ್ದ ಶಾಮು ಇದ್ದಕ್ಕಿದಂ

ತೆಯೇ ರೇಗಿದುದನ್ನು ನೋಡಿ ಮೀರ ಚಕಿತಳಾದಳು.

ಬೆಳಗಾಯಿತು. ಮೀರ ಸ್ನಾನ, ಫಲಹಾರ ಮುಗಿಸಿ ಹಾಸಿಗೆ ಕಟ್ಟಿಸಿದಳು. ಗಾಡಿಯಾಳು ನಿಂಗ ಮೀರಳ ಸಾಮಾನುಗಳನ್ನು ಗಾಡಿಯಲ್ಲಿರಿಸಿದ. ಮೀರ ವೆಂಕಮ್ಮನವರ ಬಳಿಗೆ ಹೋಗಿ "ನಾನು ಬರುತ್ತೇನೆ" ಎಂದಳು.

"ರಜದಲ್ಲಾದರೂ ಬಾಮ್ಮ."

"ಆಗಲಿ. ನನಗೆ ತಾನೆ ಬೇರೆ ಯಾವ ಮನೆಯಿದೆ. ನೀವು ಬೇಡಾಂದರೂ ಇಲ್ಲಿಗೇ ಬರ್ತೀನಿ."

ಶಾಮು ರೂಮಿನಲ್ಲಿ ಕುಳಿತಿದ್ದ. ಮೀರ ಬಾಗಿಲಿನಲ್ಲಿ ನಿಂತು "ನಾನು ಹೊರಡ್ತೀನಿ" ಎಂದಳು.

"ಒಳ್ಳೆಯದು."

ಮೀರ ರೂಮಿನೊಳಗೆ ಬಂದು ಸದ್ದಾಗುವಂತೆ ರೂಮಿನ ಬಾಗಿಲನ್ನು ಹಾಕಿದಳು. ಶಾಮು ಮಿಸುಕಾಡದೆ ಅಚಲನಾಗಿ ನಿಂತಿದ್ದ. ಮೀರ ನಿಧಾನವಾಗಿ ಹತ್ತಿರ ಬಂದು ಶಾಮುವಿನ ಕಣ್ಣಲ್ಲಿ ಕಣ್ಣಿಟ್ಟು "ನಾನು ಹೋಗ್ತೀನಿ" ಎಂದಳು. ಹಾಗೆ ಹೇಳುವಾಗ ಅವಳ ಮುಖ ಅವನ ಮುಖದ ಹತ್ತಿರಕ್ಕೆ ಬಂದಿತ್ತು.

"ಅಗಲಿ."

ಮೀರ ಒಂದು ಗಳಿಗೆ ಅನುಮಾನಿಸಿ ಬಾಗಿಲಿನ ಕಡೆ ನೋಡಿ, ನಂತರ ತಟ್ಟನೆ ಅವನ ಕ್ರಾಪಿನ ಕೂದಲನ್ನು ಹಿಡಿದು ಜಗ್ಗಿಸಿ, ಅವನ ಮುಖವನ್ನು ಕೆಳಗೆ ಮಾಡಿ ಮುತ್ತಿಟ್ಟಳು. ಶಾಮುವಿನ ಸಹನೆಯ ಕಟ್ಟೆ ಒಡೆಯಿತು. ಅವನ ಕೈಗಳು ಅವಳನ್ನು ಬಿಗಿದವು. ಹೂವಿನಿಂದ ಹೂವಿಗೆ ಹಾರಿ ಮಕರಂದವನ್ನು ರಮಿಸುವಂತೆ ಮೀರ ಅವನ ತಲೆಯ ಮೇಲೆ ಕೈಯಾಡಿಸಿದಳು.

"ನಿಮ್ಮ ಯೋಗಕ್ಷೇಮ ಸರಿಯಾಗಿ ನೋಡಿಕೊಳ್ಳಿ. ವೆಂಕಮ್ಮನವರಿಗೆ ಹಿಂಸೆ ಕೊಡಬೇಡಿ. ಅವರು ಹೇಳಿದ ಹಾಗೆ ಕೇಳಿಕೊಂಡಿರಿ"

"ಹೂಂ"

"ನನ್ನ ಇನ್ನು ಬಿಡ್ತೀರಾ? ನಿಂಗ ಕಾದುಕೊಂಡಿದಾನೆ."

ಶಾಮು ಮೀರಳಿಂದ ದೂರ ನಿಂತ.

ವೆಂಕಮ್ಮನವರು ಮುಂಬಾಗಿಲಿನಲ್ಲಿ ನಿಂತಿದ್ದರು. ಮೀರ ಅವರನ್ನು ನೋಡಿ

"ಇವರೇನಾದರೂ ತಮ್ಮ ಯೋಗಕ್ಷೇಮಾನ ಅಲಕ್ಷ್ಯ ಮಾಡಿದರೆ ನನಗೆ ಕೊಟ್ಟಿರುವ ಭಾಷೇನ ಜ್ಞಾಪಿಸಿ" ಎನ್ನುತ್ತಾ ಗಾಡಿ ಹತ್ತಿದಳು.

ಗಾಡಿಯ ಗಾಲಿಗಳು ಮುಂದಕ್ಕುರುಳಿದವು. ಮೀರ ಗಾಡಿಯೊಳಗಿನಿಂದ ಕೂಗಿದಳು.

"ಪಂಡಿತರು ಇವರಿಗೆ ಮಾಡಿಕೊಟ್ಟಿರುವ ತೈಲ ಬೊಂಬೆ ಬೀರುವಿನಲ್ಲಿದೆ. ಮರೆಯದೇ ಹಚ್ಚಿಕೊಳ್ಳುವಂತೆ ಹೇಳಿ."

ವೆಂಕಮ್ಮನವರು "ಪರವಾಗಿಲ್ಲ, ಗಂಡನ ಮೇಲೆ ಇನ್ನೂ ವಿಶ್ವಾಸವಿದೆ" ಎಂದುಕೊಂಡರು. ವೆಂಕಮ್ಮನವರು ಒಳಗೆ ಬಂದಾಗ ಶಾಮು ರೂಮಿನಲ್ಲಿರಲಿಲ್ಲ.

"ಹುಚ್ಚು ಹುಡುಗ ಆಗಲೇ ಅಲೆದಾಡಲು ಹೊರಟು ಹೋಗಿದಾನೆ" ಎಂದು ಅಕ್ಕರೆಯಿಂದ ಶಾಮುವನ್ನು ಬೈದುಕೊಂಡು ವೆಂಕಮ್ಮನವು ಅಡಿಗೆಯ ಮನೆಗೆ ಹೋದರು.

ಆದರೆ ವೆಂಕಮ್ಮನವರ ಎಣಿಕೆಯಂತೆ ಶಾಮು ಗದ್ದೆಯ ಕಡೆ ಹೋಗಿರಲಿಲ್ಲ. ಮಲಗುವ ಮನೆಗೆ ಹೋಗಿ ಮಂಚದ ಮೇಲೆ ಉರುಳಿಕೊಂಡಿದ್ದ.

ಮದುವೆಯಾದ ಇಷ್ಟು ವರ್ಷಗಳ ನಂತರ ಈ ದಿನವೇ ಮೀರ ತಾನಾಗಿಯೇ ಒಲಿದು ಶಾಮುವಿಗೆ ಮುದ್ದಿಟ್ಟಿದ್ದಳು. ತನ್ನ ದೌರ್ಬಲ್ಯವನ್ನು ಅವಳೆದುರಿಗೆ ಪ್ರದರ್ಶಿಸಿದುದಕ್ಕಾಗಿ ಅವನಿಗೆ ತನ್ನ ಬಗೆಗೇ ತೀರಾ ನಾಚಿಕೆಯಾಯಿತು.

ದೂರದಲ್ಲಿ ರೈಲು ಕೂಗಿದ ಸದ್ದು ಕೇಳಿಸಿತು. ಶಾಮು ಮತ್ತೊಂದು ಪಕ್ಕಕ್ಕೆ ಹೊರಳಿಕೊಂಡ.

* * * * * * * *

ಮೆಡಿಕಲ್ ಕಾಲೇಜಿನ ಹಾಸ್ಟೆಲು ಸ್ಟೇಷನ್ನಿಗೆ ಅತ್ಯಂತ ಸಮೀಪದಲ್ಲಿದ್ದುದರಿಂದ ಮೀರ ಕೂಲಿಯೊಬ್ಬನನ್ನು ಗೊತ್ತುಮಾಡಿಕೊಂಡು ನಡೆದುಕೊಂಡೇ ಹೊರಟಳು.

ಅವಳ ಜೀವನದಲ್ಲಿ ಹಾಸ್ಟೆಲಿನಲ್ಲಿ ವಾಸಮಾಡುತ್ತಿದ್ದುದು ಇದೇ ಮೊದಲು. ಹಾಸ್ಟಲಿನ ಜೀವನ ಹೇಗಿರುತ್ತದೋ ನೋಡಬೇಕು ಎಂಬ ಕುತೂಹಲ ಅವಳಿಗಿತ್ತು.

ಮೀರ ಹಾಸ್ಟಲು ತಲುಪಿ ವಾರ್ಡನ್‌ರವರಿಂದ ತನ್ನ ರೂಮಿನ ಬೀಗದ ಕೈಯನ್ನು ಪಡೆದು ರೂಮಿನ ಬೀಗವನ್ನು ತೆಗೆದಳು. ಅವಳ ರೂಮ್ ಮೇಟ್ ಮನೋರಮಾ ಇನ್ನೂ ಬಂದಿರಲಿಲ್ಲ. ರೈಲು ಪ್ರಯಾಣದಿಂದ ಬಳಲಿದ ಮೀರ ಮಂಚದ ಮೇಲೆ ಹಾಸಿಗೆ ಉರುಳಿಸಿ ಮಲಗಿಕೊಂಡಳು.

ಊಟದ ಗಂಟೆಯಾದೊಡನೆ ತಟ್ಟೆ ಬಟ್ಟಲನ್ನು ತೆಗೆದುಕೊಂಡು

ಹುಡುಗಿಯರು ಊಟದ ಮನೆಯ ಕಡೆ ಹೊರಟರು. ಸೀನಿಯರ್ ಹುಡುಗಿಯರು ಜೂನಿಯರ್ ವಿದ್ಯಾರ್ಥಿನಿಯರಲ್ಲಿ ಯಾವ ವಿಧವಾದ ಕುತೂಹಲವನ್ನಾಗಲಿ, ಆಸಕ್ತಿಯನ್ನಾಗಲಿ ತೋರಿಸಲಿಲ್ಲ. ಅವರೆಲ್ಲರೂ ತಮ್ಮ ಉಪಾಧ್ಯಾಯರ, ಸಹಾಧ್ಯಾಯಿಗಳ ಟೀಕೆಗಳಲ್ಲಿ ಮಗ್ನರಾಗಿದ್ದರು. ತನ್ನಂತೆಯೇ ಪೆಚ್ಚು ಪೆಚ್ಚಾಗಿ ಕುಳಿತಿದ್ದ ಮತ್ತಿಬ್ಬರು ಹುಡುಗಿಯರು ಜೂನಿಯರ್ ವಿದ್ಯಾರ್ಥಿನಿಯರಿರಬೇಕೆಂದು ಮೀರ ಭಾವಿಸಿದಳು. ಅವಳ ಭಾವನೆ ಸುಳ್ಳಾಗಿರಲಿಲ್ಲ.

ಚಿಕ್ಕಮಗಳೂರಿನ ಕಾಫಿ ಪ್ಲಾಂಟರ ಮಗಳು ಡಾಲಿ ಇಂಟರ್ ಮುಗಿಸಿ ಮೆಡಿಕಲ್ ಓದಲು ಬಂದಿದ್ದಳು. ಇಂಟರಿನಲ್ಲಿ ಮೂರನೆ ದರ್ಜೆಯಲ್ಲಿ ಪಾಸಾಗಿದ್ದರೂ ಹಿಂದುಳಿದ ಪಂಗಡ ಎಂಬ ಒಂದೇ ಒಂದು ಅರ್ಹತೆಯ ಮೇಲೆ ಅವಳಿಗೆ ಮೆಡಿಕಲ್ ಕಾಲೇಜಿನಲ್ಲಿ ಸ್ಥಳ ಸಿಕ್ಕಿತ್ತು.

ಊಟಕ್ಕೆ ಕುಳಿತಿದ್ದಾಗ ಮೀರಳಿಗೆ ಡಾಲಿ, ಯಶೋದೆಯ ಪರಿಚಯವಾಯಿತು. ಯಶೋದ ಬಾಟನಿ ಆನರ್ಸ್ ಮುಗಿಸಿ ಮೆಡಿಕಲ್ ಕಾಲೇಜನ್ನು ಸೇರಿದ್ದಳು.

ಊಟ ಮಾಡುವಾಗ ಡಾಲಿ ತನ್ನ ಪುರಾಣ ಬಿಚ್ಚಿದಳು.

" ನನಗೇನೋ ಡಾಕ್ಟರಾಗಬೇಕೂಂತ ಸ್ವಲ್ಪವೂ ಆಸೆಯಿಲ್ಲ. ಮೆಡಿಕಲ್ ಕಾಲೇಜಿನ ಬೆಡಗಿನ ಜೀವನವನ್ನು ಮೋಹಿಸಿ ನಾನು ಇಲ್ಲಿಗೆ ಬಂದೆ. ಇಲ್ಲಿ ಹಾಯಾಗಿ ಯಾರ ಅಂಕೆಯೂ ಇಲ್ಲದೆ ಇರಬಹುದು."

ಅವಳ ಮಾತು ಕೇಳಿ ಮೀರಳಿಗೆ ಜಿಗುಪ್ಸೆಯಾಯಿತು. ಊಟ ಮುಗಿಸಿ ರೂಮಿಗೆ ತೆರಳುವ ಮುನ್ನ ಡಾಲಿ ಮೀರಳಿಗೆ

"ಸಂಜೆ ಷಾಪಿಂಗಿಗೆ ಹೋಗೋಣ. ನಾಳೆ ಕಾಲೇಜಿಗೆ ಉಟ್ಟುಕೊಂಡು ಹೋಗೋಕೆ ನನ್ನ ಹತ್ತಿರ ಒಂದು ಸರಿಯಾದ ಸೀರೆ ಇಲ್ಲ ಬರ್ತೀರಾ?" ಎಂದಳು.

" ಕ್ಷಮಿಸಿ. ನನಗೆ ಬೇರೆ ಕೆಲಸವಿದೆ."

ಸಂಜೆ ಡಾಲಿ ಯುವಕನೊಬ್ಬನೊಡನೆ ಷಾಪಿಂಗಿಗೆ ಹೊರಟಳು. ತನ್ನನ್ನೇ ಪ್ರಶ್ನಾರ್ಥಕವಾಗಿ ನೋಡುತ್ತಿದ್ದ ಮೀರ, ಯಶೋದೆಯ ಕಡೆ ತಿರುಗಿ ಡಾಲಿ

" ಇವರು ನನ್ನ ಕಸಿನ್ " ಎಂದಳು.

ಸಿನಿಮಾ ತಾರೆಯರ ಚಿತ್ರಗಳಿದ್ದ ಬುಷ್‌ಕೋಟ್ ಹಾಕಿಕೊಂಡಿದ್ದ ಆ ತರುಣ ಮೀರ, ಯಶೋದೆಗೆ ಕೈಮುಗಿದು ಡಾಲಿಯೊಡನೆ ಹೊರಟ.

ರಾತ್ರಿಯ ಟ್ರೈನಿನಲ್ಲಿ ಮೀರಳ ರೂಮ್‌ಮೇಟ್ ಮನೋರಮಾ ಹಾಸನದಿಂದ ಬಂದಳು.

ರಾತ್ರಿ ಡೈನಿಂಗ್ ಹಾಲಿನಲ್ಲಿ ಡಾಲಿ ತಾನು ಕೊಂಡ ಸಾಮಾನುಗಳ ವರ್ಣನೆ ಮಾಡಿದಳು. ಅವಳು ಮಾರನೆಯ ದಿನ ಕಾಲೇಜಿಗೆ ಉಡಲು, ಯಾವುದೋ ಚಿತ್ರವೊಂದರಲ್ಲಿ ಪ್ರಸಿದ್ಧ ನಟಿಯೊಬ್ಬಳು ಆತ್ಮಹತ್ಯೆ ಮಾಡಿಕೊಳ್ಳಲು ಹೊರಟಾಗ ಉಟ್ಟಿದ್ದ ಮಾದರಿಯ ಸೀರೆಯನ್ನೇ ತಂದಿದ್ದಳಂತೆ.

ಅವಳ ವರ್ಣನೆ ಕೇಳಿ ಮೀರಳಿಗೆ ತುಂಬಾ ನಗು ಬಂತು.

"ಆದರೆ ನೀವು ಆತ್ಮಹತ್ಯೆಗೆ ಹೊರಟಿಲ್ಲ ತಾನೆ?"

"ಇಲ್ಲಮ್ಮ. ಬದುಕಿನ ಹಣ್ಣಿನ ರುಚಿ ನಾನಿನ್ನೂ ನೋಡಿಲ್ಲ"

"ಆತುರಪಡಬೇಡಿ. ಹಣ್ಣು ಸಿಹಿಯಾಗಿಯೇ ಇರುತ್ತೇಂತ ಏನು ಖಾತ್ರಿ? ಕಹಿಯಾಗಿಯೂ ಇರಬಹುದಲ್ಲವೇ?"

"ನನ್ನ ಹೆದರಿಸಬೇಡೀಪ್ಪ."

"ಇಲ್ಲಮ್ಮ ಇಲ್ಲ. ಧೈರ್ಯವಾಗಿ ಜೀವನ ಎದುರಿಸಿ."

ಮೀರಳ ರೂಮಿನ ಬಳಿ ಎಲ್ಲರೂ ಚದುರಿದರು. ಮೀರಳಿಗೆ ರಾತ್ರಿ ಚೆನ್ನಾಗಿ ನಿದ್ದೆ ಬರಲಿಲ್ಲ. ಹೊಸ ಜಾಗ, ಹೊಸ ಬಗೆಯ ಜೀವನ ಅವಳಲ್ಲಿ ಅಧೈರ್ಯವನ್ನು ಹುಟ್ಟಿಸಿದವು.

ಮೀರ ಸುತ್ತಲೂ ನೋಡಿದಳು. ಎದುರು ಮಂಚದ ಮೇಲೆ ಮನೋರಮಾ ಸುಖವಾಗಿ ಮಲಗಿ ನಿದ್ರಿಸುತ್ತಿದ್ದಳು.

ಈಗ ಅವರೇನು ಮಾಡ್ತಿದಾರೋ? ಹೋದ ಕೂಡಲೇ ಕಾಗದ ಹಾಕು ಎಂದಿದ್ದರು. ತಾನು ಮರೆತೇ ಬಿಟ್ಟಿದ್ದಳು.

ಮೀರ ತಟ್ಟನೆ ಮೇಲೆದ್ದು ದೀಪ ಹಚ್ಚಿ ಕಾಗದ ಬರೆಯತೊಡಗಿದಳು. ದೀಪ ಹಾಕಿದೊಡನೆ ಮನೋರಮಾಗೆ ಎಚ್ಚರವಾಯಿತು.

"ಏನು ಮಾಡ್ತಿದೀರಿ ಮೀರ?"

"ಕಾಗದ ಬರೀತಿದೀನಿ."

"ಯಾರಿಗೆ?"

"ಮನೆಯವರಿಗೆ."

"ಪಾಪ! ಅಮ್ಮನ್ನ ಬಿಟ್ಟಿರಲಾರಿರಿ ಅಂತ ತೋರುತ್ತದೆ. ಅಲ್ಲವೇ?"

ಮೀರ ಮಾತನಾಡಲಿಲ್ಲ. ಅವಳು ಕಾಗದ, ಪೆನ್ನು ತೆಗೆದಿಟ್ಟು ದೀಪ ಆರಿಸಿದಳು.

"ಯಾಕೆ ಕಾಗದ ಬರೆಯೋಲ್ಲವೇ?"

" ನಾಳೆ ಬರೀತೀನಿ."

" ಹೋಗಲಿ. ಈಗ ನಿದ್ದೆ ಮಾಡಿ. ಗುಡ್ ನೈಟ್.''

ಮಾರನೆಯ ದಿನ ಮೀರ ಕಾಲೇಜಿಗೆ ಹೊರಟಳು. ಅನೇಕ ವರ್ಷಗಳ ತಪಸ್ಸಿನ ಪ್ರತಿಫಲವಾಗಿ ಅವಳು ಈ ವಿದ್ಯಾಮಂದಿರದೆದುರಿನಲ್ಲಿ ಭಕ್ತೆಯಾಗಿ ನಿಂತಿದ್ದಳು.

ಮೀರ ಕಾಂಪೌಂಡಿಗೆ ಕಾಲಿಡುತ್ತಿದ್ದಂತೆಯೇ ಹಿಂದಿನಿಂದ ಯಾರೋ ಬಂದು ಮೀರಳ ಬೆನ್ನಿನ ಮೇಲೆ ಮೃದುವಾಗಿ ಹೊಡೆದರು. ಮೀರ ಬೆಚ್ಚಿ ತಿರುಗಿ ನೋಡಿದಳು.

" ವಿಜಯ ಪರಾಂಜಪೆ !"

" ಜೀ ಹಾಂ. ತಾವು ಹೇಗಿದೀರಿ ?" ವಿಜಯ ನಗುತ್ತಾ ಪ್ರಶ್ನಿಸಿದಳು. ಉಂಗುರದ ಮಾದರಿಯ ಲೋಲಕ್ಕು ಅವಳ ಗೋಧಿ ಬಣ್ಣದ ಕೆನ್ನೆಯ ಮೇಲೆ ತೂಗಾಡಿತು. ಅವಳ ಶಿಶುಮುಖ ಆನಂದಿಂದ ಅರಳಿತ್ತು.

" ನೀವೆಲ್ಲಿ ತಪ್ಪಿಸಿಕೊಂಡು ಬಿಡ್ತೀರೋಂತ ಹೆದರಿಕೆಯಾಗಿತ್ತು."

" ಏನೋ ಅದೃಷ್ಟ ಚೆನ್ನಾಗಿತ್ತು."

ಪ್ರೀ ಮೆಡಿಕಲ್‌ನಲ್ಲಿ ಒಂಭತ್ತು ಜನ ಹುಡುಗಿಯರಿದ್ದರು. ಮೀರ ಸೀನಿಯರ್ ವಿದ್ಯಾರ್ಥಿಗಳನ್ನು ಭಯಭಕ್ತಿಯಿಂದ ನೋಡಿದಳು. ಅವರು ಆಗಲೇ ದೇಹದ, ಸೃಷ್ಟಿಯ ರಹಸ್ಯ, ವೈಚಿತ್ರ್ಯಗಳನ್ನೆಲ್ಲ ತಿಳಿದುಕೊಂಡಿರುವರಲ್ಲವೇ ?

ತರಗತಿಗಳು ಮೊದಲಾದವು. ದಿನಗಳು ಉರುಳಿದುವು. ಮೆಡಿಕಲ್ ಕಾಲೇಜಿಗೆ ಮೀರ ಹಳಬಳಾದಳು.

ವಿಜಯ, ಮೀರ ಗೆಳತಿಯರಾದರು. ತಾನು ಬಾಟನಿ ಆನರ್ಸ್ ಮಾಡಿ ಬಂದಿರುವೆನೆಂಬ ಜಂಭ ಯಶೋದೆಗಿತ್ತು. ಡಾಲಿಯನ್ನಂತೂ ಯಾರೂ ಮಾತನಾಡಿಸುವ ಹಾಗೇ ಇರಲಿಲ್ಲ. ಅವಳ ತಂದೆ ಮಗಳು ಕೇಳಿದಾಗಲೆಲ್ಲಾ ಊರಿನಿಂದ ಹಣ ಕಳಿಸುತ್ತಿದ್ದರು. ಡಾಲಿ ಆ ಹಣವನ್ನು ಸೀರೆ, ಸಿನಿಮಾ, ಹೋಟಲು, ಕಾಸ್ಮೆಟಿಕ್ಸ್ ಮೊದಲಾದವುಗಳಿಗಾಗಿ ಖರ್ಚು ಮಾಡುತ್ತಿದ್ದಳು. ಸಾಲದುದಕ್ಕೆ ವಾರಕ್ಕೆರಡು ಮೂರು ಬಾರಿಯಾರಾದರೂ ಅವಳ ' ಕಸಿನ್'ಗಳು ಬರುತ್ತಿದ್ದರು.

ಒಂದು ಭಾನುವಾರ ಡಾಲಿ ಇಂಗ್ಲಿಷ್ ಚಿತ್ರವೊಂದಕ್ಕೆ ಹೊರಟಿದ್ದಳು. ಅದಕ್ಕೆ ಮೂರು ದಿನದಿಂದಲೂ ಮೀರಳನ್ನೂ ತನ್ನೊಡನೆ ಬರುವಂತೆ ಒತ್ತಾಯ ಮಾಡಿದ್ದಳು.

ಇಂಗ್ಲಿಷ್ ಚಿತ್ರಗಳೆಂದರೆ ಮೀರಳಿಗೇನೋ ಆಸೆ. ಆದರೆ ಡಾಲಿಯೊಡನೆ ಹೋಗುವುದು ಮೀರಳಿಗಿಷ್ಟವಿರಲಿಲ್ಲ. ಡಾಲಿಯ ಒತ್ತಾಯಕ್ಕೆ ಕಟ್ಟುಬಿದ್ದು 'ಕಂಟ್ರಿಗರ್ಲ್' ಚಿತ್ರವನ್ನು ನೋಡಲು ಮೀರ ಒಪ್ಪಿಕೊಂಡಳು. 'ಕಂಟ್ರಿ ಗರ್ಲ್' ಉತ್ತಮವೆಂದು ಎಲ್ಲ ವಿಮರ್ಶಕರೂ ಹೊಗಳಿದ್ದರು. ಆದರೆ ಒಂದು ಶರತ್ತಿನ ಮೇಲೆ ಮೀರ ಅವಳೊಡನೆ ಚಿತ್ರಕ್ಕೆ ಹೋಗಲು ಒಪ್ಪಿಕೊಂಡಳು.

"ನಿಮ್ಮ ಕಸಿನ್ ಯಾರೂ ಬರುವುದಿಲ್ಲ ತಾನೆ?"

ಡಾಲಿಯ ಮುಖ ಕೆಂಪಾಯಿತು. ಅವಳು ತಡವರಿಸುತ್ತಾ "ಇಲ್ಲ" ಎಂದಳು.

"ಈಗಲೇ ಹೇಳಿಬಿಡಿ. ನಿಮ್ಮ ಕಸಿನ್ ಯಾರಾದರೂ ಬರುವ ಹಾಗಿದ್ದರೆ ನಾನು ಬರೋದಿಲ್ಲ."



"ಯಾರೂ ಬರೋದಿಲ್ಲ."

ಮೀರ ಡಾಲಿಯೊಡನೆ ಚಿತ್ರಕ್ಕೆ ಹೊರಟಳು. ಡಾಲಿ ತಾನೇ ಮುಂದುವರಿದು ಬಾಲ್ಕನಿಗೆ ಟಿಕೆಟ್ಟು ತೆಗೆದುಕೊಂಡಳು. ಮೆಟ್ಟಲಿನ ಬಳಿಯೇ ಡಾಲಿಯ 'ಫೇರ್ ಕಸಿನ್' ಕಾಯುತ್ತಿದ್ದ.

"ಹಲೋ ಡಾಲಿ, ನೀನೂ ಚಿತ್ರಕ್ಕೆ ಬಂದೆಯಾ?"

"ಹೂಂ. ಈಕೆ ಮೀರಾ, ಇವರು ನನ್ನ ಕಸಿನ್ ಜಾನಿ."

"ಜಾನಿ!"

ಮೀರ ಬೆಚ್ಚಿದಳು. ವೀಣಳ ಮುಖ ಅವಳ ಮುಂದೆ ತೇಲಿ ಬಂದಂತಾಯಿತು. ಶಾಮು ವೀಣಳನ್ನು 'ಜಾನಿ' ಎಂದು ಕರೆಯುತ್ತಿರಲಿಲ್ಲವೇ? ಮೀರ ಬಿಗಿಯಾಗಿ ಮೆಟ್ಟಲಿನ ಕಟಕಟೆಯನ್ನು ಹಿಡಿದುಕೊಂಡಳು.

"ಏನಾಯಿತು?" ಜಾನಿ ಕೇಳಿದ.

"ಏನಿಲ್ಲ. ತಲೆ ತಿರುಗಿದಂತಾಯಿತು."

ಜಾನಿ ಬಹಳ ನಮ್ರತೆಯಿಂದ ತನ್ನ ಬಲಗೈಯನ್ನು ಅವಳಿಗೆ ಆಸರೆ ಕೊಡುವುದಕ್ಕಾಗಿ ನೀಡಿದ.

"ಕೈ ಹಿಡಿದುಕೊಂಡು ಹೋಗುವಂತಹ ಪ್ರಮಾದವೇನೂ ಆಗಿಲ್ಲ" ಎಂದು ಮೀರ ನಮ್ರವಾಗಿ ಹೇಳಿದಳು.

ಚಿತ್ರ ಮುಗಿದು ಹಾಸ್ಟೆಲಿಗೆ ಬಂದೊಡನೆಯೇ ಮೀರ ಡಾಲಿಯನ್ನು ತರಾಟೆಗೆ ತೆಗೆದುಕೊಂಡಳು.

"ನಿಮ್ಮ ಫೇರ್ ಕಸಿನ್ ಯಾಕೆ ಬಂದಿದ್ದ? ನೀವೇ ಕರೆದಿದ್ದಿರಾ?"

ಡಾಲಿ ತಬ್ಬಿಬ್ಬಾಗಿ ನುಡಿದಳು.

"ಇಲ್ಲ. ಅವನು ಬಂದಿದ್ದು ಆಕಸ್ಮಿಕ ಅಷ್ಟೆ."

"ನಿಜ ಹೇಳಿ. ಸುಳ್ಳಾಡಬೇಡಿ. ನೀವು ಸುಳ್ಳು ಹೇಳ್ತಿದೀರೀಂತ ನನಗೆ ಗೊತ್ತಾಗಿದೆ. ನೀವು ಮುಂಚೇನೆ ಅವನಿಗೆ ಚಿತ್ರಕ್ಕೆ ಹೋಗುವ ಸೂಚನೆ ಕೊಟ್ಟು ಆಮೇಲೆ ನನ್ನೂ ಕರ್ಕೊಂಡು ಹೋಗಿದೀರಿ ಅಲ್ವೆ ?"

ಡಾಲಿ ನಿಜವನ್ನು ಒಪ್ಪಿಕೊಂಡಳು.

"ನನ್ನದು ತಪ್ಪಾಯಿತು ಮೀರ. ನನ್ನ ಕಸಿನ್ ನಾವಿಬ್ಬರೂ ಮಾರ್ಕೆಟ್ಟನಲ್ಲಿ ಹೋಗುತ್ತಿದ್ದಾಗ ನೋಡಿದನಂತೆ. ಅಂದಿನಿಂದ ಒಂದೇ ಸಮ ನಿಮ್ಮನ್ನು ಪರಿಚಯ ಮಾಡಿಕೊಡೆಂದು ನನ್ನ ಪ್ರಾಣ ಹಿಂಡಿದ. ನಾನೂ ಎಷ್ಟೋ ಹೇಳಿದೆ 'ಬೇಡ. ಆಕೆ ಬಹಳ ಸೀರಿಯಸ್' ಅಂತ. ಆದರೆ ಅವನು ಬಿಡಲಿಲ್ಲ. 'ನೀನು ಜಲಸ್ ಆಗಿದೀಯಾಂ'ತ ರೇಗಿಸಿದ. ಅದಕ್ಕೆ ನಿಮ್ಮನ್ನ ಅವನಿಗೆ ಗುರುತು ಮಾಡಿಸೋದಕ್ಕೆ ಒಪ್ಪಿಕೊಂಡೆ. ಚಿತ್ರಕ್ಕೆ ಕರ್ಕೊಂಡು ಬಾಂತ ಹೇಳಿದ್ದೂ ಅವನ ಸಲಹೆಯೇ, ನನ್ನದಲ್ಲ."

ಮೀರ ಗಂಭೀರ ಧ್ವನಿಯಿಂದ ಹೇಳಿದಳು

"ನಿಮ್ಮ ಕಸಿನ್‌ಗೆ ಹೇಳಿಬಿಡಿ—ಪರಿಚಯವಿದೇಂತ ಸಲಿಗೆಗೆ ಪ್ರಯತ್ನಿಸದಿರಲಿ. ಅವನೇನಾದರೂ ಬೀದೀಲಿ ಮಾತುಗೀತಾಡಿಸೋಕೆ ಪ್ರಯತ್ನಿಸಿದರೆ........" ಮೀರಳ ಕಣ್ಣು ಮಂಚದ ಕೆಳಗಿದ್ದ ಚಪ್ಪಲಿಯ ಕಡೆ ಹರಿಯಿತು.

ಡಾಲಿಯ ಮುಖದ ಮೇಲೆ ಬೆವರು ಹನಿಗಳು ಮೂಡಿದವು.

"ಆಗಲಿ. ನಾನಿನ್ನು ಬರ್ತೀನಿ."

"ಒಂದು ನಿಮಿಷ ನಿಲ್ಲಿ" ಎನ್ನುತ್ತಾ ಮೀರ ತನ್ನ ಪರ್ಸನ್ನು ತೆಗೆದು ಒಂದೂಕಾಲು ರೂಪಾಯನ್ನು ಡಾಲಿಯ ಕೈಲಿರಿಸಿ "ನನ್ನ ಟಿಕೀಟಿನ ಹಣ ಇದು. ನಿಮ್ಮ ಹಂಗು ನನಗೆ ಬೇಡ" ಎಂದಳು.

"ಬೇಡ, ಬೇಡ ಸ್ನೇಹಿತರೂಂದ ಮೇಲೆ...."

"ನಮ್ಮ ನಿಮ್ಮ ಸ್ನೇಹ ಹಣದ ವಿಷಯಕ್ಕೆ ಬೇಡ."

ಡಾಲಿ ಹಣ ತೆಗೆದುಕೊಂಡು ಹೊರಟುಹೋದಳು. ಮೀರಳನ್ನು ಮತ್ತೆ ಮಾತನಾಡಿಸುವ ಸಾಹಸ ಅವಳಲ್ಲಿರಲಿಲ್ಲ.

ಡಾಲಿಯ ಸಂಧಾನ ಯತ್ನ ಮೀರಳಿಂದ ಕೇಳಿ ವಿಜಯಾ ಬೆಟ್ಟು ಕಚ್ಚಿದಳು.

"ನೀವಾಗುವ ಹೊತ್ತಿಗೆ ಸುಮ್ಮನಿದ್ದಿರಿ. ನಾನಾಗಿದ್ದರೆ ಥಿಯೇಟರಿನಲ್ಲೇ ಇಬ್ಬರಿಗೂ ಚಪ್ಪಲಿಯಿಂದ ಹೊಡೆದು ಮನೆಗೆ ಬರುತ್ತಿದ್ದೆ."

"ಡಾಲಿಯ ಕಸಿನ್‌ಗಳ ಕಾಟವಂತೂ ಹೇಳೋಕಾಗೋದಿಲ್ಲ. ದಿನಕ್ಕೆ ಒಬ್ಬೊಬ್ಬ ಕಸಿನ್ ಬರ್‍ತಾನೆ. ಅವರೇನು ನಿಜವಾದ ಕಸಿನ್‌ಗಳೋ ಅಥವಾ........"

"ಅವಳ ಪಾಡು ಹಾಳಾಗಲಿ. ನಮಗೇಕೆ? ನಮ್ಮ ತಂಟೆಗೆ ಅವರು ಬರದಿದ್ದರೆ ಸಾಕು."

ಅಂದಿನಿಂದ ಡಾಲಿ ಮೀರಳನ್ನು ಎಲ್ಲಿಗೂ ಕರೆಯುತ್ತಿರಲಿಲ್ಲ.

ಕೃಷ್ಣಪ್ಪನವರು ಆಗಾಗ್ಗೆ ಮೀರಳನ್ನು ನೋಡಲು ಬರುತ್ತಿದ್ದರು. ಅವರು ಬಂದು ಹೋಗುವವರೆವಿಗೆ ಮಾತನಾಡುತ್ತಿದ್ದ ವಿಷಯ ಒಂದೇ ಆಗಿತ್ತು.

"ಓದುವುದು ಬೇಡ. ಶಾಮುವಿನೊಡನೆ ಸಂಸಾರ ಮಾಡಿಕೊಂಡಿರು."

ಅವರ ಮಾತು ಕೇಳಿ ಕೇಳಿ ಮೀರಳಿಗೆ ತಲೆ ಚಿಟ್ಟು ಹಿಡಿದುಹೋಗುತ್ತಿತ್ತು. ಅವರು ಬಂದು ಹೋದ ಎರಡು ದಿನಗಳು ಮೀರಳ ಕಿವಿಯಲ್ಲಿ ದೊಡ್ಡಪ್ಪನ ಮಾತುಗಳೇ ಪ್ರತಿಧ್ವನಿಸುತ್ತಿದ್ದವು. ಯಾವುದೋ ಒಂದು ರೀತಿಯಲ್ಲಿ ಸಮಾಧಾನಕ್ಕೆ ಬರುತ್ತಿದ್ದ ಮನಸ್ಸು ಗಾಳಿ ಬೀಸಿದಾಗ ಹತ್ತಿಕೊಳ್ಳುವ ಉರಿಯಂತೆ ಹತ್ತಿಕೊಳ್ಳುತ್ತಿತ್ತು. ಈ ಅಶಾಂತಿಯಿಂದಾಗಿ ಅವಳ ಮನಸ್ಸು ಸ್ಥಿರವಾಗಿ ನಿಲ್ಲುತ್ತಿರಲಿಲ್ಲ. ಕ್ಲಾಸಿನಲ್ಲಿ ಮಾಡಿದ ಪಾಠಗಳು ತಲೆಗೆ ಹಿಡಿಯುತ್ತಿರಲಿಲ್ಲ. ಏನು ಮಾಡಬೇಕೆಂಬುದೇ ಮೀರಳಿಗೆ ತೋರದಾಯಿತು. ಯಾವುದೂ ಬಗೆ ಹರಿಯದೆ ಮೀರ ಶಾಮುವಿಗೆ ಕಾಗದ ಬರೆದಳು. ಕಾಗದದಲ್ಲಿ ದೊಡ್ಡಪ್ಪನಿಂದ ತನಗಾಗುತ್ತಿದ್ದ ತೊಂದರೆಯನ್ನು ವಿವರಿಸಿ, ಹೇಗಾದರೂ ಮಾಡಿ ಅವರು ಹಾಸ್ಟಲಿಗೆ ಬರುವುದನ್ನು ತಪ್ಪಿಸುವಂತೆ, ಅಥವಾ ಬಂದರೂ ಈ ವಿಷಯ ಮಾತನಾಡದಂತೆ ಮಾಡಬೇಕೆಂದು ಶಾಮುವನ್ನು ಕೇಳಿಕೊಂಡಿದ್ದಳು.

ಮೀರ ಶಾಮುವಿಗೆ ಕಾಗದ ಬರೆದ ಹದಿನೈದು ದಿನಗಳ ಮೇಲೆ ಒಂದು ದಿನ ಕೃಷ್ಣಪ್ಪನವರು ಮೀರಳನ್ನು ನೋಡಲು ಹಾಸ್ಟೆಲಿಗೆ ಬಂದರು.

ಪ್ರೀ ಮೆಡಿಕಲ್ ಪರೀಕ್ಷೆ ಆಗಲೇ ಹತ್ತಿರವಾಗುತ್ತಿದ್ದುದರಿಂದ ಮೀರ ಕೈಲಿ ಪುಸ್ತಕ ಹಿಡಿದು, ಹಾಸ್ಟಲಿನ ಕಾಂಪೌಂಡಿನಲ್ಲಿದ್ದ ಮರವೊಂದರ ಕೆಳಗೆ ಓದುತ್ತಿದ್ದಳು. ವಾರ್ಡನ್ನರ ಸಮ್ಮತಿ ಪಡೆದು ಕೃಷ್ಣಪ್ಪನವರು ವಿಸಿಟರ್ಸ್ ರೂಮಿಗೆ ಹೋದರು. ಮನೋರಮಾ ಓಡಿ ಬಂದು

"ನಿಮ್ಮ ದೊಡ್ಡಪ್ಪ ಬಂದಿದಾರೆ" ಎಂದಳು.

ಮೀರ ಹುಬ್ಬು ಗಂಟಿಕ್ಕಿ ಬೇಸರದಿಂದ "ಸರಿ" ಎನ್ನುತ್ತಾ ಪುಸ್ತಕ

ವನ್ನು ಮುಚ್ಚಿ ವಿಸಿಟರ್ಸ್ ರೂಮಿಗೆ ಹೋದಳು.

ವಿಸಿಟರ್ಸ್ ರೂಮಿನಲ್ಲಿ ಕೃಷ್ಣಪ್ಪನವರ ಹೊರತು ಬೇರೆ ಯಾರೂ ಇರಲಿಲ್ಲ. ದೊಡ್ಡಪ್ಪನನ್ನು ಕಂಡೊಡನೆ ಮೀರ ಹಸನ್ಮುಖದಿಂದ

" ಏನು ಸಮಾಚಾರ ?" ಎಂದಳು.

" ಶಾಮು ಬಂದಿದ್ದ. ಇವತ್ತು ಬೆಳಿಗ್ಗೆ ಬಂದು ಮಧ್ಯಾಹ್ನದ ರೈಲಿಗೆ ಹೊರಟು ಹೋದ...."

" ಏನು !"

ಮೀರಳ ಮುಖದಲ್ಲಿದ್ದ ಆಶ್ಚರ್ಯ ಗಮನಿಸಿ ದೊಡ್ಡಪ್ಪ ಕೇಳಿದರು.

" ಯಾಕೆ ನಿನ್ನ ನೋಡೋಕೆ ಬರಲಿಲ್ಲವೇನು ?"

" ಇಲ್ಲ. ಅಲ್ಲೇ ಊಟ ಮಾಡಿ ಹೋದರೇನು ?"

" ಹೂಂ. 'ರೈಲಿಗೆ ಹೋಗುವಾಗ ಹಾಸ್ಟೆಲಿಗೆ ಹೋಗಿ ನಿನ್ನ ನೋಡಿಕೊಂಡು ಹೋಗುತ್ತೇನೆ' ಎಂದು ಹೇಳಿದ. ಯಾಕೆ ಬರಲಿಲ್ಲವೋ ?"

ಮೀರ ತನ್ನ ಭಾವನೆಗಳನ್ನು ಅದುಮಿ " ರೈಲಿಗೆ ಹೊತ್ತಾಯಿತೂಂತ ಏನಾದರೂ ಹೊರಟು ಹೋದರೋ ಏನೋ " ಎಂದಳು.

ಕೃಷ್ಣಪ್ಪನವರು ಸುತ್ತಲೂ ನೋಡಿ ದನಿ ತಗ್ಗಿಸಿ

" ಮೀರಾ, ನೀನು ಶಾಮು ಜಗಳವಾಡಿರುವಿರಾ ?" ಎಂದರು.

" ಇಲ್ಲ."

" ಹಾಗಾದರೆ ಶಾಮು ನಿನ್ನ ನೋಡೋಕೆ ಯಾಕೆ ಬರಲಿಲ್ಲ ?"

" ನನಗೆ ಗೊತ್ತಿಲ್ಲ. ಆದರೆ ನಿಮ್ಮನ್ನು ನೋಡೋಕೆ ಯಾಕೆ ಬಂದಿದ್ದರು ?"

" ಇಲ್ಲಿಗೆ ಏನೋ ಕೆಲಸದ ಮೇಲೆ ಬಂದಿದ್ದನಂತೆ. ಹಾಗೇ ನನ್ನ ನೋಡಿ ತುಂಬಾ ದಿನವಾಯಿತೂಂತ ಬಂದನಂತೆ. ನಾನು ಇದುವರೆವಿಗೂ ನಿನ್ನ ತಪ್ಪು ತಿಳಿದುಕೊಂಡಿದ್ದೆ ಮೀರ. ಈ ದಿನ ನಿಜಸಂಗತಿ ಶಾಮುವಿನಿಂದ ತಿಳಿಯಿತು."

" ಯಾವ ಸಂಗತಿ ?"

" ನೀನೇ ಹಠ ಮಾಡಿ ಓದಲು ಗಂಡನನ್ನೂ ಬಿಟ್ಟು ಇಲ್ಲಿಗೆ ಬಂದಿರಬೇಕೆಂದು ನಾನು ಭಾವಿಸಿದ್ದೆ. ಅದಕ್ಕೇ ನಿನಗೆ ಪುನಃ ಹಳ್ಳಿಗೆ ಹೊರಟು ಹೋಗುವಂತೆ ಬಲವಂತ ಮಾಡುತ್ತಿದ್ದೆ. ಇವತ್ತು ಏನೋ ಮಾತಿಗೆ ಮಾತು ಬಂದು ಶಾಮು ಹೇಳಿದ—ಅವನು ತಾನಾಗಿಯೇ ನಿನ್ನ ಓದಲು ಕಳಿಸಿದಾನಂತೆ. ಹೌದೆ ?"

"ಹೌದು."

"ನೀನು ಓದಿ ವೈದ್ಯಳಾಗಿ ಅವರ ಹಳ್ಳಿಯ ಸಂಸಾರಗಳಿಗೆ ಸಾಧ್ಯವಾದಷ್ಟು ಸೇವೆ ಮಾಡಲಿ ಎನ್ನುವ ಉದ್ದೇಶದಿಂದ ನಿನ್ನ ಇಲ್ಲಿಗೆ ಕಳಿಸಿರುವುದಾಗಿ ಅವನೇ ಹೇಳಿದ. ಒಟ್ಟನಲ್ಲಿ ಶಾಮು ಚಿನ್ನದಂತಹ ಹುಡುಗ."

ಕೃಷ್ಣಪ್ಪನವರು ಹೊರಟು ಹೋದೊಡನೆ ಮೀರಾ ತನ್ನ ರೂಮಿಗೆ ಓಡಿ ಹೋಗಿ ಕಾಗದ, ಪೆನ್ನನ್ನು ಕೈಲಿ ಹಿಡಿದು ಶಾಮುವಿಗೆ ಕೃತಜ್ಞತೆಯನ್ನರ್ಪಿಸಿ ದೊಡ್ಡದೊಂದು ಪತ್ರ ಹಾಕಿದಳು.

ಶಾಮು ತನ್ನನ್ನು ನೋಡದೆ ಹೊರಟು ಹೋದುದು ಅವಳ ಮನಸ್ಸಿಗೆ ಪಿಚ್ಚೆನಿಸಿತು. ಆದರೆ ಶಾಮು ತನ್ನನ್ನು ನೋಡಬೇಕಿತ್ತು ಎಂದು ತಾನು ಬಯಸುವುದಾದರೂ ಸರಿಯೇ? ಅದರಲ್ಲೂ ತಾನಾಗಿಯೇ ಅವನನ್ನು ತೊರೆದು ಬಂದಿರುವಾಗ? ತಾನು ಅವನಿಂದ ಬಹಳ ನಿರೀಕ್ಷಿಸಬಾರದಲ್ಲವೇ? ಆದರೂ ....ಆದರೂ....ಅವರೊಂದು ಬಾರಿ ಇಲ್ಲಿಗೆ ಬಂದಿದ್ದರೆ?

ಮೀರ ಪರೀಕ್ಷೆಯಲ್ಲಿ ಚೆನ್ನಾಗಿಯೇ ಮಾಡಿದ್ದಳು. ಅವಳು ತನ್ನ ತನು, ಮನ, ಧನವನ್ನೆಲ್ಲಾ ತನ್ನ ಕನಸಿನ ಮಹಲನ್ನು ಕಟ್ಟಲು ಧಾರೆ ಎರೆದಿದ್ದಳು. ಮೊದಲನೆಯ ತರಗತಿ ಬರುವುದರಲ್ಲಿ ಯಾವ ಸಂಶಯವೂ ಇರಲಿಲ್ಲ.

ಪರೀಕ್ಷೆ ಮುಗಿಸಿಕೊಂಡು ಮೀರ ಹಳ್ಳಿಗೆ ಹೊರಟಳು. ಅವಳು ಹಳ್ಳಿಗೆ ಹೊರಟ ದಿನವೇ ಡಾಲಿಯೂ ತನ್ನೂರಿಗೆ ಹೊರಟಿದ್ದಳು. ಡಾಲಿಯನ್ನು ಬೀಳ್ಕೊಡಲು ಅವಳ ಏಳೆಂಟು ಯುವಕ 'ಕಸಿನ್ಸ್' ಬಂದಿದ್ದರು. ಎಲ್ಲರ ಕೈಯಲ್ಲೂ ಹೊಗೆ ಕಾರುತ್ತಿದ್ದ ಸಿಗರೇಟು. ಡಾಲಿ ತನ್ನ 'ಫೇರ್ ಕಸಿನ್'ನನ್ನು ಒರಗಿಕೊಂಡೇ ನಿಂತು ಕಿಲಕಿಲನೆ ನಗುತ್ತಿದ್ದಳು. ಅವಳ ಕೈಯಲ್ಲಿ ಏಳೆಂಟು ಆಂಗ್ಲ ಸಿನಿಮಾ ಪತ್ರಿಕೆಗಳಿದ್ದವು.

ಮೀರಳನ್ನು ನೋಡಿ ಡಾಲಿಯ 'ಫೇರ್ ಕಸಿನ್' ಹಲ್ಲು ಕಿರಿದ. ಮೀರ ಹುಬ್ಬು ಗಂಟಿಕ್ಕಿ ಸರಸರನೆ ಹೋಗಿ ಕಂಪಾರ್ಟ್‌ಮೆಂಟಿನಲ್ಲಿ ಕುಳಿತು, ಬೇರೆ ಕಡೆ ಮುಖ ತಿರುಗಿಸಿಕೊಂಡಳು.

"ಇಂಥಾ ಗುಗ್ಗೂಗಳೆಲ್ಲಾ ಮೆಡಿಕಲ್ ಕಾಲೇಜಿಗೆ ಯಾಕಾದರೂ ಬರುತ್ತವೊ?" ಡಾಲಿಯ ಚಿತ್ರವಿಚಿತ್ರ ಬುಷ್‌ಕೋಟಿನ ಕಸಿನ್ ಹೇಳಿದ.

"ಬಾಯ್ ಫ್ರೆಂಡ್ಸ್ ಇಲ್ಲದ ಮೇಲೆ ಅದೆಂಥಾ ಜೀವನವೋ?"

"ಅಮೆರಿಕಾದಲ್ಲಿ ಹುಡುಗಿಯರು ತಮಗೆ ಬಾಯ್ ಫ್ರೆಂಡ್ಸ್ ಹೆಚ್ಚಿಗೆ ಇದ್ದಷ್ಟೂ ತಮ್ಮ ಗೌರವ ಹೆಚ್ಚಿದಂತೆ ಎಂದು ಭಾವಿಸಿದ್ದಾರೆ. ನಮ್ಮ ದೇಶ ಇನ್ನೂ ಮುಂದುವರಿಯಬೇಕು ಜಾನಿ."

"ಜಾನಿ !"

ಮತ್ತೆ ಅದೇ ಹೆಸರು. ಯಾವ ಹೆಸರನ್ನು ಅವಳು ಮರೆಯಲು ಯತ್ನಿಸುತ್ತಿದ್ದಳೋ ಮತ್ತೆ ಅದೇ ಹೆಸರು ಬಂದು ಅವಳ ಕಿವಿಯ ಮೇಲೆ ಅಪ್ಪಳಿಸುತ್ತಿತ್ತು.

"ಸ್ಟೂಡೆಂಟ್ ದಿನಗಳಲ್ಲಿ ಪೆಟ್ಟಿಂಗ್ ಮತ್ತು ನೆಕಿಂಗ್ ಇಲ್ಲದ ಮೇಲೆ ಅದೆಂಥಾದೋ ?"

"ಹಿಯರ್ ಹಿಯರ್."

ಮೀರಳ ಪುಣ್ಯಕ್ಕೆ ಟ್ರೈನು ಹೊರಟಿತು. ಡಾಲಿಯೊಬ್ಬಳ ವಿನಾ ಅವಳ ಇತರ ಕಸಿನ್ನುಗಳು ಕೈವಸ್ತ್ರ ಬೀಸಿದರು. ಮೀರ ನಿಟ್ಟುಸಿರು ಬಿಟ್ಟು ಸೀಟ ನ್ನೊರಗಿ ಕುಳಿತುಕೊಂಡಳು.

ಶಾಮುವಿಗೆ ಮೀರ ಬರುವ ಸಂಗತಿ ತಿಳಿದಿರಲಿಲ್ಲ. ಮೀರ ಮನೆಗೆ ಬಂದಾಗ ಶಾಮು ಗದ್ದೆಯಿಂದ ಬಂದಿರಲಿಲ್ಲ. ವೆಂಕಮ್ಮನವರಂತೂ ಮೀರ ಳನ್ನು ನೋಡಿ ಅತ್ಯಂತ ಸಂಭ್ರಮದಿಂದ "ಬಾಮ್ಮ" ಎಂದರು. ಮೀರ ಬಂದುದು ಅವರಿಗೆ ನೂರು ಜನ ಆಪ್ತನೆಂಟರು ಮನೆಗೆ ಬಂದಷ್ಟೇ ಸಂತೋಷ ವಾಯಿತು. ಮೀರಳಿಗೆ ಪ್ರಿಯವಾದ ಉಪ್ಪೇರಿಯನ್ನು ಕರಿದು ಅವರು

"ಊಟಕ್ಕೇಳಮ್ಮ. ಶಾಮು ಯಾವಾಗ ಬರುತ್ತಾನೋ ?" ಎಂದರು.

"ಅವರೂ ಬಂದು ಬಿಡಲಿ" ಎಂದಳು ಮೀರ.

ಶಾಮು ಮನೆಗೆ ಬಂದಾಗ ಮೀರ ಅಡಿಗೆಯ ಮನೆಯಲ್ಲಿ ಕುಳಿತು ವೆಂಕಮ್ಮನವರೊಡನೆ ಹಾಸ್ಟೆಲಿನ ವಿಷಯವನ್ನು ಹೇಳುತ್ತಿದ್ದಳು. ಮಗಳ ಹೊಸ ಅನುಭವಗಳನ್ನು ಆಲಿಸುವ ತಾಯಿಯಂತೆ ವೆಂಕಮ್ಮನವರು ಅವಳ ಮಾತುಗಳನ್ನು ಕೇಳುತ್ತಿದ್ದರು. ವೆಂಕಮ್ಮನವರು ಮುಗ್ಧತೆಯಿಂದ

"ಅದೆಲ್ಲಾ ಸರಿ, ನೀವು ಮೂರು ದಿನ ಹೊರಗೆ ಕೂತ್ಕೋತೀರಾ ?" ಎಂದು ಕೇಳಿದರು.

ಮೀರ ಬಿದ್ದು ಬಿದ್ದು ನಗಲು ಮೊದಲು ಮಾಡಿದಳು. ವೆಂಕಮ್ಮ ನವರಿಗೆ ಮಾತ್ರ ತಮ್ಮ ಪ್ರಶ್ನೆ ಉಚಿತವಾದುದೇ ಎಂದು ಭಾವನೆ. ಮೀರ ನಗಲು ಮೊದಲು ಮಾಡುತ್ತಲೇ ವೆಂಕಮ್ಮನವರು ಬೆರಗಾಗಿ ಅವಳ ಕಡೆ ನೋಡಿದರು.

ಮೀರ ಪಕ್ಕೆ ಹಿಡಿದುಕೊಂಡು "ಅಮ್ಮಾ....ನಂಕೈಲಿನ್ನಾಗೋದಿಲ್ಲಾ.... ಅಯ್ಯೋ....ದೇವ್ರೇ" ಎಂದು ನಗುತ್ತಿದ್ದಳು. ಅವಳ ಎರಡು ಕಣ್ಣು ಗಳಿಂದಲೂ ನೀರು ಕಿತ್ತು ಹರಿಯಿತು.

ಮನೆಯ ಒಳಗೆ ಬಂದ ಕೂಡಲೇ ಶಾಮುವಿಗೆ ಮೀರಳ ದನಿ ಕೇಳಿ ಸಿತು. ಆದರೆ ಅವಳು ನಗುತ್ತಿರುವಳೋ, ಅಳುತ್ತಿರುವಳೋ ಎಂಬುದು ತಿಳಿಯದೆ ಶಾಮು ಗಾಬರಿಯಾಗಿ ಅಡಿಗೆ ಮನೆಗೆ ಓಡಿ ಬಂದ.

ಮೀರಳ ನಗುವಿನಿಂದ ವೆಂಕಮ್ಮನವರು ಬೆಪ್ಪಾಗಿ ಗೋಡೆಯೊರಗಿ ಕುಳಿತುಬಿಟ್ಟಿದ್ದರು.

“ ಮೀರಾ.”

ಶಾಮುವಿನ ದನಿ ಕೇಳಿ ಮೀರಳ ನಗು ತಟ್ಟನೆ ನಿಂತುಹೋಯಿತು.

ಅವಳು ನಗು ನಿಲ್ಲಿಸಿ ಶಾಮುವಿನ ಕಡೆ ನೋಡಿದಳು.

ಹೊಸ ಬಗೆಯ ಜೀವನದಲ್ಲಿ ಮಿಂದು ಬಂದಿದ್ದ ಮೀರ ಶಾಮುವಿನ ಕಣ್ಣಿಗೆ ಹೊಸಬಳಂತೆ ಕಾಣಿಸಿದಳು. ಅವಳ ಮುಖ ಮೊದಲಿಗಿಂತಲೂ ತುಂಬಿಕೊಂಡು ಹರೆಯದ ಹೊಳಪಿನಿಂದ ಮಿನುಗುತ್ತಿತ್ತು. ನಗುವಿನ ಕಾವಿಗೆ ಅವಳ ಮುಖ ಕೆಂಪಗಾಗಿತ್ತು.

“ ಯಾವಾಗ ಬಂದೆ ?”

“ ಸ್ವಲ್ಪ ಹೊತ್ತಾಯಿತು. ಊಟಕ್ಕೆ ಬರ್ತೀರಾ ?”

“ ಬಂದೆ.”

ಮೀರ ಗಡಿಬಿಡಿಯಿಂದ ಎದ್ದು ತಟ್ಟೆ, ಮಣೆಗಳನ್ನು ಹಾಕಿದಳು. ಊಟ ಮಾಡುವಾಗ ವೆಂಕಮ್ಮನವರು ಮೀರಳಿಗೆ ಎರಡು ಮಿಳ್ಳೆ ತುಪ್ಪ ಜಾಸ್ತಿ ಹಾಕಿದರು. ಅವರ ವಾತ್ಸಲ್ಯ ಕಂಡು ಮೀರಳ ಕಣ್ಣು ತೇವ ಗೊಂಡಿತು. ಆಕೆಗೂ, ತನಗೂ ಯಾವ ಸಂಬಂಧವೂ ಇರಲಿಲ್ಲ. ಆದರೂ ತಾನೆಂದರೆ ಆಕೆ ಎಷ್ಟು ಅಕ್ಕರೆ ಪಡುತ್ತಾರೆ ?

“ ಅಡಿಗೆ ಹೇಗಿದೆಯಮ್ಮ ?”

“ ಸೊಗಸಾಗಿದೆ. ಹಾಸ್ಟೆಲಿನಲ್ಲಿ ಇಂಥ ಊಟ, ನಿಮ್ಮ ಹಾಗೆ ವಾತ್ಸಲ್ಯ ದಿಂದ ಬಡಿಸುವವರು ಯಾರಿದಾರೆ? ಅವರಿಗೆ ನಾವು ಕೊಡುವ ಹಣ ಮುಖ್ಯವೇ ಹೊರತು ನಾವು ಸರಿಯಾಗಿ ಊಟ ಮಾಡ್ತೀವೋ ಇಲ್ವೋ ಎನ್ನುವುದು ಮುಖ್ಯವಲ್ಲ.”

“ ಅಲ್ಲಿ ಸರಿಯಾಗಿ ಬಡಿಸುತ್ತಿದ್ದರೇ ?”

“ ಹೂಂ. ಆದರೆ ನಿಮ್ಮ ಹಾಗೆ ಪ್ರೀತಿಯಿಂದ ಒಂದು ಮಿಳ್ಳೆ ತುಪ್ಪ ಹಾಕೋರು ಎಲ್ಲಿಂದ ಬರಬೇಕು? ನಾವು ಊಟ ಮಾಡದಿದ್ದರೂ ವಿಚಾರಿಸು ವವರಿಲ್ಲ.”

ಮೀರ ವೆಂಕಮ್ಮನವರಿಗೆ ಒಂದು ಒಳ್ಳೆಯ ಮಾತನಾಡಿದುದನ್ನು ನೋಡಿ ಶಾಮು ಪ್ರಸನ್ನಗೊಂಡ.

" ನೀನು ನಗ್ತಾ ಇದ್ದಿದ್ದೇಕೆ ?"

ಅವರ ನೆನಪು ಬಂದೊಡನೆ ಊಟ ನಿಲ್ಲಿಸಿ ಮೀರ ಮತ್ತೆ ನಗತೊಡಗಿ ದಳು.

" ಅದೇನು ಹೇಳಬಾರದೇ ? ನಾನೂ ನಿನ್ನೊಡನೆ ಸ್ವಲ್ಪ ನಗ್ತೀನಿ."

" ಅವೆಲ್ಲಾ ನಿಮಗೆ ಹೇಳುವಂತಹ ವಿಷಯವಲ್ಲ."

" ಅದೇನು ಹೇಳೆ ಅಂದ್ರೆ ತುಂಬ ಜಂಭ ಮಾಡ್ತಾಳೆ."

" ಸ್ವಲ್ಪ....ತಾಳಿ. ನಗು....ಹತೋಟಿಗೆ....ಬಂದ್ಮೇಲೆ ಹೇಳ್ತೀನಿ."

ವೆಂಕಮ್ಮನವರು ತೃಪ್ತಿಯಿಂದ ಎದುರಿಗೆ ಊಟಮಾಡುತ್ತಿದ್ದ ಜೋಡಿ ಯನ್ನು ನೋಡಿ ಸಮಾಧಾನಪಟ್ಟುಕೊಂಡರು. ಶಾಮು, ಮೀರ ಹೀಗೆ ಅನ್ಯೋನ್ಯವಾಗಿದ್ದುದನ್ನು ನೋಡಿ ಎಷ್ಟೋ ತಿಂಗಳುಗಳಾಗಿ ಹೋಗಿದ್ದವು. ಅವರು ಮೊಸರು ಬಡಿಸಿ

" ಕರು ಕಟ್ಟಹಾಕಿದಾರೋ ಇಲ್ವೋ ನೋಡಿಕೊಂಡು ಬರ್ತೀನಿ" ಎನ್ನುತ್ತಾ ಹೊರಗೆ ಹೋದರು.

ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಆರು ತಿಂಗಳುಗಳಾಗಿದ್ದವು. ಆರು ತಿಂಗಳಿನಲ್ಲಿ ನಡೆದ ವಿಷಯವನ್ನು ಹೇಳಿಕೊಳ್ಳುವುದು ಎಷ್ಟೋ ಉಳಿ ದಿತ್ತು. ವೆಂಕಮ್ಮನವರು ಹೊರಗೆ ಹೋದೊಡನೆ ಮೀರ ಶಾಮುವನ್ನು ನೋಡಿ

" ಬಡವಾಗಿರುವ ಹಾಗಿದೆ " ಎಂದಳು.

" ವೆಂಕಮ್ಮನವರ ಕೈ ಅಡುಗೆ ತಿಂದವನು ಬಡವಾಗಲು ಸಾಧ್ಯವೇ ? ಕಾಲೇಜಿನಲ್ಲಿ ನಿನಗೆ ತುಂಬಾ ಸ್ನೇಹಿತೆಯರಿದಾರಾ ?"

" ಓಹೋ. ಅದರಲ್ಲೂ ಡಾಲಿ ಅಂತ ಒಂದು ಹುಡುಗಿ ಇದಾಳೆ. ನಮ್ಮಿಬ್ಬರಿಗೂ ಎಷ್ಟು ಸ್ನೇಹ ಅಂದರೆ—ಅವಳನ್ನ ನೋಡಿದ ತಕ್ಷಣ ಕೆನ್ನೆಗೆ ಹೊಡೆಯೋಣಾಂತ ಎನಿಸುತ್ತದೆ."

" ಯಾಕೆ ಅವಳ ಕೆನ್ನೆ ಅಷ್ಟೊಂದು ಚೆನ್ನಾಗಿದೆಯೇನು ?"

" ಅವಳನ್ನೇ ಕರ್ಕೊಂಡು ಬರ್ತೀನಿ. ನೀವೇ ನೋಡಿ ಹೇಳಿ."

" ಸಧ್ಯ, ಹುಡುಗಿಯರ ಸಹವಾಸವೇ ನನಗೆ ಬೇಡ."

" ಅವರೇನೂ ನಿಮ್ಮನ್ನು ತಿಂದುಬಿಡುವುದಿಲ್ಲ."

ಊಟ ಮುಗಿದೊಡನೆ ಶಾಮು ಕೈ ತೊಳೆದುಕೊಂಡು ಹೋಗಿ ಮಲಗಿ ಕೊಂಡ. ಮೀರ ಅವನ ಹಿಂದೆಯೇ ಎಲೆ ಅಡಿಕೆ ತಟ್ಟೆಯನ್ನು ತಂದು

" ಎಲೆ ಅಡಿಕೆ ಬೇಡವೇನು ?" ಎಂದಳು.

" ಹಾಕಿಕೊಂಡರಾಯಿತು."

ಶಾಮುವಿಗೆ ಎಲೆ ಅಡಿಕೆಯೆಂದರೆ ಎಷ್ಟೊಂದು ಆಸೆಯೆಂದು ಮೀರಳಿಗೆ ತಿಳಿದಿತ್ತು. ಶಾಮುವಿನೊಡನೆ ಅವಳ ಮದುವೆಯಾದ ತರುಣದಲ್ಲಿ ಅವನು ಎಲೆ ಅಡಿಕೆ ಹಾಕಿಕೊಳ್ಳುವುದನ್ನು ನೋಡಿ ಮೀರ ಜಿಗುಪ್ಸೆ ಪಟ್ಟಿದ್ದಳು.

" ಹಸು ಹುಲ್ಲು ಮೇಯುವ ಹಾಗೆ ನೀವು ಎಲೆ ಮೇಯ್ತೀರಿ" ಎಂದು ಗಂಡನನ್ನು ಅವಳು ಹಾಸ್ಯಮಾಡಿದ್ದಳು. ಆದರೆ ಈ ದಿನ ಶಾಮು ಉದಾಸೀನ ದಿಂದ 'ಹಾಕಿಕೊಂಡರಾಯಿತು' ಎಂದಾಗ ಮೀರಳಿಗೆ ಅಚ್ಚರಿಯಾಯಿತು.

" ನಾನು ಮಡಿಸಿಕೊಟ್ಟರೆ ಹಾಕ್ಕೊಳ್ತೀರಾ ?"

" ಅದೇನು ಎಂದೂ ಇಲ್ಲದ್ದು ಈ ದಿನ ಇಷ್ಟೊಂದು ಬಲವಂತ?"

" ಎಲೆ, ಅಡಿಕೆ, ಸುಣ್ಣದಲ್ಲಿ ಮನುಷ್ಯನ ದೇಹಕ್ಕೆ ಅಗತ್ಯವಾಗಿ ಬೇಕಾ ದಂಥಾ ವಿಟಮಿನ್ನುಗಳಿವೆ. ಆದುದರಿಂದ ಹಾಕಿಕೊಳ್ಳಿ ಎಂದೆ."

" ನೀನು ಡಾಕ್ಟರ ಪರೀಕ್ಷೆಗೆ ಓದಲು ಹೋಗಿದ್ದು ಸಾರ್ಥಕವಾಯಿತು."

ಮೀರ ಮತ್ತೆ ನಕ್ಕಳು. ಅವಳ ನಗುಮುಖವನ್ನು ಶಾಮು ನೋಡಿ ಅನೇಕ ತಿಂಗಳುಗಳಾಗಿದ್ದವು. ಅವಳ ನಗೆಯ ಹೂಬಿಸಿಲಿನಿಂದ ಅವನ ಮುಖವೂ ಪ್ರಫುಲ್ಲಿತವಾಯಿತು. ಮೀರ ಶಾಮುವಿಗೆ ಎಲೆ ಅಡಿಕೆ ಕೊಟ್ಟು

" ಮನೇನೆಲ್ಲಾ ಒಂದು ಸಲ ನೋಡಿಕೊಂಡು ಬರ್ತೀನಿ" ಎಂದಳು. ಶಾಮುವಿಗೆ ಅವಳೊಡನೆ ಬಹಳ ಮಾತನಾಡಬೇಕೆನಿಸಿತ್ತು. ಅವಳ ಮಾತು ಕೇಳಿ ನಿರಾಸೆಯಾದರೂ ಮೇಲೆ ಅದನ್ನು ತೋರಗೊಡದೆ 'ಆಗಲಿ' ಎಂದ. ಮೀರ ಶಾಮು ಮಲಗಿದ್ದ ರೂಮಿನ ಬಾಗಿಲನ್ನು ಮುಂದಕ್ಕೆಳೆದು ಕೊಂಡು ಹೋದಳು.

ಗಂಡನ ಮನೆಯ ಮೇಲಿನ ಮೋಹ ಮೀರಳಲ್ಲಿ ಇನ್ನೂ ಆರಿ ರಲಿಲ್ಲ. ತನ್ನ ಮನೆ ಎಂಬ ಅಭಿಮಾನ ಮೊದಲಿಗಿಂತಲೂ ಈಗ ಹೆಚ್ಚಾ ಗಿರುವಂತೆ ತೋರಿತು. ಈ ಅಭಿಮಾನಕ್ಕೆ ಕಾರಣವೇನಿರಬಹುದು ಎಂದಿತು ಮನಸ್ಸು. ತಾನು ತನ್ನ ಮನೆ, ಗಂಡನನ್ನು ಬಿಟ್ಟು ಆರು ತಿಂಗಳು ಪರ ಊರಿನಲ್ಲಿದ್ದುದೇ ಇದಕ್ಕೆ ಕಾರಣವಿರಬೇಕೆನಿಸಿತು. ಗಂಡ, ಹೆಂಡತಿ ವರ್ಷ ವಲ್ಲಿ ಹನ್ನೆರಡು ತಿಂಗಳೂ ಖಂಡಿತ ಒಟ್ಟಿಗೆ ಇರಬಾರದು. ಹಾಗೆ ಯಾವಾ ಗಲೂ ಒಟ್ಟಿಗೆ ಇದ್ದರೆ ಜಗಳ, ಮನಸ್ತಾಪ, ಅಸಮಾಧಾನ ಅವರಿಬ್ಬರ ನಡುವೆ ಬರುವುದು ಖಂಡಿತ. ಹಾಗೆ ಮನೆಯಲ್ಲಿ ಅಶಾಂತಿ ತಲೆದೋರುವು ದೆಂಬ ಭೀತಿ ಬಂದ ಕೂಡಲೇ ಇಬ್ಬರಲ್ಲಿ ಯಾರಾದರೂ ಒಬ್ಬರೂ ಹದಿನೈದು ದಿನ ಬೇರೆ ಎಲ್ಲಿಗಾದರೂ ಹೋಗಿದ್ದು ಬರುವುದು ಒಳ್ಳೆಯದು. ಅಗಲಿಕೆ

ಯಲ್ಲಿ ಒಬ್ಬರ ಬೆಲೆ ಮತ್ತೊಬ್ಬರಿಗೆ ತಿಳಿಯುತ್ತದೆ. ಹದಿನೈದು ದಿನಗಳ ಅಗಲಿಕೆ ನಂತರ ಮತ್ತೆ ಪುನರ್ಮಿಲನವಾದಾಗ....ಎಷ್ಟು ಕಾತರ, ಸಂಭ್ರಮ!

ಮೀರ ಮನೆಯ ಗೋಡೆ, ಕಿಟಕಿ, ಬಾಗಿಲುಗಳನ್ನು ಮುಟ್ಟಿ ನೋಡಿದಳು. ಡ್ರಾಯಿಂಗ್ ರೂಮಿಗೆ ಹೋಗಿ ತಾನು ಮೆಚ್ಚಿ ತರಸಿಕೊಂಡಿದ್ದ ಸೋಫಾ, ಮೆತ್ತೆಯ ಕುರ್ಚಿಗಳನ್ನು ಕಣ್ಣು ತುಂಬುವಂತೆ ನೋಡಿದಳು.

"ಬೋರನ ಕೈಯಿಂದ ಧೂಳು ಹೊಡೆಸಬೇಕು" ಎಂದಿತು ಅವಳ ಮನಸ್ಸು. ಕೊಟ್ಟಿಗೆಯ ಬಾಗಿಲಿನಲ್ಲಿ ನಿಂತು ಕರುಗಳ ಆಟವನ್ನು ನೊಡಿದಳು. ಅವಳು ಮನೆ ಬಿಟ್ಟು ಹೋಗುವಾಗ ಇನ್ನೂ ಜನ್ಮ ತಾಳದಿದ್ದ ಎರಡು ಪುಟ್ಟ ಕರುಗಳು ಜಿಗಿದಾಡುತ್ತಾ ಆಟವಾಡುತ್ತಿದ್ದುವು.

ಮೀರ ಮನೆಯನ್ನೆಲ್ಲಾ ಸುತ್ತಿ ಶಾಮು ಮಲಗಿದ್ದ ರೂಮಿನ ಬಾಗಿಲನ್ನು ಮೆಲ್ಲನೆ ತಳ್ಳಿ ಒಳಗೆ ಇಣುಕಿ ನೋಡಿದಳು. ಅವನು ನಿದ್ದೆ ಮಾಡುತ್ತಿದ್ದ. ಮೀರಳಿಗೆ ಶಾಮುವಿನೊಡನೆ ಮಾತನಾಡುವುದು ಬಹಳವಿತ್ತು. ಶಾಮು ನಿದ್ದೆ ಮಾಡುತ್ತಿದ್ದುದನ್ನು ನೋಡಿ ಅವಳಿಗೆ ನಿರಾಸೆಯಾಯಿತು. ಅವಳು ಬಾಗಿಲನ್ನು ಮೆಲ್ಲನೆ ಮುಂದೆಳೆದುಕೊಂಡು ಅಂಗಳಕ್ಕೆ ಬಂದಳು. ಅಂಗಳದಲ್ಲಿ ಜೋಯಿಸರ ಮಗಳು ವೆಂಕು ನಿಂತಿದ್ದಳು. ಮೀರಳನ್ನು ನೋಡಿ ವೆಂಕೂ ನಕ್ಕು

"ನೀವು ಬಂದಿದಿರೀಂತ ಗೊತ್ತಾಯ್ತು. ಅದಕ್ಕೇ ಓಡಿ ಬಂದೆ. ಅಮ್ಮ ಬಿಸಿಲಿನಲ್ಲಿ ಹೋಗಬೇಡಾಂತ ಕೂಗ್ತಿದ್ದರು. ಆದರೂ ಓಡಿ ಬಂದೆ" ಎಂದಳು.

ವೆಂಕು ಮೊದಲಿಗಿಂತಲೂ ಎತ್ತರವಾಗಿ ಬೆಳೆದಿದ್ದಳು. ಕೋಲು ಕೋಲಾಗಿದ್ದ ಅವಳ ಮುಖ ಈಗ ತುಂಬಿಕೊಂಡಿತ್ತು. ಮೂಳೆಯಂತಿದ್ದ ದೇಹ ಯೌವನದ ಮೋಡಿಯಿಂದ ಮಾಟವಾದ ಆಕಾರವನ್ನು ಪಡೆದಿತ್ತು ಹೊಸಬಳನ್ನು ನೋಡುವಂತೆ ಮೀರ ವೆಂಕುವನ್ನೇ ದಿಟ್ಟಸಿ ನೋಡಿದಳು.

"ನಿನಗೆಷ್ಟು ವರ್ಷ ವೆಂಕೂ?"

"ಹದಿನಾರು ವರ್ಷವಾಯಿತು."

"ಇನ್ನೂ ಯಾಕೆ ನಿಮ್ಮಮ್ಮ ನಿನಗೆ ಮದುವೆ ಮಾಡಿಲ್ಲ?"

ವೆಂಕು ಮುಖ ಕೆಂಪಗೆ ಮಾಡಿಕೊಂಡು "ಥೂ ಹೋಗ್ರಿ. ನೀವು ಹೀಗೆಲ್ಲಾ ಹಾಸ್ಯ ಮಾಡುವ ಹಾಗಿದ್ದರೆ ಹೊರಟು ಹೋಗ್ತೀನಿ" ಎಂದು ಬಾಗಿಲಿನ ಕಡೆ ತಿರುಗಿದಳು.

"ಹಾಸ್ಯ ಮಾಡೋಲ್ಲ. ಬಾ."

ವೆಂಕು, ಮೀರ ರೂಮಿಗೆ ಹೋಗಿ ಮಾತನಾಡುತ್ತಾ ಕುಳಿತರು.

"ಪರೀಕ್ಷೇಲಿ ನೀವು ಹೇಗೆ ಮಾಡಿದೀರಿ?"

"ಚೆನ್ನಾಗಿ ಮಾಡಿದೀನಿ."

"ನೀವು ನಿಜವಾದ ಹೆಣ ಕುಯ್ಯಬೇಕಂತೆ. ಹೌದಾ?"

"ಅದೆಲ್ಲಾ ಮುಂದಿನ ವರ್ಷದಿಂದ ಶುರುವಾಗತ್ತೆ."

ವೆಂಕು ಮೀರಳ ಕೆಲವು ಪುಸ್ತಕಗಳನ್ನು ನೋಡಿ ಆಶ್ಚರ್ಯದಿಂದ "ಇದನ್ನೆಲ್ಲಾ ಹೇಗ್ರಿ ಓದುತ್ತೀರಿ? ಎಲ್ಲಾ ಮರೆತು ಹೋಗೋದಿಲ್ಲವೇ?" ಎಂದಳು.

"ಮರೆತು ಹೋದರೆ ಫೇಲಾಗತ್ತೆ. ಅಷ್ಟೆ."

ಅಲ್ಲಿಂದ ಅವರ ಮಾತು ಎಲ್ಲೆಲ್ಲಿಗೋ ಹೊರಳಿತು. ನಿದ್ದೆ ಮುಗಿಸಿ ಶಾಮು ಎದ್ದು ಬಂದಾಗಲೂ ಅವರ ಹರಟೆ ಮುಗಿದಿರಲಿಲ್ಲ.

"ಶಾಮಣ್ಣ, ಮೈಸೂರಿಗೆ ಹೋಗಿ ಬಂದ ಮೇಲೆ ಮೀರಕ್ಕ ತುಂಬಾ ಚೆನ್ನಾಗಿ ಆಗಿದಾರೆ. ಅಲ್ವೇ?"

ಅದೇ ಸಲಿಗೆ. ಅದೇ ಸ್ನೇಹ. ಆಗ ಹುಡುಗಿ. ಈಗ ಯುವತಿ.

"ಹೌದೇನು? ನಾನಿನ್ನೂ ಮೀರಾನ ಸರಿಯಾಗಿ ನೋಡೇ ಇಲ್ಲ" ಎಂದ ಶಾಮು.

"ಶಾಮಣ್ಣನಿಗೆ ನನ್ನ ಮಾತೂಂದ್ರೆ ಹಾಸ್ಯ" ವೆಂಕು ಕೆನ್ನೆ ದಪ್ಪಗೆ ಮಾಡಿಕೊಂಡು ನಸುಕೋಪ ತೋರಿಸಿದಳು.

ನಾಲ್ಕು ವರ್ಷದ ಹಿಂದಿನ ಮಾತಾಗಿದ್ದರೆ ಶಾಮು ವೆಂಕುವಿನ ಕೆನ್ನೆ ಹಿಂಡಿ, ಕಚುಗುಳಿಯಿಟ್ಟು ಕೀಟಲೆ ಮಾಡುತ್ತಿದ್ದ. ಆದರೆ ಈಗ ಅವಳು ಬೆಳೆದ ಹುಡುಗಿ.

"ಎಲ್ಲಿ ಮೀರಾ, ನನ್ನೆದುರಿಗೆ ನಿಂತ್ಕೋ ಬಾ. ನಿನ್ನ ಸರಿಯಾಗಿ ನೋಡಿ ಹೇಳ್ತೀನಿ."

"ಹೋಗಿ ಹೋಗಿ. ನಿಮಗೆ ಮಾಡೋಕೆ ಕೆಲಸವಿಲ್ಲ." ಮೀರ ಹುಬ್ಬು ಗಂಟಿಕ್ಕಿದಳು.

"ಕಣ್ಣು ಪರವಾಗಿಲ್ಲ. ಕೆನ್ನೆ ತುಂಬಿಕೊಂಡಿರುವುದರಿಂದಲೋ ಏನೋ ಚಿಕ್ಕದಾಗಿ ಕಂಡರೂ ಹೊಳಪಾಗಿದೆ. ಹುಬ್ಬು–ಕಣ್ಣಿಗೆ ಹಚ್ಚಿರುವ ಕಾಡಿಗೆ ಯೊಡನೆ ಸ್ಪರ್ಧೆ ಹೂಡಿದೆ–ಯಾರ ಬಣ್ಣ ಹೆಚ್ಚು ಕಪ್ಪೂಂತ. ಮೂಗು–ಜಡೆಯಷ್ಟೇ ಮೊಂಡಾಗಿದೆ...."

ಶಾಮುವಿನ ವರ್ಣನೆ ಕೇಳಿ ವೆಂಕು ಬಿದ್ದು ಬಿದ್ದು ನಗತೊಡಗಿದಳು. ಮೀರಳ ಮುಖ ಕೋಪದಿಂದ ಕೆಂಪಾಗಿತ್ತು.

"ಬುದ್ಧಿ—ಚಾಕು, ಕತ್ತರಿ ಹಿಡಿಯುವುದರಿಂದಲೋ ಏನೋ ಅಷ್ಟೇ ಹರಿತವಾಗಿರುವ ಹಾಗಿದೆ. ಕೂದಲು—ಗುಂಗುರುಗಳು ಮೊದಲಿಗಿಂತ ಜಾಸ್ತಿಯಾಗಿದ್ದರೂ ಒಂದಿಂಚೂ ಬೆಳೆದಂತಿಲ್ಲ. ತುಟಿ—ಅದೇನು ಎಲೆ ಅಡಿಕೆಯ ಕೆಂಪೋ, ನಿಜವಾದ ಕೆಂಪೋ ನಿಧಾನವಾಗಿ ಪರೀಕ್ಷೆ ಮಾಡಿ ಹೇಳಬೇಕು. ಕೈಯಿ...."

ಮೀರ ಧಡಧಡನೆ ಬಂದು ಶಾಮುವನ್ನು ನೂಕಿ ಅಡಿಗೆ ಮನೆಗೆ ಹೊರಟುಹೋದಳು. ವೆಂಕು ಉಸಿರಾಡಲೂ ಅವಕಾಶವಿಲ್ಲದವಳಂತೆ ನಗುತ್ತಿದ್ದಳು. ಮೀರ ಬಿರುಗಾಳಿಯಂತೆ ಒಳಗೆ ಹೋದುದನ್ನು ನೋಡಿ ವೆಂಕು ನಗು ನಿಲ್ಲಿಸಿ

"ಶಾಮಣ್ಣಾ, ಮೀರನಿಗೆ ಕೋಪ ಬಂದಿರಬೇಕು" ಎಂದಳು.

"ಇರಲಾರದು. ತನ್ನ ವರ್ಣನೆ ಕೇಳಿ ಸಂತೋಷ ತಡೆಯಲಾರದೆ ಒಳಗೆ ಹೋಗಿರಬೇಕು.

ವೆಂಕು ಮೀರಳನ್ನು ಹುಡುಕಿಕೊಂಡು ಅಡಿಗೆ ಮನೆಗೆ ಹೋದಳು. ವೆಂಕುವಿಗೂ ಅಲ್ಲಿಯೇ ಕಾಫಿ ತಿಂಡಿ ಆಯಿತು. ಸಂಜೆ ಐದು ಘಂಟೆಯ ಮೇಲೆ ವೆಂಕು ತನ್ನ ಮನೆ ಜ್ಞಾಪಿಸಿಕೊಂಡು

"ಹೋಗ್ತೀನಿ ಮೀರಕ್ಕ. ಅಮ್ಮ ಬೈತಾರೋ ಏನೋ" ಎಂದಳು.

"ಮೀರಾನೇ ಬಲವಂತ ಮಾಡಿ ನನ್ನ ಅಲ್ಲೇ ಇರಿಸಿಕೊಂಡಳೂಂತ ತಪ್ಪನ್ನೆಲ್ಲಾ ನನ್ನ ಮೇಲೆ ಹಾಕಿಬಿಡು."

ವೆಂಕು ಹೊರಟುಹೋದಳು. ವೆಂಕುವನ್ನು ಕಳಿಸಿ ಮೀರ ಒಳಗೆ ಬರುವಷ್ಟರಲ್ಲಿ ಶಾಮು ಅದಾವ ಮಾಯದಲ್ಲೋ ತಿಂಡಿ ತಿಂದು ಗದ್ದೆಯ ಕಡೆ ಹೊರಟುಹೋಗಿದ್ದ. ಮೀರಳಿಗೆ ಅದೇಕೋ ಮತ್ತೆ ನಿರಾಸೆಯಾಯಿತು. ಹಾಗಾದರೆ ಅವರಿಗೆ ತನ್ನ ವೈದ್ಯ ವಿದ್ಯಾರ್ಥಿ ಜೀವನದ ಬಗ್ಗೆ ಏನೇನೂ ಆಸಕ್ತಿಯಿಲ್ಲವೇ?

ಮೀರಾ ಜಾಜಿ ಪೊದೆಯ ಬಳಿಗೆ ಹೋದಳು. ಬಿಳಿ ಜಾಜಿಯ ಗಿಡ ತನ್ನ ಹಸಿರು ಒಡಲಿನ ತುಂಬ ಬಿಳಿ ಮೊಗ್ಗುಗಳನ್ನು ತುಂಬಿಕೊಂಡು ಗಾಳಿಗೆ ಬಳುಕಾಡುತ್ತಿತ್ತು. ಮೀರಳ ಕೈ ಮೊಗ್ಗುಗಳನ್ನು ಬಿಡಿಸತೊಡಗಿತು. ಉಡಿ ತುಂಬಿದ ಮೇಲೆ ಮೀರ ಸೂಜಿದಾರ ಹಿಡಿದು ಪೋಣಿಸಿದಳು. ಮೊಗ್ಗಿಗಾಗಿ ಮತ್ತೊಮ್ಮೆ ಅವಳು ತಲೆಬಾಚಲೇ ಬೇಕಾಯಿತು. ಮೊಗ್ಗಿನ ದಂಡೆ ಮುಡಿದು ಬಿಳಿಯ ವಾಯಿಲ್ ಸೀರೆಯುಟ್ಟು, ಬೇಸರ ನೀಗಲು ಮೀರ ಜೋಯಿಸರ ಮನೆಗೆ ಹೋದಳು. ಸಾಕಮ್ಮನವರು ಮೀರಳ ಕಾಲೇಜು,

ಅಲ್ಲಿಯ ಹಾಸ್ಟೆಲಿನ ಬಗ್ಗೆ ನೂರಾರು ಪ್ರಶ್ನೆಗಳನ್ನು ಕೇಳಿದರು. ಅವರೊಡನೆ ಮಾತುಕತೆ ಮುಗಿಸಿ ಮೀರ ಮನೆಗೆ ಬಂದಾಗ ಎಂಟೂವರೆ ಗಂಟೆಯಾಗಿತ್ತು. ಶಾಮು ಆಗಲೇ ಬಂದು ಮೀರಳಿಗಾಗಿ ಕಾಯುತ್ತಿದ್ದ. ಹೆಚ್ಚು ಮಾತಿಲ್ಲದೆ ಊಟ ಮುಗಿಯಿತು.

ಮೀರ ಎಲೆ, ಅಡಿಕೆ ತೆಗೆದುಕೊಂಡು ಶಾಮುವಿನ ಬಳಿಗೆ ಬಂದಾಗ ಅವನು ಲಾಂದ್ರದಲ್ಲಿದ್ದ ದೀಪದ ಕುಡಿಯ ಹೊಯ್ದಾಟವನ್ನು ನೋಡುತ್ತಾ ಕುಳಿತಿದ್ದ.

"ಎಲೆ ಮಡಿಸಿ ಕೊಡಲೇನು ?"

"ಊಹೂಂ. ಎಲೆ ಅಡಿಕೆ ಹಾಕಿಕೊಳ್ಳೋಕೆ ಮುಂಚೆ ಒಂದು ಕೆಲಸ ಇದೆ."

"ಏನು ಕೆಲಸ ?"

"ಮಧ್ಯಾಹ್ನ ವೆಂಕೂ........"

ಮೀರ ಹುಬ್ಬುಗಂಟಿಕ್ಕಿ "ನಿಮ್ಮ ಹಾಸ್ಯ ಸಾಕು. ನೀವು ನನ್ನ ಹಾಗೆ ವರ್ಣನೆ ಮಾಡಿದರೆ ವೆಂಕು ಏನು ತಿಳಿದುಕೊಳ್ಳುತ್ತಾಳೆ. ಹಾಸ್ಯಕ್ಕೂ ಸಮಯ ಸಂದರ್ಭ ಇಲ್ಲವೇ ?" ಎಂದಳು.

"ನಾನು ಎತ್ತಿ ಆಡಿಸಿ ಬೆಳೆಸಿದ ಮಗು ವೆಂಕು. ಅವಳೆದುರಿಗೆಂಥ ಸಂಕೋಚವೂ ಇಲ್ಲ ನನಗೆ."

"ಅವಳೇನೂ ಈಗ ಮಗುವಲ್ಲ. ಹುಡುಗಿ."

"ಆದರೂ ನನ್ನ ಪಾಲಿಗೆ ಅವಳು ಚಿಕ್ಕ ಹುಡುಗಿಯೇ."

"ಚಿಕ್ಕ ಹುಡುಗೀಂತ ಹುಚ್ಚುಹುಚ್ಚಾಗಿ ಮಾತನಾಡಬಹುದೇ ?"

"ಎಲ್ಲಿ ಈ ಕಡೆ ತಿರುಗು ನಾನು ಮಾಡಿದ ವರ್ಣನೆ ಸರಿಯೇ ತಪ್ಪೇಂತ ಖಾತ್ರಿ ಮಾಡಿಕೊಳ್ಳಬೇಕು" ಎನ್ನುತ್ತಾ ಶಾಮು ಲಾಂದ್ರವನ್ನು ಮೀರಳ ಮುಖದ ಬಳಿ ಹಿಡಿದು ನೋಡಿದ. ಮೀರಳಿಗೆ ತುಂಬಾ ನಗು ಬಂತು.

"ನಗಬಾರದು. ಗಂಭೀರವಾಗಿರಬೇಕು. ನಾನು ಮಾಡಿದ್ದ ವರ್ಣನೆ ಅಕ್ಷರಶಃ ನಿಜ. ಆದರೆ ಒಂದು ಅನುಮಾನ ಪರಿಹಾರವಾಗಲಿಲ್ಲ."

"ಯಾವುದು ?"

"ಮತ್ತೇ ನಿನ್ನ ತುಟಿಯ ಬಣ್ಣ—ಎಲೆ ಅಡಿಕೆಯ ಕೆಂಪೋ ಅಥವಾ ನಿಜವಾದ ಕೆಂಪೋ ಎನ್ನುವುದು ಮಾತ್ರ ಇತ್ಯರ್ಥವಾಗಲಿಲ್ಲ. ಅದರ ಬಣ್ಣದ ಸ್ವಜತೆಯನ್ನು ಈಗ ಪರೀಕ್ಷಿಸಬೇಕಾಗಿದೆ."

"ಏನೂ ಬೇಕಾಗಿಲ್ಲ" ಎನ್ನುತ್ತಾ ಮೀರ ದೂರ ಸರಿದಳು.

" ನನ್ನ ಅನುಮಾನ ಪರಿಹಾರ ಮಾಡಿಕೊಳ್ಳೋಣಾಂತ ಅಷ್ಟೆ."

" ನಿಮ್ಮ ಅನುಮಾನಕ್ಕಾಗಿ ಅಷ್ಟೆ. ನಿಮಗಾಗಿ ಅಲ್ಲ. ಅಲ್ಲವೇ ?"

" ಹೌದು ಹೌದು."

" ಯೂ ಸ್ವೀಟ್ ಸ್ಕ್ಯಾಂಡ್ರೆಲ್ " ಎನ್ನುತ್ತಾ ಮೀರ ಶಾಮುವಿನ ತೋಳಿನೊಳಗೆ ನುಸುಳಿ ಮುಖ ಮೇಲೆತ್ತಿ

" ಪರೀಕ್ಷೆಮಾಡಿ " ಎಂದಳು.

ಶಾಮು ತನ್ನ ತುಟಿಗಳಿಂದ ಮೀರಳ ಅಧರದ ಬಣ್ಣವನ್ನು ಪರೀಕ್ಷೆ ಮಾಡಿದ. ಶಾಮು ತನ್ನನ್ನು ಬಿಟ್ಟೊಡನೆ ಮೀರ ಕೇಳಿದಳು.

" ಪರೀಕ್ಷೆ ಮುಗಿಯಿತೇ ? ನಿಮಗೆ ಏನೆನಿಸುತ್ತದೆ ?"

" ಎಲೆ ಅಡಿಕೆ ಹಾಕಿಕೊಂಡರೆ ತುಟಿ ಇಷ್ಟು ಕೆಂಪಗಾಗೋಲ್ಲ. ಆದುದರಿಂದ ಇದು ನಿಜವಾದ ಬಣ್ಣ " ಎಂದು ಒಪ್ಪಿಕೊಂಡ ಶಾಮು.

" ನೀವು ಮೈಸೂರಿಗೆ ಬಂದಿದ್ದಾಗ ಹಾಸ್ಟೆಲಿಗೇಕೆ ಬರಲಿಲ್ಲ ?"

" ನಾನು ಬರಲೀಂತ ನಿನಗೆ ಆಸೆಯಿತ್ತೇ ?"

ಮೀರ ತನ್ನ ಭಾವನೆಗಳನ್ನು ಅಡಗಿಸಿ " ಹಾಗೇನಿಲ್ಲ. ಬಂದಿದ್ದರೆ ಚೆನ್ನಾಗಿತ್ತು " ಎಂದಳು.

' ಹೌದು ನೀವು ಬರಲೀಂತ ನನಗೆ ತುಂಬ ಆಸೆಯಿತ್ತು ' ಎಂಬ ಮಾತುಗಳನ್ನು ಕೇಳಲು ಶಾಮುವಿನ ಹೃದಯ ತವಕಿಸುತ್ತಿತ್ತು. ಮೀರಳ ಮಾತು ಕೇಳಿ ಶಾಮುವಿಗೆ ನಿರಾಸೆಯಾಯಿತು.

" ಏನೋ ಬರೋಕ್ಕಾಗಲಿಲ್ಲ."

" ಅಷ್ಟೊಂದು ಕೆಲಸವಿತ್ತೇ ?"

" ಒಂದು ಜೊತೆ ಎತ್ತು ತಗೋಬೇಕಾಗಿತ್ತು. ಆದ್ದರಿಂದ ಅಲ್ಲಿ ನಿಲ್ಲೋಕ್ಕಾಗಲಿಲ್ಲ."

ತನ್ನನ್ನು ನೋಡದೇ ಹಳ್ಳಿಗೆ ಹಿಂತಿರುಗುವಂಥ ಅಗತ್ಯವಾದರೂ ಏನಿತ್ತೋ ಶಾಮುವಿನ ಮಾತು ಕೇಳಿ ಮೀರಳ ಮುಖ ಕೊಂಚ ಪೆಚ್ಚಾಯಿತು, ಅದನ್ನು ಗಮನಿಸಿ ಶಾಮು ಹೇಳಿದ

" ಜೊತೆಗೆ ಇನ್ನೊಂದು ಕಾರಣವೂ ಇತ್ತು "

" ಏನು ಕಾರಣ ?"

" ಅಗಲಿಕೆಯ ದಿನಗಳು ಹೆಚ್ಚಿದಷ್ಟೂ ಪುನರ್ಮಿಲನದ ಮಾಧುರ್ಯ ಹೆಚ್ಚು."

" ನಾನು ಈಗ ಬಂದಿರೋದರಿಂದ ನಿಮ್ಮ ಮನಸ್ಸು ಸಿಹಿಯಾಯಿತೇನೋ ?"

" ಬರೀ ಮನಸ್ಸು ಮಾತ್ರ ಸಿಹಿಯಾಗಲಿಲ್ಲ. ಜೊತೆಗೆ ಬಾಯಿ ಸಹ ಸಿಹಿಯಾಯಿತು."

ಮೀರ ಆಕಳಿಸಿ ಮೈಮುರಿದು ಹೇಳಿದಳು.

" ಪರೀಕ್ಷೆ ಗಲಾಟೇಲಿ ಸರಿಯಾಗಿ ನಿದ್ದೆ ಮಾಡಿ ಎರಡು ತಿಂಗಳಾದವು "

" ಮಲಗಬಹುದಲ್ಲಾ. ದೀಪ ಆರಿಸಲೇನು ?"

" ಹೂ. ಆರಿಸಬಹುದು."

ಶಾಮು ದೀಪವನ್ನು ಊದಿ ಆರಿಸಿದ. ರೂಮು ಕತ್ತಲೆಯಲ್ಲಿ ಮುಳುಗಿತು. ದೀಪ ಆರಿದ ಐದು ನಿಮಿಷದೊಳಗೆ ಮೀರ ನಿದ್ದೆ ಮಾಡಿದಳು. ಶಾಮುವಿಗೆ ಮಾತ್ರ ನಿದ್ದೆ ಬರಲಿಲ್ಲ. ಅವನಿಗೆ ಗೇಣು ದೂರದಲ್ಲಿ ಅಪ್ಸರಿಯೊಬ್ಬಳು ನಿರಾತಂಕವಾಗಿ ನಿದ್ರಿಸುತ್ತಿದ್ದಳು. ಹೊಗೆ ತುಂಬಿದ ಕೊಟಡಿಯಿಂದ ಉಸಿರು ಸಿಕ್ಕಿಕೊಂಡ ಮನುಷ್ಯ ಓಡಿಹೋಗುವಂತೆ ಶಾಮು ಎದ್ದು ರೂಮಿನಿಂದ ಹೊರಗೆ ಬಂದು ಬೇರೊಂದು ಕೊಠಡಿಗೆ ಹೋಗಿ ಮಲಗಿದ.

ರಜದ ದಿನಗಳು ಬಹು ಬೇಗ ಕಳೆದುಹೋದವು. ರಜ ಕಳೆದ ಕೂಡಲೆ ಮೀರ ಮತ್ತೆ ಮೈಸೂರಿಗೆ ಹೋಗುವವಳಾಗಿದ್ದುದರಿಂದ ಶಾಮು ಅವಳನ್ನು ಆದಷ್ಟು ಸುಖಿಯಾಗಿಡಲು ಪ್ರಯತ್ನಿಸುತ್ತಿದ್ದ. ಸಧ್ಯದಲ್ಲೇ ತಾನು ಹೊರಟುಹೋಗಲಿದ್ದುದರಿಂದ ಶಾಮುವಿನ ಮನಸ್ಸು ನೋಯದಂತೆ ಮೀರ ಎಚ್ಚರಿಕೆಯಿಂದಿರುತ್ತಿದ್ದಳು.

ಮೀರ ಹೊರಡುವುದಕ್ಕೆ ಮುಂಚೆ ಒಂದು ದಿನ ಶಾಮು, ಮೀರ ಇಬ್ಬರೂ ಸುತ್ತಾಡಿಕೊಂಡು ಕೆರೆಯ ಅಂಚಿನ ಬಳಿ ಕುಳಿತಿದ್ದರು. ಆಗಲೇ ಕತ್ತಲಾಗುತ್ತಾ ಬಂದಿತ್ತು. ಕೆರೆಯ ಪ್ರದೇಶ ನಿರ್ಜನವಾಗಿತ್ತು. ಆಗೊಂದು ಈಗೊಂದು ಹಕ್ಕಿಗಳು ಸದ್ದು ಮಾಡುತ್ತಾ ಗೂಡಿನ ಬಳಿಗೆ ಹಾರಿ ಹೋಗುತ್ತಿದ್ದವು.

ಮೀರ ಚಿಕ್ಕ ಹುಡುಗಿಯಂತೆ ಕಾಲನ್ನು ನೀರಿನಲ್ಲಿ ಇಳಿಬಿಟ್ಟು ಹುಲ್ಲು ಕಡ್ಡಿಯನ್ನು ಅಗಿಯುತ್ತಾ ಕುಳಿತಿದ್ದಳು. ಮೀರ ನೀರಿನಲ್ಲಿ ಕಾಲಾಡಿಸುತ್ತಿರುವುದನ್ನು ನೋಡಿ ಶಾಮು

" ಈಕಡೆ ಬಾ. ಶೀತವಾದೀತು " ಎಂದ.

" ಆದರೆ ಆಗಲಿ ಬಿಡಿ. ನಷ್ಟವೇನು ?"

" ನೀನೇ ಡಾಕ್ಟರಾಗಿ ಹೀಗೆ ಹೇಳಬಹುದೇ ಮೀರಾ ?"

" ನಾನಿನ್ನೂ ಪೂರ್ತಿ ಡಾಕ್ಟರಾಗಿಲ್ಲವಲ್ಲ."

"ಅದಕ್ಕೇ ಹಿರಿಯರು ಅರ್ಥ ತಿಳುವಳಿಕೆ ಅಪಾಯಾಂತ ಹೇಳುವುದು."

"ನಾನೊಂದು ವಿಷಯ ನಿಮಗೆ ಹೇಳೋಣಾಂತ ಬಂದ ದಿನದಿಂದಲೂ ಯೋಚಿಸುತ್ತಿದೀನಿ. ಆದರೆ ಹೇಳೋಕೆ ನನಗೆ ಧೈರ್ಯವಿಲ್ಲ."

"ನೀನು ಯಾವತ್ತಿನಿಂದ ಹೇಡಿಯಾದೆ?"

ಮೀರ ಕೆರಳಿ ನುಡಿದಳು "ನಾನೇನು ಹೇಡಿಯಲ್ಲ."

"ನೀನೀಗ ನಿಜವಾಗಿಯೂ ನನ್ನ ಮೀರ" ಶಾಮು ನಕ್ಕು ಹೇಳಿದ.

"ಹಾಗಾದರೆ ಹೇಳಲೇನು?"

"ನಾನು ಕೇಳಲು ತಯಾರು."

"ನೀವು ನಗಬಾರದು. ನನ್ನ ಮೇಲೆ ರೇಗಬಾರದು. ಬೈಯಬಾರದು. ಉದಾಸೀನರಾಗಿರಬಾರದು. ನಾನು ಹೇಳಿದ್ದನ್ನು ನಡೆಸಿಕೊಡಬೇಕು."

"ಅದೇನೂಂತ ಹೇಳುವವರೆವಿಗೆ ನಾನು ಖಂಡಿತ ಭಾಷೆ ಕೊಡೋದಿಲ್ಲ."

"ನನ್ನ ಮಾತು ದಯವಿಟ್ಟು ನಡೆಸಿಕೊಡಿ."

"ಅದೇನು ಹೇಳು."

"ನಿಮಗೆಷ್ಟು ವರ್ಷ?"

"ಎಷ್ಟೋ ನನಗೆ ಗೊತ್ತಿಲ್ಲ."

"ಎಷ್ಟಾದರೂ ಇರಲಿ. ಒಟ್ಟಿನಲ್ಲಿ ನಿಮಗಿನ್ನೂ ಚಿಕ್ಕ ವಯಸ್ಸು. ಅಲ್ಲವೇ?"

"ಇರಬಹುದು."

"ಆದ್ದರಿಂದ....ನೀವು....ಯಾಕೆ ಇನ್ನೊಂದು ಮದುವೆ ಮಾಡಿಕೋಬಾರದು?" ಮೀರ ದೈನ್ಯ ನೋಟವನ್ನು ಶಾಮುವಿನ ಕಡೆ ಬೀರಿದಳು.

"ನೀನೀಗ ಮೈಸೂರು ಮೆಡಿಕಲ್ ಕಾಲೇಜಿನ ಹಾಸ್ಟೆಲಿಗೆ ಹೋಗ್ತೀಯೋ ಅಥವಾ ಬೆಂಗಳೂರಿನ ಮೆಂಟಲ್ ಆಸ್ಪತ್ರೆಗೆ ಹೋಗ್ತೀಯೋ?"

"ನನ್ನ ಪ್ರಶ್ನೆಗೆ ಉತ್ತರ ಸಿಕ್ಕಲಿಲ್ಲ."

"ನನಗೆ ಇನ್ನೊಂದು ಮದುವೆ! ಯಾಕೆ?"

"ನಾನು ವರ್ಷವೆಲ್ಲಾ ಮೈಸೂರಿನಲ್ಲಿರುತ್ತೇನೆ. ರಜದ ದಿನಗಳಲ್ಲಿ ಮಾತ್ರ ಎರಡು ದಿನ ಇಲ್ಲಿರುತ್ತೇನೆ. ನಿಮಗಿನ್ನೂ ಚಿಕ್ಕ ವಯಸ್ಸು...."

"ನೀನು ವೈದ್ಯಳಾಗಿ ಇಲ್ಲಿಯೇ ಬಂದು ಇರುತ್ತೀನೀಂತ ಹೇಳಿದೀ

ಯಲ್ಲಾ—ಹಾಗಾದರೆ ಅದು ನಾಲಿಗೆ ತುದಿಯ ಮಾತೇನು ?"

"ಇಲ್ಲ. ನಾನು ಡಾಕ್ಟರಾಗಿ ಇಲ್ಲಿ ಬಂದಿರುವುದು ಖಂಡಿತವಾಗಿಯೂ ನಿಜ. ಆದರೆ....ಆದರೆ....ನಿಮ್ಮ ವಂಶಕ್ಕಾಗಿ....ನಿಮ್ಮ ಅಸ್ತಿಗಾಗಿ...."

"ನನ್ನ ಆಸ್ತೀನೆಲ್ಲಾ ನಿನ್ನ ಹೆಸರಿಗೆ ಬರೆದುಬಿಡ್ತೇನೆ. ನೀನು ಏನಾದರೂ ಮಾಡಿಕೋ."

"ಅದು ನ್ಯಾಯ ಅಲ್ಲ. ನಿಮ್ಮ ಆಸ್ತಿ ನಿಮ್ಮ ಮಕ್ಕಳಿಗೇ ಹೋಗಬೇಕು. ದಯವಿಟ್ಟು ನನಗಾಗಿ, ನಿಮಗಾಗಿ, ನಿಮ್ಮ ವಂಶಕ್ಕಾಗಿ...."

"ನನಗೆ ವಯಸ್ಸಾಯಿತು ಮೀರ. ನನಗೆ ಯಾರು ಹೆಣ್ಣು ಕೊಡ್ತಾರೆ" ಶಾಮು ನಗೆಯಾಡುತ್ತಾ ಕೇಳಿದ.

ಮೀರ ಶಾಮುವಿನ ಉಕ್ಕಿನಂತಹ ತೋಳುಗಳನ್ನೂ, ವಿಸ್ತಾರವಾದ ಎದೆಯನ್ನೂ, ಆರೋಗ್ಯ ಸೂಸುವ ಮುಖವನ್ನೂ ಅಭಿಮಾನ, ಮೆಚ್ಚುಗೆಯಿಂದ ನೋಡುತ್ತಾ

"ನಿಮಗೆ ಹೆಣ್ಣು ಹುಡುಕುವ ಭಾರ ನನಗಿರಲಿ" ಎಂದಳು.

"ಆಗಲಿ ಡಾಕ್ಟರ್ ಸಾಹೇಬಾ."

"ನಮ್ಮ ವೆಂಕು ಏನಾಗಿದಾಳೆ? ಚಿಕ್ಕ ಹುಡುಗಿಯಲ್ಲಿ ಹೇಗೋಗೋ ಇದ್ದಳು. ಈಗ ಮೈ ಕೈ ತುಂಬಿಕೊಂಡು...."

ಶಾಮು ಗಟ್ಟಿಯಾಗಿ ನಗುತ್ತಾ "ವೆಂಕು ತಂಗಿ ಒಂದಿದೆ—ಆರು ವರ್ಷದ್ದು. ಅದೇ ಯಾಕಾಗಬಾರದೂಂತ ಅಂತೀನಿ."

"ನಿಮಗೆಲ್ಲಾ ತಮಾಷೀನೆ."

"ಯೋಚನೆ ಮಾಡು ಮೀರ. ವೆಂಕೂನ ನಾನು ಆಡಿಸಿದ್ದೀನೆ. ನನ್ನ ಕಣ್ಣೆದುರಿಗೆ ಹುಟ್ಟಿದ ಮಗು ಅವಳು. ನನಗೆ ಅವಳು ಪುಟ್ಟ ತಂಗಿ ಇದ್ದ ಹಾಗೆ ಇದ್ದಾಳೆ. ಸಧ್ಯ ನೀನು ಅವಳೆದುರಿಗೆ ಈ ವಿಷಯ ಹೇಳೀಯ ಜೋಕೆ. ಆಮೇಲೆ ಆ ಹುಡುಗಿ ನಾಚಿಕೊಂಡು ಇಲ್ಲಿಗೆ ಬರೋದನ್ನೇ ನಿಲ್ಲಿಸಿಬಿಡಬಹುದು. ಅವಳೆದುರಿಗೆ ಈ ಸುದ್ದಿ ತೆಗೆಯಬೇಡ." ಶಾಮು ಖಂಡಿತವಾದ ದನಿಯಲ್ಲಿ ಹೇಳಿದ. ಮೀರಳ ಮೊದಲನೆಯ ಯೋಜನೆ ಕುಸಿದು ಬಿತ್ತು.

"ನಿಮಗೆ ಹುಡುಗಿ ಹೇಗಿರಬೇಕು ಹೇಳಿ. ನಾನು ಹುಡುಕುತ್ತೇನೆ."

"ನಾನು ಹೇಳಿದಂತಹ ಹುಡುಗಿಯನ್ನೇ ತರಬೇಕು."

"ಆಗಲಿ" ಮೀರ ಉತ್ಸಾಹದಿಂದ ನುಡಿದಳು.

"ಅವಳು ನಿನ್ನಷ್ಟೇ ಎತ್ತರ, ಗಾತ್ರ ಇರಬೇಕು. ನಿನ್ನ ಬಣ್ಣ ಇದ್ದರೆ ಸಾಕು. ತಲೆಗೂದಲು ಗುಂಗುರಾಗಿ ಮೋಟಾಗಿರಬೇಕು. ಕಣ್ಣು ಹೊಳ

ಪಾಗಿರಬೇಕು. ತುಟಿ ಯಾವಾಗಲೂ ಎಲೆ ಅಡಿಕೆ ಹಾಕಿಕೊಂಡಂತೆ–ಅಂದರೆ ನಿನ್ನ ತುಟಿಯಷ್ಟೇ–ಕೆಂಪಗಿರಬೇಕು. ಅವಳ ಹೆಸರು ಮೀರ ಎಂದೂ ಇರ ಬೇಕು."

ಮೀರ ನಿರಾಶಳಾಗಿ "ನಾನೇನು ತಮಾಷೆ ಮಾಡ್ತಿದೀನೀಂತ ತಿಳ್ಕೊಂಡಿರಾ ?" ಎಂದಳು.

ಶಾಮು ಎದ್ದು ನಿಂತು ಗಡಸು ದನಿಯಿಂದ "ಇಲ್ಲ. ಹುಚ್ಚಾಟ ಆಡ್ತಿದೀಂತ ತಿಳ್ಕೊಂಡಿದೀನಿ. ನಡಿ, ಮನೆಗೆ ಹೋಗೋಣ" ಎಂದ.

"ಊಹೂಂ. ನಾನು ಬರೋದಿಲ್ಲ. ನಾನು ಹೇಳಿದ ಮಾತಿಗೆ ನೀವು ಒಪ್ಪಿಕೊಳ್ಳುವವರೆಗೆ ನಾನು ಈ ಜಾಗದಿಂದ ಕದಲೋದಿಲ್ಲ" ಮೀರ ಮೊಂಡ ತನದಿಂದ ಹೇಳಿದಳು.

"ನನಗೇನು ಈಗ ಮಾತು ಕೊಡ್ತೀನಿ. ಆಮೇಲೆ ಮುರಿತೀನಿ. ಅಷ್ಟೆ."

"ಹಾಗೆಲ್ಲಾ ಮಾಡಬೇಡಿ."

"ಈಗ ಸಧ್ಯಕ್ಕೆ ಮನೆಗೆ ಹೋಗೋಣ ಏಳು" ಶಾಮು ಎಳೆಯ ಮಗು ವನ್ನು ರಮಿಸುವಂತೆ ಮಾತನಾಡಿದ.

"ಊಹೂಂ."

"ಏಳ್ತೀಯೋ ಇಲ್ಲ ನಿನ್ನ ಎತ್ತಿಕೊಂಡು ಹೊರಡಲೋ ?" ಶಾಮು ಕೊಂಚ ಖಾರವಾಗಿಯೇ ಹೇಳಿದ.

ಮೀರ ಮಾತನಾಡದೆ ಮೌನವಾಗಿ ತನ್ನ ಅಸಮ್ಮತಿಯನ್ನು ಸೂಚಿಸಿ ದಳು.

ಅಬ್ಬ ! ಹಠದಲ್ಲಿ ಇವಳು ಜಾನಿಯ ತಾಯಿಯೇ ಎಂದುಕೊಂಡ ಶಾಮು.

"ಸರಿ ಹಾಗದರೆ ನೀನಿಲ್ಲಿ ಎಷ್ಟು ಹೊತ್ತು ಬೇಕಾದರೂ ಕುಳಿತಿರು. ನಾನು ಮನೆಗೆ ಹೋಗ್ತೀನಿ. ಆದರೆ ಒಂದು ಎಚ್ಚರಿಕೆಯ ಮಾತು. ಈ ಹೊಂಗೆ ಮರದಲ್ಲಿ ದೆವ್ವಗಳಿವೇಂತ ಎಲ್ಲರೂ ಹೇಳ್ತಾರೆ."

ಶಾಮು ಅವಳನ್ನು ಹೆದರಿಸಿ ಅಲ್ಲಿಂದ ಏಳಿಸಲು ಪ್ರಯತ್ನಿಸಿದ.

ಮೀರ ನಗುತ್ತಾ "ನನಗೆ ದೆವ್ವಾಂದ್ರೆ ಸ್ವಲ್ಪವೂ ಹೆದರಿಕೆಯಿಲ್ಲ. ಮುಂದಿನ ವರ್ಷದಿಂದ ಹೆಣ ಕುಯ್ಯೋಕೆ ಹೊರಟಿರೋಳಿಗೆ ದೆವ್ವದ ಹೆದ ರಿಕೆ ಎಲ್ಲಿಂದ ಬರಬೇಕು" ಎಂದಳು.

ತನ್ನೆಲ್ಲ ಪ್ರಯತ್ನಗಳಲ್ಲೂ ಶಾಮು ವಿಫಲನಾಗಿ ನುಡಿದ.

"ಒಂದು ಶರತ್ತಿನ ಮೇಲೆ ನಾನು ಎರಡನೆ ಮದುವೆ ಮಾಡಿಕೋತೀನಿ."

"ಏನದು ?"

"ನೀನೂ ಬೇರೆ ಮದುವೆ ಮಾಡಿಕೊಳ್ಳುವ ಹಾಗಿದ್ದರೆ ನಾನೂ ಮಾಡ್ಕೋತೀನಿ."

"ನಾನು ವೈದ್ಯವೃತ್ತೀನೇ ಮದುವೆ ಮಾಡಿಕೊಳ್ಳುತ್ತೇನೆ."

"ನಾನೂ ಹೊಲ, ಗದ್ದೆ, ತೋಟಾನ ಮದುವೆ ಮಾಡಿಕೊಂಡಿದೀನಿ."

ಶಾಮು ಅವಳಷ್ಟೇ ಜಾಣತನದಿಂದ ಉತ್ತರ ಕೊಟ್ಟ. ಮೀರ ಶಾಮು ವನ್ನು ಸಕಾರಣವಾಗಿ ಒಪ್ಪಿಸಲು ಪ್ರಯತ್ನಿಸಿದಳು.

"ನನಗೇನಿದೇಂತ ನಾನು ಎರಡನೆ ಮದುವೆ ಮಾಡಿಕೊಳ್ಳಬೇಕು ?"

"ನಾನೇಕೆ ಮಾಡಿಕೋಬೇಕು ?"

"ನಿಮಗಾದರೆ ಅಪಾರ ಆಸ್ತಿಯಿದೆ. ನಿಮ್ಮ ಆಸ್ತಿ—ನಿಮ್ಮ ತಂದೆ, ನೀವು ದುಡಿದು ವೃದ್ಧಿಗೊಳಿಸಿರುವ ಆಸ್ತಿ—ಅನ್ಯರ ಪಾಲಾಗಬಾರದೆಂದು ನನ್ನ ಆಸೆ. ನನ್ನಿಂದಾಗಿ ನಿಮ್ಮ ಐಶ್ವರ್ಯ ಹಂಚಿಹೋಗಬಾರದೆಂದು ನಿಮಗೆ ಈ ಸಲಹೆ ಕೊಡುತ್ತಿದ್ದೇನೆ. ನಿಮ್ಮಷ್ಟು ಆಸ್ತಿ ನನಗಿದ್ದಿದ್ದರೆ ಅದು ಬೇರೆಯ ಮಾತಾಗಿತ್ತು. ನಿಮಗಾಗಿ ಅಲ್ಲದಿದ್ದರೂ ಹಿರಿಯರು ಸಂಪಾದಿಸಿರುವ ಈ ಜಮೀನು ಅನ್ಯರ ಪಾಲಾಗದಂತೆ ಮಾಡಲು ನಿಮಗೆ ಮರು ಮದುವೆಯಾಗಲು ಹೇಳುತ್ತಿದ್ದೇನೆ. ನನ್ನಿಂದಾಗಿ ನಿಮ್ಮ ವಂಶ ನಿಲ್ಲಬಾರದು."

"ನೀನು ವೈದ್ಯಳಾಗಿ ಇಲ್ಲಿಯೇ ಬಂದು ನೆಲಸು. ಆಮೇಲೆ ಯೋಚನೆ ಮಾಡೋಣ" ಎಂದ ಶಾಮು.

ಅವನ ಮಾತಿನಿಂದ ಅವಳಿಗೆ ಭರವಸೆ ಸಿಕ್ಕಿದಂತಾಯಿತು. ಅವನ ಭರವಸೆ ಅವಳಿಗೆ ಉತ್ಸಾಹ ನೀಡಿತು. ಮೀರ ಎದ್ದು ನಿಂತಳು.

ನಿಧಾನವಾಗಿ, ಕ್ರಮೇಣವಾಗಿ ಅವರ ಮನಸ್ಸನ್ನು ಮೆದುಮಾಡ ಬೇಕು ಎಂದುಕೊಂಡಳು ಮೀರ.

* * * *

ಮೀರಳಿಗೆ ಉತ್ತಮ ದರ್ಜೆಯಲ್ಲಿ ಪಾಸಾಗಿತ್ತು. ಯಾವಾಗಲೂ ಸಿನಿಮಾ, ಹೋಟಲು, ಕಸಿನ್ ಎಂದು ಅಲಂಕಾರ ಮಾಡಿಕೊಂಡು ಓಡಾ ಡುತ್ತಿದ್ದ ಡಾಲಿಯೂ ಒಂದೇ ಬಾರಿಗೆ ಪಾಸಾಗಿರುವುದನ್ನು ಕಂಡು ಮೀರ ಳಿಗೆ ಆಶ್ಚರ್ಯವಾಯಿತು. ನಿಜವಾಗಿಯೂ ಕಷ್ಟಪಟ್ಟು ಓದುತ್ತಿದ್ದ ಮಂಜುಳಾ ಫೆಯಿಲಾದುದೂ ಅವಳಿಗೆ ನಂಬಲಾಗದಂತಹ ಸುದ್ದಿಯಾಗಿತ್ತು.

ಪರೀಕ್ಷೆ ವಿದ್ಯಾರ್ಥಿಗಳ ಬುದ್ಧಿಯನ್ನು ಅಳೆಯುವ ಅಳತೆಗೋಲಲ್ಲ. ಇದು ಬರೀ ಅದೃಷ್ಟ ಪರೀಕ್ಷೆ ಎಂದುಕೊಂಡಳು ಮೀರ.

ಡಾಲಿ ಈ ಬಾರಿ ಹಾಸ್ಟೆಲಿಗೆ ಬರುವಾಗ ಲೇಡೀಸ್ ಸೈಕಲ್ಲನ್ನೂ ತೆಗೆಸಿಕೊಂಡು ಬಂದಿದ್ದಳು. ಹಾಸ್ಟೆಲಿಗೂ, ಕಾಲೇಜಿಗೂ ಅಷ್ಟೇನೂ ದೂರವಿಲ್ಲವಿದ್ದರೂ ಅವಳ ಇತರ ಮೋಜಿನ ಕೆಲಸಗಳಿಗಾಗಿ ಸೈಕಲ್ ಬೇಕಾಗಿತ್ತು. ಮನೋರಮಾ ಡಾಲಿಯನ್ನು ಕೇಳಿಯೇ ಬಿಟ್ಟಳು.

" ಹಾಸ್ಟಲಿನಿಂದ ಕಾಲೇಜಿಗೆ ನಿಮಗೆ ನಡೆಯೋದೂ ಕಷ್ಟವೇನ್ರೀ ?"

" ಹಾಗೇನಿಲ್ಲ. ಆದರೆ ಷಾಪಿಂಗ್, ಪಿಕ್ಚರ್‌ಗೆ ಹೋಗಬೇಕಾದರೆ ನಡೆಯಬೇಕು. ನನಗಂತೂ ನಡೆಯೋದೂಂದ್ರೆ ಬೇಸರ. ಈ ಸಲ ಪರೀಕ್ಷೇಲಿ ಪಾಸಾದ್ದಕ್ಕೆ ನಮ್ಮ ತಂದೆ ಕೊಟ್ಟ ಬಹುಮಾನ ಈ ಸೈಕಲ್ " ಎಂದಳು ಡಾಲಿ ಹೆಮ್ಮೆಯಿಂದ.

ಮಗಳ ವ್ಯಾಸಂಗವನ್ನು ಹುರಿದುಂಬಿಸಲು ಆ ತಂದೆ ಸೈಕಲ್ಲನ್ನು ಬಹುಮಾನವಾಗಿ ಕೊಟ್ಟಿದ್ದರು. ಆದರೆ ಈ ಮಗಳು ?

ಈ ವರ್ಷದಿಂದ ಮೀರಳಿಗೆ ಸ್ವಲ್ಪವೂ ಬಿಡುವಿರಲಿಲ್ಲ. ಬೆಳಿಗ್ಗೆ ಡಿಸೆಕ್ಷನ್, ಅದು ಮುಗಿದ ಕೂಡಲೇ ಮತ್ತೆ ಕಾಲೇಜು ಪ್ರಾರಂಭವಾಗುತ್ತಿತ್ತು. ಬೆಳಿಗ್ಗೆ ಎಂಟರಿಂದ ಹತ್ತೂವರೆವರೆಗೆ ಡಿಸೆಕ್ಷನ್ ಮುಗಿಸಿಕೊಂಡು, ಆತುರಾತುರವಾಗಿ ಹಾಸ್ಟೆಲಿಗೆ ಬಂದು ಗಡಿಬಿಡಿಯಿಂದ ಊಟ ಮುಗಿಸಿ, ಮತ್ತೆ ಪುಸ್ತಕಗಳನ್ನು ತೆಗೆದುಕೊಂಡು ಕಾಲೇಜಿಗೆ ಓಡಬೇಕಾಗಿತ್ತು. ಕಾಲೇಜಿಗೆ ಹೊತ್ತಾಗುವುದೆಂಬ ಆತುರದಲ್ಲಿ ಹಸಿವು ಹಿಂಗುವ ಹಾಗೆ ಊಟ ಮಾಡಲೂ ಬಿಡುವಿರುತ್ತಿರಲಿಲ್ಲ.

ಡಿಸೆಕ್ಷನ್ ಥಿಯೇಟರನ್ನು ಪ್ರವೇಶಿಸಿದ ಮೊದಲನೆಯ ದಿನವಂತೂ ಮೀರ ಭಯ, ಅಸಹ್ಯದಿಂದ ಕಂಪಿಸಿದ್ದಳು.

ಫಾರ್ಮಲ್ ಆಸಿಡ್‌ನ ವಾಸನೆ ಥಿಯೇಟರಿನ ತುಂಬ ತುಂಬಿತ್ತು. ಮೇಜಿನ ಮೇಲೆ ಮಲಗಿದ್ದ ಹೆಣವನ್ನು ನೋಡಿದ ಕೂಡಲೇ ಮೀರಳಿಗೆ ಹೆದರಿಕೆಯಿಂದ ಚೀರುವಂತಾಯಿತು. ಮೀರ ಭೀತಿಯಿಂದ ವಿಜಯಳ ಕೈ ಬಿಗಿಯಾಗಿ ಹಿಡಿದುಕೊಂಡಳು.

ನೀರಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದ ಪರದೇಶಿಯೊಬ್ಬನ ಕಳೇಬರವದು. ನೀರು ಕುಡಿದು ಮೈಯೆಲ್ಲಾ ಊದಿ ಬಾದಾಳವಾಗಿತ್ತು. ಕಣ್ಣು ಕತ್ತಲಿಡುವಂತಹ, ತಲೆ ತಿರುಗಿಸುವಂತಹ, ತಿಂದ ಅನ್ನವನ್ನೆಲ್ಲಾ ವಾಂತಿ ಮಾಡಿಸುವಂತಹ ಅಸಹ್ಯ ವಾಸನೆ ರೂಮಿನ ತುಂಬ ಹರಡಿಕೊಂಡಿತ್ತು. ಈ

ಗಬ್ಬು ವಾಸನೆಯ ಮುಂದೆ ಹುಡುಗಿಯರು ಮುಡಿದಿದ್ದ ಸುವಾಸನೆಯಾದ ಹೂಗಳ ಸುಗಂಧ, ಹುಡುಗರು ಹಚ್ಚಿದ್ದ ಸೆಂಟಿನ ಪರಿಮಳ ಎಲ್ಲೋ ಅಡಗಿ ಹೋಗಿತ್ತು.

ವಿದ್ಯಾರ್ಥಿಗಳು ಹೆಣದ ಸುತ್ತಲೂ ಗುಂಪು ಕಟ್ಟಿಕೊಂಡಿದ್ದರು. ಡೆಮಾನ್‌ಸ್ಟ್ರೇಟರು ಸೂಚನೆಗಳನ್ನು ಕೊಟ್ಟನಂತರ ಸೀನಿಯರ್ ವಿದ್ಯಾರ್ಥಿಗಳು ಡಿಸೆಕ್ಷನ್‌ಗೆ ಮೊದಲು ಮಾಡಿದರು. ಮೀರ ಕುತೂಹಲ, ಕಳವಳದಿಂದ ನೋಡತೊಡಗಿದಳು.

ಆ ದೇಹ ಹುಳುಗಳ ಬೀಡಾಗಿತ್ತು. ಬೇಕಾದ ಸ್ಥಳವನ್ನು ಎಡಗೈಯಿನ ಬೆರಳುಗಳಿಂದ ಹಿಡಿದು ಬಲಗೈಯಿಂದ ಡಿಸೆಕ್ಟ್ ಮಾಡಿದ ಸೀನಿಯರ್ ವಿದ್ಯಾರ್ಥಿಯೊಬ್ಬ. ಶರೀರದಿಂದ ಕ್ರಿಮಿಗಳು ಅವನ ಎಡಗೈ ಮೇಲೆ ಹರಿದಾಡಲಾರಂಭಿಸಿದವು. ಆದರೂ ಅವನು ತನ್ನ ಕೈಯನ್ನು ತೆಗೆಯುವಂತಿರಲಿಲ್ಲ. ಅವನಿಗೆ ಬೇಕಾದ ನರ ಸಿಗದೇ ಹೋಗಬಹುದಲ್ಲವೇ ? ಅವನು ಆಗಾಗ್ಗೆ ಬಲಗೈಯಿಂದ ಎಡಗೈ ಮೇಲೆ ಹತ್ತಲು ಪ್ರಯತ್ನಿಸುತ್ತಿದ್ದ ಕ್ರಿಮಿಗಳನ್ನು ಕೊಡವಿ, ಮತ್ತೆ ತನ್ನ ಕೆಲಸದಲ್ಲಿ ತೊಡಗುತ್ತಿದ್ದ.

ಅವರು ಹುಡುಕುತ್ತಿದ್ದ ನರ ಸಿಕ್ಕಿದಾಗ ವಿದ್ಯಾರ್ಥಿಗಳಿಗಾದ ಸಂತೋಷ ಹೇಳತೀರದು. ಏನೋ ಒಂದು ದೊಡ್ಡ ನಿಧಿ ಸಿಕ್ಕಿದ ಹಾಗೆ ಎಲ್ಲರೂ ಹಿಗ್ಗಿದರು.

ಆ ದಿನ ಮೀರಳಿಗೆ ಊಟ ಸೇರಲಿಲ್ಲ. ಹಾಸ್ಟೆಲಿಗೆ ಬಂದವಳೇ ಬಿಸಿ ನೀರಿಲ್ಲದಿದ್ದರೂ ತಣ್ಣೀರಿನಲ್ಲಿಯೇ ಸ್ನಾನಮಾಡಿದಳು. ಕೈಗಳನ್ನಂತೂ ಎಷ್ಟುಬಾರಿ ಸೋಪು ಹಾಕಿ ಉಜ್ಜಿ ತೊಳೆದರೂ ತೃಪ್ತಿಯಿರಲಿಲ್ಲ. ಸೋಪು ಹಾಕಿ ತೊಳೆದು ತೊಳೆದು ಕೈ ಉರಿಯುವಂತಾದ ಮೇಲೆ ಅವಳು ಸುಮ್ಮನಾದಳು. ಅನ್ನ ಒಂದು ತುತ್ತೂ ಗಂಟಲಿನಲ್ಲಿ ಇಳಿಯಲಿಲ್ಲ. ಅನ್ನ ತಿನ್ನಲು ಹೋದರೆ ಡಿಸೆಕ್ಷನ್ ರೂಮಿನಲ್ಲಿದ್ದ ವಾಸನೆಯೇ ಬಂದಂತಾಗುತ್ತಿತ್ತು.

ಏನೋ ಅಸಹ್ಯ, ವಾಕರಿಕೆ, ಜುಗುಪ್ಸೆ.

ಆ ದಿನವೆಲ್ಲಾ ಮೀರ ಮಂಕಾಗಿದ್ದಳು. ಆದರೆ ಡಿಸೆಕ್ಟ್ ಮಾಡುವುದು ದಿನಚರಿಯಾದ ಮೇಲೆ, ಹೆಣದ ನರನರವನ್ನೂ ಬಿಡಿಸಿ ನೋಡುವುದು ಸಾಮಾನ್ಯವಾದ ಮೇಲೆ, ಹೆಣ ಕುಯ್ಯುವುದು ತರಕಾರಿ ಹೆಚ್ಚುವಷ್ಟೇ ಸಾಮಾನ್ಯವಾದ ಮೇಲೆ ಮೀರ ಕ್ರಮೇಣ ಚೇತರಿಸಿಕೊಂಡಳು. ದೇಹದ ಅಂಗಾಂಗಗಳೆಲ್ಲವನ್ನೂ ಕತ್ತರಿಸಿ, ಬಿಡಿಸಿ ನೋಡಿ, ನೋಟ್ಸ್ ಮಾಡಿ ಮತ್ತೆ ಹೊಲಿದು ಹಾಕುವುದೆಂದರೆ ಸಾಧಾರಣವಾದ ಕೆಲಸವಾಗಿ

ಹೋಯಿತು. ಡಿಸೆಕ್ಷನ್ ಮುಗಿಸಿ ಹಾಸ್ಟೆಲಿಗೆ ಬಂದು, ಹೊಟ್ಟೆ ತುಂಬ ಊಟ ಮಾಡಿ ಮತ್ತೆ ಕಾಲೇಜಿಗೆ ಹೋಗುತ್ತಿದ್ದಳು. ಮೊದಲ ದಿನದ ಅನುಭವ ಅವಳಿಗೆ ಮತ್ತೆ ಎಂದಿಗೂ ಆಗಲಿಲ್ಲ.

ಡಿಸೆಕ್ಷನ್ ಮಾಡುವಾಗ ಮೀರ ತನ್ನನ್ನು ತಾನೇ ಮರೆಯುತ್ತಿದ್ದಳು. ಪವಾಡವನ್ನು ನೋಡುವ ಮಗುವಿನಂತೆ ಅವಳ ಕಣ್ಣುಗಳು ಅಚ್ಚರಿ, ಆನಂದದಿಂದ ಅರಳುತ್ತಿದ್ದವು. ತಾನು ಹುಡುಕುತ್ತಲಿದ್ದ ನರ, ರಕ್ತನಾಳ, ಮೂಳೆ ಸಿಕ್ಕಿದಾಗಲಂತೂ ಅವಳ ಆನಂದಕ್ಕೆ ಪಾರವೇ ಇರುತ್ತಿರಲಿಲ್ಲ.

ಮೀರ ತುಂಬಾ ಚಿಕ್ಕ ಹುಡುಗಿಯಾಗಿದ್ದಾಗ ಗೋಪಾಲ ಹೇಳುತ್ತಿದ್ದ "ಚರ್ಮ ನಮ್ಮ ದೇಹದ ಹೊರಗಿನ ಮುಸುಕು. ಚರ್ಮದ ಒಳಗೆ ರಕ್ತ, ಮಾಂಸ ಇವೆ. ಅದರೊಳಗೆ ಮೂಳೆಯಿದೆ. ನೀನೂ ಡಾಕ್ಟರ್ ಪರೀಕ್ಷೆ ಮಾಡು. ಆಗ ಎಲ್ಲಾ ನಿನಗೇ ಅರ್ಥವಾಗುತ್ತದೆ."

ಆಗ ಮೀರ ಕೌತುಕದಿಂದ ಗೋಪಾಲ ಹೇಳುವುದನ್ನೇ ಕೇಳುತ್ತಿದ್ದಳು. ಈಗಲೂ ಆಗಿದ್ದ ಕುತೂಹಲ, ಆತುರ, ಆಸಕ್ತಿ ಕಡಿಮೆಯಾಗಿರಲಿಲ್ಲ. ಸೃಷ್ಟಿರಹಸ್ಯವನ್ನು ಬೇಧಿಸುವವಳಂತೆ ಮೀರ ದಾಹದಿಂದ ತನ್ನ ಸುತ್ತಲೂ ನೋಡಿ ಗ್ರಹಿಸುತ್ತಿದ್ದಳು.

ಒಂದು ದಿನ ಪೋಸ್ಟ್‌ಮಾರ್ಟಂಗೆ ಹತ್ತೊಂಭತ್ತು ಇಪ್ಪತ್ತು ವರ್ಷದ ಹುಡುಗಿಯೊಬ್ಬಳ ದೇಹ ಬಂದಿತು. ಆ ಹುಡುಗಿ ಜೀವನದ ವಸಂತದಲ್ಲೇ ಬೇಸರಗೊಂಡು ಬದುಕನ್ನು ಕೊನೆಗಾಣಿಸಿಕೊಂಡಿದ್ದಳು.

ಮೆಡಿಕಲ್ ವಿದ್ಯಾರ್ಥಿಗಳು ಪೋಸ್ಟ್‌ಮಾರ್ಟಂಗಿಂತಲೂ ಹುಡುಗಿಯ ವೈಯುಕ್ತಿಕ ಜೀವನವನ್ನು ಅರಿಯಲು ಹೆಚ್ಚು ಕಾತುರರಾದರು. ಹುಡುಗಿಯ ದೇಹ ಬಂದ ಸ್ವಲ್ಪ ಹೊತ್ತಿನೊಳಗೇ ಹುಡುಗಿಯ ಖಾಸಗಿ ವಿಷಯಗಳನ್ನೆಲ್ಲಾ ಪ್ರಚಂಡ ಹುಡುಗರು ಪತ್ತೆ ಹಚ್ಚಿದರು.

ತಾರ ಮಹಾರಾಜ ಕಾಲೇಜಿನಲ್ಲಿ ಎಂ. ಎ. ತರಗತಿಯಲ್ಲಿ ಓದುತ್ತಿದ್ದಳು. ಹುಡುಗಿ ತುಂಬಾ ಬುದ್ಧಿವಂತೆಯಾಗಿದ್ದಳು. ಸೌಂದರ್ಯ, ಬುದ್ಧಿ, ಹಣ ಯಾವುದಕ್ಕೂ ದೇವರು ಕಡಿಮೆ ಮಾಡಿರಲಿಲ್ಲ. ಅಂತಹ ಹುಡುಗಿ ಒಂದುದಿನ ಕಾಲೇಜಿನಿಂದ ಮನೆಗೆ ಬಂದವಳೇ ಬಚ್ಚಲು ಮನೆಗೆ ಹೋದವಳು ಎಷ್ಟು ಹೊತ್ತಾದರೂ ಬಾಗಿಲು ತೆರೆಯಲಿಲ್ಲ. ಮನೆಯವರು ಗಾಬರಿಗೊಂಡು ಬಾಗಿಲು ಒಡೆಸಿದಾಗ, ನೋಡಿದವರ ಎದೆ ಒಡೆಯುವಂತೆ ಹಗ್ಗವೊಂದು ಬಚ್ಚಲು ಮನೆಯ ತೊಲೆಯಿಂದ ನೇತಾಡುತ್ತಿತ್ತು. ಎರಡು ಗಂಟೆಯ ಹಿಂದೆ ನಗುನಗುತ್ತಿದ್ದ ಸುಂದರ ಹುಡುಗಿ ಈಗ ಹಲ್ಲು ಕಿಟರಿಕೊಂಡಿದ್ದ

ಹೆಣವಾಗಿದ್ದಳು. ಮನೆಯವರ ಬೊಬ್ಬೆ ಕೇಳಿ ನೆರೆಹೊರೆಯವರು ಬಂದರು. ಈ ಸುದ್ದಿ ಕಾಲೇಜಿಗೆ ತಲುಪಲು ತಡವಾಗಲಿಲ್ಲ. ಇಡೀ ಕಾಲೇಜೇ ಅವರ ಮನೆಯ ಮುಂದೆ ನೆರೆಯಿತು. ವಾರ್ತೆ ಪೋಲೀಸರಿಗೆ ತಲುಪಿ, ತನಿಖೆ ಕ್ರಮ ನಡೆದು, ಹೆಣವನ್ನು ಪೋಸ್ಟ್‌ಮಾರ್ಟಂಗಾಗಿ ಮೆಡಿಕಲ್ ಕಾಲೇಜಿಗೆ ತಂದಿದ್ದರು.

ನಾನಾ ಬಗೆಯ ಮಾತುಗಳು ನಗರದಲ್ಲೆಲ್ಲಾ ಒಡಾಡಿದವು.

"ಹುಡುಗಿಗೆ ನಡತೆ ಸ್ವಲ್ಪವೂ ಚೆನ್ನಾಗಿರಲಿಲ್ಲವಂತೆ. ಎಷ್ಟು ಹೊತ್ತಿನಲ್ಲಿ ಅಂದರೆ ಅಷ್ಟು ಹೊತ್ತಿನಲ್ಲಿ ಸಿಕ್ಕಿದವರ ಜೊತೆ ಅಲೆದಾಡುತ್ತಿದ್ದಳಂತೆ. ಪ್ರಾಯದ ಹುಡುಗಿ ಏನು ಅನರ್ಥ ಮಾಡಿಕೊಂಡಳೋ?"

"ಕಾಲೇಜಿನಲ್ಲಿ ತನ್ನ ಸಹಪಾಠಿಯೊಬ್ಬನನ್ನು ಪ್ರೀತಿಸುತ್ತಿದ್ದಳಂತೆ. ಅವನು ಅವಳಿಗೆ ಮದುವೆ ಮಾಡಿಕೋತೀನಿ ಅಂತ ಆಸೆ ತೋರಿಸಿದನಂತೆ. ಅವನ ಜೊತೆ ಸಲಿಗೆಯಾಗಿದ್ದುಬಿಟ್ಟಳಂತೆ. ಅವಳಿಗೆ ಎರಡು ತಿಂಗಳಾಯಿತು. ಅವನು ಅವಳ ಕೈಬಿಟ್ಟ. ಮಾನಕ್ಕೆ, ಸಮಾಜಕ್ಕೆ ಹೆದರಿ ನೇಣು ಹಾಕಿಕೊಂಡಳಂತೆ."

"ಅಪ್ಪ, ಅಮ್ಮಾನೇ ಮಗಳನ್ನ ಮುಂದೆ ಮಾಡಿ ತಮ್ಮ ಜೀವನ ನಡೆಸುತ್ತಿದ್ದರಂತೆ. ಅದೇನು ಬೇಸರ ಬಂತೋ ಕತ್ತಿಗೆ ನೂಲು ಹಾಕಿಕೊಂಡಳು."

"ಮದುವೆ ಗೊತ್ತಾಗಿತ್ತಂತೆ. ಗಂಡೊಬ್ಬನ ಕೈಯಿಂದ ಕೊರಳಿಗೆ ತಾಳಿ ಬಿಗಿಸಿಕೊಳ್ಳೋದಕ್ಕಿಂತ ತಾನೇ ಹಗ್ಗ ಬಿಗಿದುಕೊಳ್ಳೋದು ವಾಸಿಂತ ನೇಣು ಹಾಕಿಕೊಂಡಳಂತೆ."

ಸುಂದರ ಯುವತಿಯೊಬ್ಬಳು ಆತ್ಮಹತ್ಯೆ ಮಾಡಿಕೊಂಡಿದ್ದಳು. ಎಲ್ಲರೂ ಅವಳ ಶೀಲ, ನಡತೆಯನ್ನು ಪ್ರಶ್ನಿಸುವವರೇ! ಪ್ರಾಯದ, ಮದುವೆಯಿಲ್ಲದ ಹುಡುಗಿಯೊಬ್ಬಳು ಅಕಾಲಮೃತ್ಯುವಿಗೀಡಾದರೆ ಜನರಿಗೆ ಯೋಚಿಸಲು ಬೇರೊಂದು ಕಾರಣವೇ ಇರಲಿಲ್ಲ.

"ಅದಕ್ಕೇ ಹೆಣ್ಣು ಹುಡುಗಿಯರನ್ನು ಓದಿಸಬಾರದೂಂತ ಹೇಳೋದು ಓದಿಸಿದರೆ ಅವರು ಕುಲಗೆಟ್ಟು ಹಾಳಾಗಿ ಹೋಗುತ್ತಾರೆ."

ಕುರುಡನೊಬ್ಬ ಆನೆಯ ಸೊಂಡಿಲನ್ನು ಮುಟ್ಟಿ ನೋಡಿ 'ಇದೇ ಆನೆ' ಎಂದು ನಿರ್ಧರಿಸಿದ್ದ.

ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳು ಹುಡುಗಿಯ ಹೆಣದ ಸುತ್ತಲೂ ಗುಂಪು ಕೂಡಿದ್ದರು.

ತಮ್ಮೆಲ್ಲರ ಕುತೂಹಲದ ವಸ್ತುವಾಗಿ, ಪ್ರಯೋಗದ ಸಾಧನವಾಗಿ

ಮೇಜಿನ ಮೇಲೆ ನಗ್ನವಾಗಿ ಬಿದ್ದಿದ್ದ ಹುಡುಗಿಯ ದೇಹ ನೋಡಿ ಮೀರಳ ಕಣ್ಣುಗಳು ತೇವಗೊಂಡವು.

ಈ ಹುಡುಗಿ ಬದುಕಿದ್ದರೆ?

ಯಾರ ಮನೆಯ ನಂದಾದೀಪವಾಗಿ ಬೆಳಗುತ್ತಿದ್ದಳೋ?

ಯಾವ ರಸಿಕನ ಹೃದಯದ ಸಾಮ್ರಾಜ್ಞಿಯಾಗಿ ಮೆರೆದಾಡುತ್ತಿದ್ದಳೋ?

ಯಾವ ರಾಮನ್, ರವೀಂದ್ರ, ನೆಹರೂ, ಸರೋಜಿನಿಯಂತಹವರಿಗೆ ಜನ್ಮ ಕೊಡುತ್ತಿದ್ದಳೋ?

ಅರಳುತ್ತಿದ್ದ ಈ ಜೀವನದ ಹೂವನ್ನು ಅದಾವ ಕರಾಳ ಹಸ್ತ ಹೊಸಕಿ ಹಾಕಿರಬಹುದು? ಯಾವ ಕಾರಣ ಅವಳನ್ನು ಈ ಕೃತ್ಯಕ್ಕೆ ಪ್ರೇರೇಪಿಸಿರಬಹುದು? ಯಾವ ಚಿಂತೆ ಅವಳ ಎಳೆಯ ಒಡಲಿನಲ್ಲಿ ಕಿಚ್ಚನ್ನು ಹೊತ್ತಿಸಿರಬಹುದು?

ಮೇಜಿನ ಮೇಲೆ ನಿರ್ಲಜ್ಜೆಯಿಂದ ಮಲಗಿತ್ತು ಮಾಟವಾದ ದೇಹ. ಅವಳ ಕೊರಳಿನ ಸುತ್ತ ನೀಲಿ ಗುರುತೊಂದರ ವಿನಹ ದೇಹ ಮತ್ತೆಲ್ಲ ಕಡೆಯೂ ಸರಿಯಾಗಿತ್ತು. ಅವಳ ಮುಖದ ಮೇಲಿದ್ದ ಸ್ನೋ, ಪೌಡರ್ ಮಾಸಿರಲಿಲ್ಲ ಹಣೆಯ ಕುಂಕುಮ ಅಳಿಸಿರಲಿಲ್ಲ. ಮುಡಿಯಲ್ಲಿದ್ದ ಹೂವು ಮಾತ್ರ ಕೊಂಚ ಬಾಡಿತ್ತು.

ಕೆಲವು ವಿದ್ಯಾರ್ಥಿಗಳು ಮುಸಿಮುಸಿ ನಕ್ಕರು.

"ಎಕ್ಸ್‌ಪೆಕ್ಟ್ ಮಾಡ್ತಿದ್ದಳೂಂತ ಕಾಣತ್ತೆ?"

"ಯಾರನ್ನ? ಮಗೂನೋ, ಸಾವನ್ನೋ?"

"ಮಗೂನ ಎಕ್ಸ್‌ಪೆಕ್ಟ್‌ಮಾಡಿ ಸಾವನ್ನ ಇನ್‌ವೈಟ್ ಮಾಡಿರಬೇಕು."

ಹುಡುಗಿಯರೆಲ್ಲ ಒಂದು ಮಾತೂ ಆಡದೇ, ಜೀವ ಬಿಗಿ ಹಿಡಿದುಕೊಂಡು ಪೋಸ್ಟ್‌ಮಾರ್ಟಮ್ಮನ್ನು ನೋಡುತ್ತಿದ್ದರು.

ಹುಡುಗಿಯ ಸುಂದರ ದೇಹದ ಮೇಲೆ ಹರಿತವಾದ ಆಯುಧಗಳು ಸ್ವೇಚ್ಛೆಯಾಗಿ ಓಡಾಡಿದವು. ಡಾಕ್ಟರು ಅವಳ ದೇಹದ ಅನೇಕ ಭಾಗಗಳನ್ನು ಕತ್ತರಿಸಿ ನೋಡಿದರು. ಪರೀಕ್ಷೆ ಮುಗಿದ ನಂತರ ಮತ್ತೆ ಹೊಲದು ಅವಳ ಛಿದ್ರದೇಹವನ್ನು ಜೋಲುಮೋರೆ ಮಾಡಿಕೊಂಡು ನಿಂತಿದ್ದ ಅವಳ ತಂದೆಗೆ ಒಪ್ಪಿಸಿದರು.

ಆತ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು.

"ಜನರ ಅನುಮಾನ ಬುಡವಿಲ್ಲದ್ದು" ಎಂದು ಅವರಿಗೆ ತಿಳಿಯಿತು.

ಫಲಿತಾಂಶ ತಿಳಿದೊಡನೆ ಬಾಡಿದ್ದ ಹುಡುಗಿಯರ ಮುಖಗಳು ಮತ್ತೊಮ್ಮೆ ಅರಳಿದವು. ತಮ್ಮ ಜಾತಿಗೇ ಆಗಬಹುದಾಗಿದ್ದ ಅಪಮಾನಕ್ಕೆ ಆಸ್ಪದ ವಿಲ್ಲವೆಂದು ತಿಳಿದು ಯಶೋದ ಕರವಸ್ತ್ರವನ್ನು ಮೇಲೆ ಹಾರಿಸಿದಳು.

ವಿಜಯ "ಪೂರ್ ಗರ್ಲ್" ಎಂದಳು.

ಡಾಲಿ "ಯಾವಾಗ ಸಾಯ್ತೀವೋ ಏನೊ? ಬದುಕಿರುವಾಗಲೇ ಲೈಫ್‌ನ ಎಂಜಾಯ್ ಮಾಡಬೇಕು" ಎಂದಳು.

"ಕೋಮಲ ಹೂವಿನಿಂದ ಆತ್ಮಸೌರಭವನ್ನು ಹೀರಿದ ಕಾರಣವಾದರೂ ಏನು?" ಎಂದು ಮೀರ ತನ್ನನ್ನು ತಾನೇ ಪ್ರಶ್ನಿಸಿಕೊಂಡಳು.

ರಂಗುರಂಗಿನ ಕತೆ ಕಟ್ಟಿ, ಊರಿನಲ್ಲಿ ಡಂಗುರ ಸಾರಲು ತವಕಿಸುತ್ತಿದ್ದ ಅನೇಕ ನಾಲಗೆಗಳು ಮೌನವಾದವು.

ಹುಡುಗಿಯ ನಡತೆಯ ಬಗ್ಗೆ ಸಂಶಯಪಟ್ಟು ಬಸುರಿಯಾಗಿದ್ದಿರಬೇಕು ಎಂದು ಹಗುರವಾಗಿ ಮಾತನಾಡಿದ ವಿದ್ಯಾರ್ಥಿಗಳ ಕಡೆ ತಿರುಗಿ ವಿಜಯ ಹೇಳಿದಳು.

"ಯಾವುದೂ ಸರಿಯಾಗಿ ತಿಳಿದುಕೊಳ್ಳದೆ ಬಾಯಿಗೆ ಬಂದಂತೆ ಮಾತನಾಡಬಾರದು. ಪಾಪ! ಈಕೆ ಗಂಗಾನದಿಯಷ್ಟೇ ಪವಿತ್ರವಾಗಿದಾಳೆ."

ತಮ್ಮ ವಾದ ನಿರರ್ಥಕ ಎಂದು ತಿಳಿದಿದ್ದ ಹುಡುಗರು ಸುಮ್ಮನಾದರು.

ಕೊನೆಯ ವರ್ಷದಲ್ಲಿದ್ದ ಮೆಡಿಕಲ್ ವಿದ್ಯಾರ್ಥಿಗಳನ್ನು ಬೀಳ್ಕೊಡಲು ವಾರ್ಷಿಕ ಸಮಾರಂಭವೊಂದನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಬೇಕೆಂದು ಕಿರಿಯ ವಿದ್ಯಾರ್ಥಿಗಳು ನಿಶ್ಚಯ ಮಾಡಿದರು.

ಸಮಾರಂಭದ ದಿನ 'ಕಿಸಾ—ಗೋತಮಿ' ನಾಟಕವಾಡಬೇಕೆಂದು ತೀರ್ಮಾನವಾಯಿತು. ಜೊತೆಗೆ 'ರೀಫಂಡ್' ಎಂಬ ಇಂಗ್ಲಿಷ್ ನಾಟಕವನ್ನಾಡಬೇಕೆಂದೂ ನಿಶ್ಚಯವಾಯಿತು.

'ಗೋತಮಿ' ಪಾತ್ರದ ಹೊಣೆಗಾರಿಕೆಯನ್ನು ಮೀರ ನಿರ್ವಹಿಸಿದ್ದಳು. 'ಆನಂದ'ನ ಪಾತ್ರವನ್ನು ಎರಡನೇ ವರ್ಷದಲ್ಲಿ ಓದುತ್ತಿದ್ದ ಗೋಪಿನಾಥ ವಹಿಸಿದ್ದ. ಬುದ್ಧನ ಪಾತ್ರವನ್ನು ತಲೆಯೆಲ್ಲಾ ಪಟ್ಟುಗಟ್ಟಿದ್ದ ಹಿರಿಯ ಉಪಾಧ್ಯಾಯರೊಬ್ಬರಿಗೆ ಒಪ್ಪಿಸಲಾಗಿತ್ತು.

ಒಂದು ಭಾನುವಾರ ಮೂರು ಗಂಟೆಗೆ ಉತ್ಸವ ಮೊದಲಾಯಿತು. 'ಟೀ' ನಂತರ ಫೋಟೋ ಕಾರ್ಯಕ್ರಮವಿದ್ದಿತು. ಮನರಂಜನೆಯ ಕಾರ್ಯಕ್ರಮ ಸಂಜೆ ಐದು ಗಂಟೆಗೆ ಪ್ರಾರಂಭವಾಗಲಿತ್ತು.

ಮೀರ ಶಾಮುವಿಗೆ ಆಹ್ವಾನಪತ್ರಿಕೆಯನ್ನು ಕಳುಹಿಸಿದ್ದಳು. ಆದರೆ ಶಾಮು ತಾನು ಸಮಾರಂಭಕ್ಕೆ ಬರಲಾಗುವುದಿಲ್ಲವೆಂದು ತಿಳಿಸಿದ್ದ. ಅವನು ಬರುವುದಿಲ್ಲವೆಂದು ಮೀರಳಿಗೂ ತಿಳಿದಿತ್ತು.

ಅಧ್ಯಕ್ಷರ ಭಾಷಣ, ಸ್ವಾಗತ ಭಾಷಣಗಳಾದ ನಂತರ ವಿವಿಧ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಬಹುಮಾನಗಳನ್ನು ಹಂಚಲಾಯಿತು. ಇಂಗ್ಲಿಷ್ ನಾಟಕವಾದ ನಂತರ 'ಕಿಸಾ–ಗೋತಮಿ' ನಾಟಕ ಅರಂಭವಾಯಿತು.

ಮೀರ ರಂಗಮಂಟಪದ ಮೇಲೆ ಸುಳಿದು ಬಹಳ ದಿನಗಳಾಗಿದ್ದವು. ಆದುದರಿಂದ ಒಂದು ಬಗೆಯ ಅಧೈರ್ಯ ಹುಟ್ಟಿತು.

ತೆರೆ ಎದ್ದಿತು. ಕೈಲೊಂದು ಬಟ್ಟೆಯಿಂದ ಸುತ್ತಿದ್ದ ದೊಡ್ಡ ಕರ್ಪೂರದ ಬೊಂಬೆಯನ್ನು ಎದೆಗವಚಿಕೊಂಡು ಮೀರ ರಂಗಸ್ಥಳದ ಮೇಲೆ ಬಂದಳು. ಬಿಚ್ಚಿ ಹಾರಾಡುತ್ತಿದ್ದ ತಲೆಗೂದಲು, ಕಪ್ಪು ವಾಯಿಲ್ ಸೀರೆ, ಕಪ್ಪು ರವಿಕೆ, ಹಣೆಯಲ್ಲಿ ಕುಂಕುಮ, ದುಃಖದಾವೇಗದಿಂದ ಕಂಪಿಸುತ್ತಿದ್ದ ತುಟಿಗಳು—ಇವುಗಳನ್ನು ನೋಡಿ ಪ್ರೇಕ್ಷಕರು ಉಸಿರು ಬಿಗಿಹಿಡಿದು ಕುಳಿತರು.

ಶೋಕ, ದೈನ್ಯ ಅವಳ ಮುಖದ ಮೇಲೆ ನಾಟ್ಯವಾಡುತ್ತಿದ್ದವು.

"ಹಗಲೆಲ್ಲ ಕತ್ತಲಾಯ್ತು<br>
ಬಾಳೆಲ್ಲ ಬರಿದಾಯ್ತು<br>
ಜಗವೆಲ್ಲ ಮಾಯವಾಯ್ತು...."

ಗೋತಮಿ ತುಂಬಿ ಬಂದ ಶೋಕದಿಂದ ರೋದಿಸಿ ಹಾಡಿದಳು. ರಂಗಮಂಟಪದ ಮೇಲೆ ಬಂದೊಡನೆ, ಮೊದಲನೆಯ ಸಾಲನ್ನು ಹಾಡಿದೊಡನೆ 'ಗೋತಮಿ' ಮರೆಯಾದಳು. ಮೀರ—ತನ್ನ ಕಂದನನ್ನು ಕಳೆದುಕೊಂಡಿದ್ದ ತಾಯಿ ಮೀರ–ಅವಳ ಸ್ಥಾನದಲ್ಲಿ ನಿಂತು ಆನಂದನನ್ನು ಯಾಚಿಸುತ್ತಿದ್ದಳು

"ಕಂಡಿಹಿರಾ ಕಂದನನು ?<br>
ಕೊಡಿಸುವಿರಾ ಬದುಕನ್ನು ?<br>
ಜೀವನದ ಬೆಳಕನ್ನು...."

—ವೀಣಳನ್ನು ನೆನೆದು ಮೀರಳ ಕಣ್ಣುಗಳಿಂದ ನೀರು ಹರಿಯತೊಡಗಿತು. ಗೋತಮಿಯ ದುಃಖ ಮೀರಳ ಪಾಲಿಗೆ ಕೇವಲ ಅಭಿನಯವಾಗಲಿಲ್ಲ.

ಮಗುವನ್ನು ಕಳೆದುಕೊಂಡಿದ್ದ ತಾಯಿಯ ಶೋಕದಿಂದ ಮೀರ ಆರ್ತಳಾಗಿ ನುಡಿದಳು.

"ನಗುವ ತೋರದು ಕೂಸು
ಎದೆಯ ತಬ್ಬದು ಕೂಸು...."

—'ವೀಣಾ, ವೀಣಾ' ಎಂದು ನರಳಿತು ಹೃದಯ.

—ತನ್ನ ಬಾಳನ್ನು ಬರಿದು ಮಾಡಿ ವೀಣ ಎಲ್ಲಿ ಹೋದಳು? ತನ್ನೊಬ್ಬ ಳನ್ನೇ ಬಿಟ್ಟು ಅವಳು ಹೋದುದಾದರೂ ಎಲ್ಲಿಗೆ?

ಮೀರಳ ಕಂಠ ಗದ್ಗದವಾಯಿತು. ಅವಳ ಬಳಿಯೇ ನಿಂತಿದ್ದ ಆನಂದ—ಗೋಪಿನಾಥ—ಅವಳ ಶೋಕ ಕಂಡು ಗಾಬರಿಯಾದ. ಇದೇನು ನಟನೆಯೋ ಅಥವಾ ನಿಜವಾದ ವ್ಯಥೆಯೋ? ಅವಳ ಕಣ್ಣುಗಳಿಂದ ನೀರು ಒಂದೇ ಸಮನೆ ಹರಿದು ಬರುತ್ತಿತ್ತು. ಗಂಟಲಿನ ನರ ಉಬ್ಬಿ ಮರೆಯಾಗು ತ್ತಿತ್ತು. ಎದೆ ಏರಿಳಿಯುತ್ತಿತ್ತು.

"ಬದುಕಿಪನೇ ಈ ಕೂಸ
ನಗಿಸುವನೇ ಈ ಕೂಸ...."

ಎಂದವಳು ಕೇಳಿದಾಗ ಗಂಟಲು ಗದ್ಗದವಾಯಿತು.

ತೆರೆ ಕೆಳಗೆ ಬಂದೊಡನೆ ಅಭಿನಯವನ್ನು ಮೆಚ್ಚಿದ್ದ ಪ್ರೇಕ್ಷಕರು ಚಪ್ಪಾಳೆ ಹೊಡೆದರು.

ಎರಡನೆಯ ದೃಶ್ಯದಲ್ಲಿ ಬುದ್ಧ, ಸುಜಾತ ಮಾತನಾಡುತ್ತಿದ್ದಾಗ ವಿಂಗ್ಸ್‌ನಲ್ಲಿ ಮೀರಳನ್ನು ನೋಡಿ ಗೋಪಿನಾಥ ಹೇಳಿದ.

"ತುಂಬಾ ಎಕ್ಸೈಟ್ ಆಗಬೇಡಿ ಮೀರ. ನೀವು ಬಹಳ ಎಮೋಷ ನಲ್ ಅಂತ ಕಾಣುತ್ತೆ."

ವಿಜಯ ಕುಣಿದಾಡುತ್ತಾ ಬಂದು ಮೀರಳ ಕೈ ಅದುಮಿದಳು.

"ಇಂತಹ ಅಭಿನಯ ನಾನು ಎಂದೂ ನೋಡಿರಲಿಲ್ಲ. ಈ ಮೇಕ್ ಅಪ್‌ನಲ್ಲಿ, ಕಪ್ಪು ಉಡುಪಿನಲ್ಲಿ ನೀನು ಎಷ್ಟು ಚೆನ್ನಾಗಿ ಕಾಣ್ತಿ ಗೊತ್ತಾ?"

ಎರಡನೆಯ ದೃಶ್ಯ ಆರಂಭವಾಯಿತು.

ಬುದ್ಧನ ಪ್ರಶ್ನೆಗೆ ಗೋತಮಿ ನುಡಿದಳು.

"ಕೊಡಿಸುವೆಯಾದರೆ ಪೇಳುವೆ ತಂದೆ...."

—ತನ್ನ ವೀಣಳನ್ನು ಯಾರು ಬದುಕಿಸಿದರು? ಅವಳನ್ನು ಉಳಿಸಿ ಕೊಳ್ಳಲು ತಾನು ಶಾಮು ಎಷ್ಟು ಕಷ್ಟಪಟ್ಟಿದ್ದರು!

ಬುದ್ಧನ ಅಭಯವಾಣಿಗೆ ಗೋತಮಿ ನುಡಿಯುತ್ತಾಳೆ

"ಕೊಡಿಸುವೆಯಾ ಕಂದನನು?
ನಲಿಸುವೆಯಾ ಚಂದಿರನ?
ಬೆಳಗುವೆಯಾ ಬಾಂದಳವ?

ಒಂದೆ ಕೂಸಿದು ಚಿನ್ನ,
ಬಂದು ನಲಿಸಿತು ಎನ್ನ,
ನಕ್ಕು ನಗಿಸಿತು ಮನವ...."

—ವೀಣಾ ತನ್ನ ಒಬ್ಬಳೇ ಮಗಳು. ಜಾನಿಯೊಬ್ಬಳೇ ಶಾಮುವಿನ ಪ್ರೇಮದ ಪುತ್ಥಲಿ. ತಮ್ಮಿಬ್ಬರ ಒಬ್ಬಳೇ ಮಗಳು ವೀಣಾ. ಒಬ್ಬಳಾದರೂ ಮನೆಯಲ್ಲಿ ಹತ್ತು ಜನವಿದ್ದಂತೆ ಸಂಭ್ರಮ. ತಮ್ಮನ್ನು ನಕ್ಕು ನಲಿಸಿದ ವೀಣಾ ಈಗೆಲ್ಲಿ?"

" ನಲಿಸುವೆಯಾ ಚಂದಿರನ ?"

—ಇನ್ನೆಲ್ಲಿಯ ಚಂದ್ರ ? ವೀಣಾ ಮಣ್ಣಿನೊಳಗೆ ಮಣ್ಣಾಗಿ ಹೋಗಿದ್ದಾಳೆ. ತನ್ನ ಬದುಕು? ಕತ್ತಲು ಕವಿದ ಶೂನ್ಯ ಆಕಾಶ. ಅಲ್ಲಿ ಒಂದು ನಕ್ಷತ್ರದ ಮಿಣುಕು ಆಸೆಯೂ ಇಲ್ಲ. ಅವಳ ಸೌಂದರ್ಯ, ಜಾಣ್ಮೆ, ತುಂಟತನ ಎಲ್ಲ ಒಂದು ಹಿಡಿ ಬೂದಿ. ಒಂದೇ ಒಂದು ಹಿಡಿ ಬೂದಿ.

ಎರಡನೆಯ ದೃಶ್ಯ ಮುಗಿದೊಡನೆ ಕಂಬನಿಯಿಂದ ಕಣ್ಣು ಕಾಣಿಸದಾದ ಮೀರ ಗ್ರೀನ್ ರೂಮಿನಲ್ಲಿದ್ದ ಕುರ್ಚಿಯೊಂದರ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅತ್ತಳು. ಗೋಪೀನಾಥ ಅವಳ ಅಳು ನೋಡಿ ಹೆದರಿಬಿಟ್ಟ.

" ಸ್ವಲ್ಪ ಸೈರಿಸಿಕೊಳ್ಳಿ ಮೀರಾ. ಹೀಗೆ ಉದ್ವೇಗಗೊಳ್ಳಬಾರದು. ಇದು ಬರಿ ನಾಟಕ. ಅಷ್ಟೆ. ಇದಕ್ಕೇಕೆ ಇಷ್ಟೊಂದು ದುಃಖ ?"

ಅವನಿಗೆ ಇದು ಕೇವಲ ನಾಟಕವಿರಬಹುದು. ಆದರೆ ತನಗೋ ? ತನ್ನ ಕರುಳಿನ ಒಂದು ಚೂರನ್ನು ಅಗ್ನಿಗೆ ಅರ್ಪಿಸಿದ ತನಗೋ ?

ವಿಜಯ ಧಾವಿಸಿ ಬಂದು ಮೀರಳ ಕೊರಳಿನ ಸುತ್ತಲೂ ಕೈ ಹಾಕಿ " ಮೀರಾ....ಮೀರಾ ಸೈರಿಸಿಕೋ " ಎಂದಳು.

ಕಂಬನಿಯಿಂದ ಅಳಿಸಿಹೋಗಿದ್ದ ಬಣ್ಣವನ್ನು ಮತ್ತೆ ಮುಖಕ್ಕೆ ಬಳಿದುದಾಯ್ತು. ತನ್ನ ನೋವನ್ನು ನುಂಗಿಕೊಂಡು ಮೀರ ಮೇಲೆದ್ದಳು.

ಸಾವು ಕಾಣದ ಮನೆಯ ಸಾಸಿವೆಯ ಕಾಣದೆ ಗೋತಮಿ ದಯಾಳುವಾದ ಬುದ್ಧದೇವನೆಡೆಗೆ ಮರಳಿ ಬಂದಳು. ಬುದ್ಧನ ಅಮೃತವಾಣಿಯಿಂದ ಗೋತಮಿಯ ಶೋಕ ತೊಲಗಿ ಅವಳು ಬೆಳಕನ್ನು ಕಂಡಳು.

" ಸಾವಿಲ್ಲವೆಡೆಯಿಲ್ಲ—ನೋವಿಲ್ಲದೆಡೆಯಿಲ್ಲ " ಎಂಬ ಮಾತು ಕೇಳಿ ಗೋತಮಿಗೆ ಜ್ಞಾನೋದಯವಾಗಿ ನುಡಿದಳು

" ಯಾರೋ ಕೊಟ್ಟರು ಅದನು !
ಯಾರೋ ಕಿತ್ತರು ಅದನು !

ಅದಕೇಕೆ ಆ ಹಿಗ್ಗು, ಈಗೇಕೆ ಈ ಕುಗ್ಗು...."

—ಗೋತಮಿಯ ನೋವು ಪರಿಹಾರಮಾಡಲು ಅವಳಿಗೆ ಗೌತಮನಂತಹ ಮಹಾತ್ಮ ಸಿಕ್ಕಿದ್ದ. ಆದರೆ ತನಗೆ?

ಗೋತಮಿ ಬುದ್ಧನ ಚರಣಗಳಿಗೆ ನಮಿಸುತ್ತಿದ್ದಂತೆಯೇ ತೆರೆ ಜಾರಿತು.

ಉತ್ತಮ ಅಭಿನಯ ನೀಡಿದುದಕ್ಕಾಗಿ ಮೀರಳಿಗೆ ಪ್ರಥಮ ಬಹುಮಾನ ಬಂದಿತು. ಅಧ್ಯಕ್ಷರು ತನ್ನ ಹೆಸರನ್ನು ಕೂಗಿದಾಗ ವಿಂಗ್ಸ್‌ನಲ್ಲಿ ನಿಂತಿದ್ದ ಮೀರ ಗೋಪಿನಾಥನಿಗೆ

" ನನ್ನದು ಅಭಿನಯವಲ್ಲ. ಆದುದರಿಂದ ನನಗೆ ಬಹುಮಾನ ಬೇಡ" ಎಂದಳು.

" ಅಷ್ಟೊಂದು ಅದ್ಭುತವಾಗಿ ಅಭಿನಯಿಸಿ ಈ ಬಹುಮಾನ ಬೇಡವೆನ್ನುವುದು ನ್ಯಾಯವಲ್ಲ."

"ನನ್ನದು ಅಭಿನಯವಲ್ಲ. ದಯವಿಟ್ಟು ನನ್ನ ಮಾತಿಗೆ ಮನ್ನಣೆ ಕೊಡಿ."

ಗೋಪಿನಾಥ ರಂಗಮಂಟಪವನ್ನೇರಿ ಅಧ್ಯಕ್ಷರ ಕಿವಿಯಲ್ಲಿ ಮೀರಳ ಮಾತನ್ನು ಹೇಳಿದ. ಅಧ್ಯಕ್ಷರು ಅದೇ ಬಹುಮಾನವನ್ನು 'ರೀಫಂಡ್' ನಾಟಕದಲ್ಲಿ ಪಾತ್ರ ವಹಿಸಿದ್ದ ವೆಂಕಟೇಶಮೂರ್ತಿಗಿತ್ತರು.

ಗೋಪಿನಾಥ ಮತ್ತೆ ಮೀರಳ ಬಳಿಗೆ ಬಂದು

" ನೀವು ಹಾಗೆ ಅಳಲು ಹೇಗೆ ಸಾಧ್ಯವಾಯಿತು? ನಿಮ್ಮ ಕಣ್ಣಿಂದ ನೀರು ಹರಿಯುತ್ತಿದ್ದುದು ನೋಡಿ ನನಗೆ ಗಾಬರಿಯಾಗಿತ್ತು" ಎಂದ.

ಮಗಳ ಮೃತ್ಯುವಿನ ನೆನಪು ಮರುಕಳಿಸಿ, ನೆನಪು ಹೃದಯವನ್ನು ಹಿಂಡಿದಾಗ ಕಣ್ಣೀರು ಬರುವುದು ಆಶ್ಚರ್ಯವೇ?

ಗೋಪಿನಾಥನ ಮಾತಿಗೆ ಮೀರ ವಿಷಾದದಿಂದ ನಕ್ಕಳು. ಅಧ್ಯಕ್ಷರು ಮೀರಳ ಅಭಿನಯವನ್ನು ಹೊಗಳಿ

" ನೀವು ಬಹುಮಾನ ಯಾಕೆ ಬೇಡವೆಂದಿರಿ?" ಎಂದಾಗ ಮೀರ

"ಅಭಿನಯದ ಪ್ರಥಮ ಬಹುಮಾನ ಪಡೆಯುವ ಯೋಗ್ಯತೆ ನನಗಿರಲಿಲ್ಲ" ಎಂದು ವಿನಯವಾಗಿ ನುಡಿದಳು.

ಸಮಾರಂಭವೆಲ್ಲಾ ಮುಗಿದ ಮೇಲೆ ಮೀರಳ ಮಿತ್ರರು ಬಂದು ಅವಳನ್ನು ಅಭಿನಂದಿಸಿದರು.

" ನಿಮ್ಮ ಅಭಿನಯ ಸೊಗಸಾಗಿತ್ತು."

ಅಭಿನಯ ! ತನ್ನ ಹೃದಯ ಬೆಂದುಹೋಗುತ್ತಿದ್ದುದು ಅವರಿಗೇನು ಗೊತ್ತು ?

ಮೊದಲನೆ ವರ್ಷದ ಪರೀಕ್ಷೆ ಮುಗಿಯಿತು.

ಮೀರ ಹಳ್ಳಿಗೆ ಹಿಂಗಿರುಗಿದಳು. ದಸರೆಯ ರಜದಲ್ಲೂ ಅವಳು ಹಳ್ಳಿಗೆ ಹೋಗಿರಲಿಲ್ಲ. ಶಾಮುವೂ ಅವಳನ್ನು ಹಳ್ಳಿಗೆ ಬರಬೇಕೆಂದು ಒತ್ತಾಯಮಾಡಿ ಕರೆದಿರಲಿಲ್ಲ. ತಾನು ಅವನಿಂದ ದೂರವಿದ್ದಷ್ಟೂ, ಹೆಂಡತಿಯ ಅಭಾವ ಕಂಡುಬಂದು ಶಾಮು ಬೇಗ ಮರುಮದುವೆಯಾದರೂ ಆಗಬಹುದು ಎಂಬ ದೂರದ ಆಸೆಯೊಂದು ಅವಳಲ್ಲಿ ಉದಯವಾಗಿತ್ತು. ಆದುದರಿಂದ ಮೀರ ಏನೇನೋ ಕಾರಣಗಳನ್ನು ಹೂಡಿ ಹಳ್ಳಿಗೆ ಹೋಗಲಿಲ್ಲ.

ವೆಂಕಮ್ಮನವರು ಮೀರಳನ್ನು ಆದರದಿಂದ ಬರಮಾಡಿಕೊಂಡರೂ ಅಸಮಾಧಾನ ಅವರ ಅಂತರಂಗದಲ್ಲೇ ಹೊಗೆಯಾಡುತ್ತಿತ್ತು. ಶಾಮುವಿನಂತಹ ಗಂಡನನ್ನು ಒಂದು ವರ್ಷ ಪೂರ್ತಿ ಬಿಟ್ಟು, ಹೆಂಡತಿಯಾದವಳು ಮೈಸೂರಿನಲ್ಲಿ ಓದಿನ ನೆಪ ಹಾಕಿಕೊಂಡು ಕುಳಿತಿರುವುದೇನು ಚೆಂದ ?

ಶಾಮು ಒಳ್ಳೆಯ ಹುಡುಗ. ಮೀರಳ ವ್ಯಾಸಂಗಕ್ಕೆ ಒಂದು ದಿನವೂ ಅಡ್ಡಿ ಮಾಡಿದವನಲ್ಲ. ಆದರೆ ಅವನನ್ನು ಹೀಗೆ ಬಾಡಿಸಬಹುದೇ ? ಮೀರಳಂತಹ ಸುಂದರಿಯಾದ ಹೆಂಡತಿಯಿದ್ದೂ ಅವನ ಪಾಲಿಗೆ ಇಲ್ಲ ವಾಗಿದೆ.

" ಅವರು ಬಂದ ಮೇಲೆ ಊಟ ಮಾಡುತ್ತೇನೆ " ಎಂದು ಹೇಳಿ ಮೀರ ವೆಂಕಮ್ಮನವರೊಡನೆ ಮಾತನಾಡುತ್ತಾ ಕುಳಿತಿದ್ದಳು. ಮೀರ ತನ್ನ ಕಾಲೇಜಿನ ವಿಷಯಗಳನ್ನು ಹೇಳಿದಾಗ ವೆಂಕಮ್ಮನವರಿಗೆ ಆಶ್ಚರ್ಯವಾಯಿತು.

" ಅಬ್ಬ ! ನಿನಗೆ ಹೆಣ ಕುಯ್ಯೋಕೆ ಧೈರ್ಯ ಎಲ್ಲಿಂದ ಬಂತು ?"

" ಮೊದಲನೆಯ ದಿನ ಸ್ವಲ್ಪ ಹೆದರಿಕೆ ಆಯ್ತು. ಈಗ ಸರಿಹೋಗಿದೆ."

" ನಿಮಗೆ ಕುಯ್ಯೋಕೆ ಅವುಗಳನ್ನ ಎಲ್ಲಿಂದ ಒದಗಿಸುತ್ತಾರೆ ?"

" ಪಾಪಿ ಪರದೇಶಿಗಳು, ಭಿಕ್ಷುಕರು ಇವರ ಒಂದು ದೇಹಕ್ಕೆ ಐದು ರೂಪಾಯಿ ಕೊಟ್ಟು ಕೊಂಡುಕೊಳ್ಳುತ್ತಾರೆ. ಬಡತನದಲ್ಲಿರುವವರಿಗೆ ಐದು ರೂಪಾಯಿಯೂ ಒಂದು ದೊಡ್ಡ ನಿಧಿ. ಹಣದಾಸೆಗೆ ಅವರು ಕೊಟ್ಟು ಬಿಡ್ತಾರೆ."

"ಗಂಡು ಹುಡುಗರು, ಹೆಣ್ಣು ಹುಡುಗರು ಒಟ್ಟಿಗೆ ಹೆಣ ಕುಯ್ತೀರಾ?"

" ಹೂಂ.''

" ಹೆಂಗಸರ ಶವಾನೂ ನಿಮಗೆ ಸಿಕ್ಕುತ್ತಾ?"

" ಹೂಂ. ಇಲ್ಲದಿದ್ದರೆ ಹೆಂಗಸಿನ ಅಂಗರಚನೆ ನಮಗೆ ಹೇಗೆ ತಿಳಿಯ ಬೇಕು ?"

" ಹೆಣಗಳು ಬರೀ ಮೈಲೇ ಮಲಗಿರುತ್ತವೋ ಅಥವಾ ಏನಾದರೂ ಬಟ್ಟೆ ಹೊದೆಸಿರುತ್ತಾರೋ ?"

ವೆಂಕಮ್ಮನವರ ಮಾತು ಕೇಳಿ ಮೀರ ಮನಃಪೂರ್ತಿಯಾಗಿ ನಕ್ಕಳು. ಅವಳ ನಗು ನಿಲ್ಲುವುದಕ್ಕೆ ಮುಂಚೆಯೇ ಶಾಮು ಒಳಗೆ ಬಂದ.

ಶಾಮುವಿಗೆ ಮೀರಳ ಮೇಲೆ ಅಗಾಧ ಕೋಪ ಬಂದಿತ್ತು. ರಜೆಯಲ್ಲಿ ಅವಳು ಹಳ್ಳಿಗೆ ಬಾರದೇ ಊರಿನಲ್ಲಿಯೇ ಉಳಿದುದರ ಕಾರಣವನ್ನು ಅವನು ಊಹಿಸಿದ್ದ. ಈಗ ಅವಳು ಬಂದಿರುವುದನ್ನು ನೋಡಿ ಶಾಮು ವ್ಯಂಗ್ಯ ವಾಗಿ ಕೇಳಿದ.

" ಈ ರಜದಲ್ಲಿ ಎಲ್ಲಿಗೂ ಹೋಗಲಿಲ್ಲವೇ ?"

ಅವನ ಮಾತಿನಲ್ಲಡಗಿದ್ದ ವ್ಯಂಗ್ಯ ಮೀರಳಿಗೆ ತಿಳಿಯಿತು. ಆದರೂ ಅವಳು ತನಗೆ ಏನೂ ಅರ್ಥವಾಗದವಳಂತೆ

" ಇಲ್ಲ. ಮುಂದಿನ ಸಲ ವಿಜಯ ನನ್ನ ಪೂನಾಗೆ ಬರುವಂತೆ ಹೇಳಿ ದಾಳೆ. ಅವಳೊಡನೆ ಪೂನಾ, ಬೊಂಬಾಯಿ ಎಲ್ಲವನ್ನೂ ನೋಡಿಕೊಂಡು ಬರ್ತೀನಿ " ಎಂದು ಉತ್ತರ ಕೊಟ್ಟಳು.

" ಈ ಸಲ ಯಾರೂ ಕರೆಯಲಿಲ್ಲವೇ ?"

" ಇಲ್ಲ."

ಗಂಡ, ಹೆಂಡತಿಯ ಮಾತುಗಳನ್ನು ಕೇಳುತ್ತಾ ವೆಂಕಮ್ಮನವರು ಸುಮ್ಮನೆ ಕುಳಿತಿದ್ದರು. ಆದರೆ ಅವರು ಮನಸ್ಸಿನಲ್ಲಿಯೇ ಮೀರನನ್ನು ನಿಂದಿಸಿದರು.

ಸಂಜೆ ಶಾಮು ಹೊರಗೆ ಹೋದೊಡನೆ ವೆಂಕಮ್ಮನವರು ಮೀರನನ್ನು ತರಾಟೆಗೆ ತೆಗೆದುಕೊಂಡರು.

" ಮನೆ ಯಜಮಾನ್ತಿೀಂತ ಅನ್ನಿಸಿಕೊಂಡ ನೀನು ಗಂಡನ್ನ ಬಿಟ್ಟು ದೂರ ಇರೋದು ಚೆನ್ನಾಗಿರೋದಿಲ್ಲಮ್ಮ. ಶಾಮು ಬಹಳ ಸೊರಗಿ ಹೋಗಿ ದಾನೆ."

ಹೌದು ಶಾಮು ಸೊರಗಿದ್ದುದು ಮೀರಳಿಗೂ ತಿಳಿದಿತ್ತು.

" ನಾನೇನು ಮಾಡಲಿ ಹೇಳಿ ? ಡಾಕ್ಟರ್ ಪರೀಕ್ಷೆ ಬಹಳ ಸುಲಭ ವಾದ ಪರೀಕ್ಷೆಯಲ್ಲ. ತುಂಬ ಓದುವುದಿರುತ್ತದೆ. ಆದುದರಿಂದ ರಜದಲ್ಲಿ ಊರಿಗೆ ಬರಲೂ ಆಗುವುದಿಲ್ಲ."

"ನನಗೇನೋ ಇದೆಲ್ಲಾ ಚೆನ್ನಾಗಿಲ್ಲಮ್ಮ."

ತಾನು ಯಾವುದೋ ಒಂದು ಒಳ್ಳೆಯ ಉದ್ದೇಶವಿಟ್ಟುಕೊಂಡು ದೂರ ಉಳಿದರೆ ಜನ ಏನೇನೋ ಅಪಾರ್ಥ ಮಾಡುವರಲ್ಲಾ ?

"ನಾನೇನು ಮಾಡಲಿ ?"

"ಶಾಮುವಿನ ಗೃಹಲಕ್ಷ್ಮಿಯಾಗಿರು ಸಾಕು."

ಮೀರ ಒಂದು ಕ್ಷಣ ಹಿಂದೆ ಮುಂದೆ ಯೋಚಿಸಿ ಹೇಳಿದಳು.

"ನಾನು ಅವರಿಗೆ ಬೇರೆ ಮದುವೆ ಮಾಡಿಕೊಳ್ಳಲು ಹೇಳಿದ್ದೇನೆ."

ವೆಂಕಮ್ಮನವರು ಬೆಚ್ಚಿದರು. ಅವಳು ಹೇಳಿದ ಮಾತನ್ನು ತಾವು ಸರಿಯಾಗಿ ಕೇಳಿಸಿಕೊಂಡರೋ ಹೇಗೆ ?

"ಏನಂದೆ ?"

"ನಾನು ಅವರಿಗೆ ಬೇರೆ ಮದುವೆ ಮಾಡಿಕೊಳ್ಳಲು ಹೇಳಿದ್ದೇನೆ. ಅವರನ್ನು ಒಪ್ಪಿಸುವ ಭಾರ ನಿಮ್ಮದು."

"ಹೀಗಂದರೆ ಹೇಗಮ್ಮಾ ?"

"ನಾನೂ ಸ್ಪಷ್ಟವಾಗಿ ಹೇಳಿಬಿಡುತ್ತೇನೆ ಕೇಳಿ. ನನ್ನ ಬಾಳು ಮೊದಲಿನಿಂದಲೂ ಒಂದು ರೀತಿಯಿಂದ ಸೊಟ್ಟಾಯಿತು. ನನ್ನ ಮನಸ್ಸಿಗಾಗಿರುವ ಅಶಾಂತಿಯನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಓದುತ್ತಿದ್ದೇನೆ. ನಾನು ಓದಿ ಡಾಕ್ಟರಾದ ಮೇಲೆ ಹಳ್ಳಿಗೇ ಹಿಂತಿರುಗಿ ಬರುತ್ತೇನೆ. ಇಲ್ಲಿಯೇ ನಿಂತು ರೋಗರುಜಿನಗಳಿಂದ ನರಳುತ್ತಿರುವ ಬಡರೈತರಿಗೆ ನನ್ನ ಕೈಲಾದಷ್ಟು ಸೇವೆಯನ್ನು ಮಾಡಬೇಕೆಂದಿದ್ದೇನೆ. ಅವರೂ ದೊಡ್ಡ ಮನಸ್ಸು ಮಾಡಿ, ನನಗೆ ಎಲ್ಲ ವಿಧದಲ್ಲಿಯೂ ಸಹಾಯ ಮಾಡುವುದಾಗಿ ಒಪ್ಪಿಕೊಂಡಿದ್ದಾರೆ. ಆದರೆ....ಅವರೊಡನೆ ಸಂಸಾರ ಮಾಡಲು ಬೇರೊಬ್ಬ ಹುಡುಗಿಯನ್ನು ತಂದು ಮದುವೆ ಮಾಡಬೇಕೆಂದಿದ್ದೇನೆ."

"ನೀನು ?"

"ನನ್ನನ್ನು ನಂಬಿದರೆ ಏನೇನೂ ಪ್ರಯೋಜನವಿಲ್ಲ. ನೀವೂ ಅವರಿಗೆ ಹೇಳಿ ಅವರ ಮನಸ್ಸನ್ನು ತಿರುಗಿಸಲು ಯತ್ನಿಸಿ. ನಾನೂ ಕೈಲಾದ ಪ್ರಯತ್ನ ಮಾಡುತ್ತೇನೆ" ಎಂದು ಹೇಳಿದವಳೇ ಮೀರ ಎದ್ದು ಹೊರಟುಹೋದಳು.

ರಾತ್ರಿ ಊಟ ಮುಗಿಸಿ ಮೀರ ಹಾಸಿಗೆಯ ಮೇಲೆ ಒರಗಿದ್ದಾಗ ಶಾಮು ಒಳಗೆ ಬಂದ. ಮಧ್ಯಾಹ್ನ ಹೆಂಡತಿಯನ್ನು ಸರಿಯಾಗಿ ಮಾತನಾಡಿಸದೇ ಹೋದುದಕ್ಕಾಗಿ ಶಾಮುವಿಗೆ ಆಮೇಲೆ ಪಶ್ಚಾತ್ತಾಪವಾಗಿತ್ತು.

"ಏನ್ರೀ ಬಡವನ ನೆನಪು ಈಗಲಾದರೂ ಬಂತೇ ?" ಎಂದ ಶಾಮು.

"ಇಲ್ಲ. ಈಗಲೂ ಬರಲಿಲ್ಲ."

"ಹಾಗಾದರೆ ಈಗ ಯಾಕೆ ಇಲ್ಲಿಗೆ ಬಂದೆ?"

"ಇನ್ನೆಲ್ಲಿಗೆ ಹೋಗಬೇಕಾಗಿತ್ತು ?"

"ಎಲ್ಲಿಗಾದರೂ ಸರಿ. ನನ್ನಿಂದ ದೂರ...."

"ಇನ್ನೆಲ್ಲಾದರೂ ಹೋದರೆ ನನಗೆ ಅನ್ನ ಹಾಕೋರು ಯಾರು? ನೀವೇನೋ ದೊಡ್ಡ ಮನಸ್ಸು ಮಾಡಿ, ನಾನು ಕೊಟ್ಟ ಕಾಟಾನೆಲ್ಲಾ ಸಹಿಸಿಕೊಂಡಿದೀರೀಂದ್ರೆ ಎಲ್ಲರೂ ನಿಮ್ಮ ಹಾಗಿರುತ್ತಾರೆಯೇ?"

"ಇನ್ನು ಹೇಗೆ ಇರುತ್ತಾರೆ?"

"ಇವಳಲ್ಲದಿದ್ದರೆ ಮತ್ತೊಬ್ಬಳೂಂತ ಬೇರೆ ಮದುವೆಮಾಡಿಕೋತಿದ್ರು."

"ಪುನಃ ಅದೇ ಮಾತು. ಇನ್ನೊಂದು ಸಲ ಆ ಮಾತನಾಡಿದರೆ...."

"ಏನು ಮಾಡ್ತೀರಿ?"

"ಬಾಯಿ ಮುಚ್ಚುತ್ತೇನೆ."

"ನನ್ನ ಮಾತು ದಯವಿಟ್ಟು ಕೇಳಿ. ನೀವು ಬೇರೆ ಮದುವೆ..."

ಮೀರ ಮಾತನಾಡುತ್ತಿದ್ದಂತೆಯೇ ಶಾಮು ಅವಳ ಬಳಿ ನಿಂತು "ಸಾಕು" ಎಂದ.

"ನನ್ನ ಮಾತಿಗೆ ಬೆಲೆ ಕೊಡಿ. ನಿಮಗಿನ್ನೂ...."

ಶಾಮು ತನ್ನ ಮಾತಿನಂತೆ ಮೀರಳಿಗೆ ಮಾತನಾಡಲು ಮುಂದೆ ಅವಕಾಶ ಕೊಡಲಿಲ್ಲ. ರೆಕ್ಕೆಯಿಲ್ಲದ ಕಿನ್ನರಿಯಂತೆ ಕಾಣುತ್ತಿದ್ದ ಮೀರಳನ್ನು ಆಸೆಯಿಂದ ನೋಡುತ್ತಾ ಶಾಮು ಕೇಳಿದ

"ಭಿಕ್ಷಾಂದೇಹಿ."

ಅದೇಕೋ ಮೀರ ನವ ವಧುವಿನಂತೆ ನಾಚಿದಳು.

ಶಾಮುವಿನ ಮರುಮದುವೆಯ ಬಗ್ಗೆ ಅವರಿಬ್ಬರಲ್ಲೂ ಆಗಾಗ್ಗೆ ಜಗಳಗಳಾಗುತ್ತಿದ್ದವು. ಮೀರಳ ಮಾತನ್ನು ಶಾಮು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಒಂದೊಂದು ಸಲ ಏನೂ ಕೆಲಸವಿಲ್ಲದೆ ಸುಮ್ಮನೆ ಕುಳಿತಿದ್ದಾಗ, ಶಾಮು ಮೀರಳನ್ನು ತಾನಾಗಿಯೇ ಬೇರೆ ಮದುವೆಯ ಮಾತಿಗೆಳೆದು ಕೀಟಲೆ ಮಾಡುತ್ತಿದ್ದ.

"ಮೀರಾ, ನನ್ನ ಮದುವೆಯ ವಿಷಯ ಮಾತಾಡೋಣ ಬಾ. ಯಾಕೋ ಬೇಜಾರಾಗ್ತಿದೆ."

ಅವನು ಹಾಗೆ ಹೇಳಿದೊಡನೆ ಮೀರಳಿಗೆ ಕೋಪ ಬಂದು ಬಿಡುತ್ತಿತ್ತು. ಅವಳು ತನ್ನ ಕೈಲಿ ಹಿಡಿದಿದ್ದ ಪಾತ್ರೆಯನ್ನು ಎಸೆದು ತನ್ನ ಕೋಪ ಪ್ರದರ್ಶಿಸಿದಾಗ ಶಾಮು ಶಾಂತನಾಗಿ ನುಡಿಯುತ್ತಿದ್ದ.

" ಡಾಕ್ಟರಿಗೆ ಸಹನೆಯೇ ಮುಖ್ಯವಾದುದು. ನೀನು ಹೀಗೆ ರೋಗಿಗಳೊಡನೆ ಕೋಪ ಮಾಡಿಕೊಂಡರೆ ಅವರ ಗತಿಯೇನು ?"

" ನೀವೇನೂ ರೋಗಿಯಲ್ಲ."

" ನಾನೂ ಒಂದು ವಿಧವಾದ ರೋಗಿಯೇ. ಆದರೆ ನನ್ನದು ಬೇರೆ ರೀತಿಯ ರೋಗ."

" ನಿಮ್ಮ ರೋಗಾನ ನಾನು ವಾಸಿಮಾಡಲಾರೆ. ನೀವು ಇನ್ನೊಂದು ಮದುವೆ ಮಾಡಿಕೊಂಡರೆ ಬರುವ ಹುಡುಗಿ ವಾಸಿಮಾಡ್ತಾಳೆ."

" ನೀನ್ನೇ ಯಾಕೆ ಇನ್ನೊಂದು ಸಲ ಮದುವೆ ಮಾಡಿಕೋಬಾರದು ?"

" ನಾನು ಸತ್ತಾದ್ರೂ ಹೋದ್ರೆ ನೀವು ಬೇರೆ ಮದುವೆ ಆಗ್ತೀರೋ ಏನೋ " ಮೀರ ನಿರಾಶೆ, ಕೋಪದಿಂದ ಕಹಿಯಾಗಿ ನುಡಿದಳು. ಶಾಮು ಅವಳ ಮಾತಿಗೆ ನಕ್ಕು

" ಇನ್ನೂ ಒಳ್ಳೆಯದೇ ಆಯಿತು. ಆಗ ನನ್ನ ಮದುವೆ ಮಾಡಿಕೊಳ್ಳೀಂತ ಪೀಡಿಸುವವರೇ ಇರುವುದಿಲ್ಲ " ಎಂದ.

" ನಿಮ್ಮ ಕೈಲಿ ಮಾತನಾಡುವವರಿಗೆ ಬುದ್ಧಿಯಿಲ್ಲ."

" ಬುದ್ಧಿಯಿಲ್ಲದೇ ಇರುವವರ ಮಾತು ಕೇಳಿ ಕೇಳಿ ನನ್ನ ಬುದ್ಧಿಯೂ ಕೆಟ್ಟುಹೋಗುತ್ತಿದೆ."

" ಈ ಸಲ ಹೊರಟುಹೋದ ಮೇಲೆ ಪುನಃ ನಾನು ಹಳ್ಳಿಕಡೆ ತಲೆ ಹಾಕುವುದಿಲ್ಲ."

" ಇಲ್ಲಿಗೆ ಬಾರದೆ ಎಲ್ಲಿಗೆ ಹೋಗ್ತೀಯ ?"

" ಎಲ್ಲಿಗೋ ಸಡುಗಾಡಿಗೆ."

ಶಾಮು ಹಾಸ್ಯವನ್ನು ನಿಲ್ಲಿಸಿ ಗಂಭೀರ ದನಿಯಿಂದ ಹೇಳಿದ.

" ನೀನು ಪರೀಕ್ಷೆ ಮುಗಿಸಿ ಇಲ್ಲಿಗೆ ಬರುವವರೆಗೆ ನನ್ನ ಮದುವೆಯ ಮಾತನ್ನೆತ್ತಬೇಡ. ಆಮೇಲೆ ಬೇಕಾದರೆ ಯೋಚನೆ ಮಾಡಿ ಹೇಳ್ತೀನಿ."

ಮೀರ ಆನಂದದಿಂದ ಕಣ್ಣರಳಿಸಿ " ನಿಜವಾಗಿ !" ಎಂದಳು.

" ಹೂ."

" ನೀವು ಬಹಳ ಒಳ್ಳೆಯವರು."

" ಈ ಬೆಣ್ಣೆ ಹಚ್ಚುವ ಮಾತುಗಳು ಸಾಕು" ಎಂದ ಶಾಮು.

* * * *

ಜೋಯಿಸರ ಮಗಳು ವೆಂಕುವಿನ ಮದುವೆ ನಿಶ್ಚಯವಾಯಿತು. ಹುಡುಗನಿಗೆ ಮಂಡ್ಯದ ಸಕ್ಕರೆ ಕಾರ್ಖಾನೆಯಲ್ಲಿ ನೂರಿಪ್ಪತ್ತು ರೂಪಾಯಿನ

ಕೆಲಸವಿತ್ತು. ಜೋಯಿಸರ ಮನೆಯ ಮದುವೆಯ ಅಣಿ ಮಾಡಲು ಹಳ್ಳಿಯ ಬ್ರಾಹ್ಮಣ ಹೆಂಗಸರೆಲ್ಲಾ ಜೋಯಿಸರ ಮನೆಯಲ್ಲಿ ಸೇರುತ್ತಿದ್ದರು. ಹಪ್ಪಳ, ಸಂಡಿಗೆ, ಚಕ್ಕುಲಿ ಹಿಟ್ಟು ಮೊದಲಾದುವುಗಳು ಭರದಿಂದ ಸಿದ್ಧವಾದುವು.

ಧಾರೆಯ ದಿನದ ಅಕ್ಕಿಯ ಖರ್ಚು, ತೆಂಗಿನಕಾಯಿಯ ಖರ್ಚನ್ನು ಶಾಮು ತಾನೇ ವಹಿಸಿಕೊಂಡಿದ್ದ. ವೆಂಕುವಿಗೆ ಮದುವೆ ಗೊತ್ತಾಗಿದ್ದುದು ಅವಳ ತಾಯಿಗಿಂತಲೂ ಶಾಮುವಿಗೇ ಹೆಚ್ಚು ಸಂತೋಷವಾಗಿತ್ತು. ಸಂತೋಷದೊಡನೆ ವೆಂಕು ದೂರ ಹೊರಟುಹೋಗುವಳಲ್ಲಾ ಎಂಬ ವ್ಯಥೆಯೂ ಇತ್ತು. ವೆಂಕುವಿಗೆ ಧಾರೆಯ ಸೀರೆಯನ್ನೂ ತನ್ನ ಲೆಕ್ಕದಲ್ಲೇ ತಂದು ಅವಳಿಗೆ ತೋರಿಸಿದ.

"ಈ ಸೀರೆ ನಿನ್ನ ಮನಸ್ಸಿಗೊಪ್ಪಿತೇ ವೆಂಕೂ?"

ಶಾಮು ತಂದಿದ್ದ ಭಾರಿ ಸೀರೆಯನ್ನು ನೋಡಿ ವೆಂಕುವಿಗೆ ಆನಂದ ವಾದರೂ "ನನ್ನ ಸೀರೆಗೋಸ್ಕರ ಇಷ್ಟೊಂದು ಯಾಕೆ ಖರ್ಚು ಮಾಡಿದೆ ಶಾಮಣ್ಣ?" ಎಂದಳು

"ನನಗೊಬ್ಬಳು ತಂಗಿ ಇದ್ದಿದ್ದರೆ ಅವಳಿಗೆ ಮಾಡುತ್ತಿದ್ದೆನೋ ಇಲ್ಲೋ?"

ಅವನ ಅಂತಃಕರಣ ಕಂಡು ವೆಂಕುವಿನ ಕಣ್ಣುಗಳಲ್ಲಿ ನೀರೂರಿತು. ಅವಳು ಶಾಮುವನ್ನು ತುಂಬಾ ಪ್ರೀತಿಸುತ್ತಿದ್ದಳು. ಪುಟ್ಟ ಹುಡುಗಿಯಾಗಿದ್ದಾಗಿನಿಂದಲೂ ಶಾಮಣ್ಣನೆಂದರೆ ಅವಳಿಗೆ ತುಂಬಾ ಸಲಿಗೆ, ವಿಶ್ವಾಸ. ವೆಂಕುವಿನ ಹಿಂದೆ ಬೇಗ ಬೇಗ ಮಕ್ಕಳಾಗುತ್ತಿದ್ದುದರಿಂದ ಅವಳಿಗೆ ಮನೆಯಲ್ಲಿ ಹಿರಿಯರ ಆದರ, ಪ್ರೀತಿ ಅಷ್ಟಾಗಿ ದೊರಕಿರಲಿಲ್ಲ. ಮನೆಯಲ್ಲಿ ಇತರ ಮಕ್ಕಳಿಗಿಂತ ದೊಡ್ಡವಳಾದ ಅವಳೇ ಕಿರಿಯರ ಪಾಲಿಗೆ ಒಮ್ಮೊಮ್ಮೆ ತಾಯಿಯಾಗುತ್ತಿದ್ದಳು. ವೆಂಕುವಿನ ತಾಯಿ ಅವಳಿಗೆ ಎಷ್ಟೋ ಬಾರಿ ಮನೆಯ ಜವಾಬ್ದಾರಿ, ಇತರ ಮಕ್ಕಳ ಲಾಲನೆ ಪಾಲನೆಯನ್ನೂ ವಹಿಸುತ್ತಿದ್ದರು. ತನ್ನ ಮನೆಯಲ್ಲಿ ವೆಂಕು ಮಗುವಿನಂತಾಡುವುದು ಸಾಧ್ಯವಿರಲಿಲ್ಲ.

ಆದರೆ ಶಾಮಣ್ಣನ ಮನೆಯಲ್ಲಿ ಅವಳೇ ಮಗುವಾಗುತ್ತಿದ್ದಳು. ಮಕ್ಕಳೆಂದರೆ ಶಾಮುವಿಗೆ ತುಂಬಾ ಪ್ರೀತಿಯಿತ್ತು. ಆದರೆ ವಂಶಕ್ಕೆಲ್ಲಾ ಒಬ್ಬನೇ ಮಗನಾಗಿ ಹುಟ್ಟಿದ ಶಾಮು ತಂಗಿ, ತಮ್ಮಂದಿರನ್ನು ಆಡಿಸುವ ಪುಣ್ಯವನ್ನು ಪಡೆದಿರಲಿಲ್ಲ. ಮದುವೆಯಾಗುವ ವಯಸ್ಸಾಗಿದ್ದರೂ ಮದುವೆಯಾಗದೇ ಉಳಿದಿದ್ದ ಶಾಮುವಿಗೆ ವೆಂಕುವಿನ ಮುಗ್ಧ ಮಾತುಗಳನ್ನು ಕೇಳುವುದರಲ್ಲಿ ಪರಮ ಆನಂದವಿತ್ತು. ಹೊಲ, ಗದ್ದೆಯಲ್ಲಿ ದುಡಿದು ಬಂದಾಗ ವೆಂಕುವಿನ

ಸರಳ ನಡೆ, ನುಡಿಗಳು ಅವನ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದವು. ವೆಂಕು ಒಂದು ದಿನ ತನ್ನ ಮನೆಗೆ ಬಾರದಿದ್ದರೆ ಆ ದಿನವೆಲ್ಲಾ ಬೇಸರವಾಗುತ್ತಿತ್ತು. ಅಂತಹ ದಿನಗಳಲ್ಲಿ ತಾನೇ ಜೋಯಿಸರ ಮನೆಗೆ ಹೋಗಿ ಗಂಟೆಗಟ್ಟಲೆ ಹರಟೆ ಹೊಡೆದು ಬರುತ್ತಿದ್ದ. ಮೀರಳೊಡನೆ ಮದುವೆಯಾದ ತರುಣದಲ್ಲಿ ವೆಂಕು ಶಾಮುವಿನ ಮನೆಗೆ ಮೊದಲಿನಂತೆ ಬರತ್ತಿರಲಿಲ್ಲ. ಮದುವೆಯಾಗಿ ಹೊಸ ಹೆಂಡತಿ ಬಂದಿರುವಾಗ, ನೂತನ ದಂಪತಿಗಳ ನಡುವೆ ತಾನು ಬೆರೆಯುವುದು ಸರಿಯಲ್ಲವೆಂದು ಅವಳಿಗೆ ತೋರುತ್ತಿರಲಿಲ್ಲ. ಆದರೆ ವೆಂಕುವಿನ ತಾಯಿ ಅವಳನ್ನು ತಡೆದು

"ಈಗ ಮೀರಾ ಬಂದಿದಾಳಮ್ಮ. ಹಾಗೆಲ್ಲಾ ಹೋಗಿ ಅಲ್ಲಿ ಕುಳಿತುಕೋಬಾರ್ದು" ಎನ್ನುತ್ತಿದ್ದರು.

ಮೀರಳಿಗೆ ಮಗುವಾಗಿ, ವೀಣಾ ಶಾಮುವಿನ ಮನೆಯನ್ನು ಬೆಳಗಲಾರಂಭಿಸಿದ ಮೇಲೆ, ಯಾರ ಮಾತಿಗೂ ಬಗ್ಗದೆ ವೆಂಕು ಯಾವಾಗಲೂ ಶಾಮಣ್ಣನ ಮನೆಯಲ್ಲಿ ವೀಣಳನ್ನು ಆಟವಾಡಿಸಿಕೊಂಡು ಇದ್ದು ಬಿಡುತ್ತಿದ್ದಳು. ಇದರಿಂದ ಮೀರಳಿಗೂ ಎಷ್ಟೋ ಪ್ರಯೋಜನವಿತ್ತು. ತುಂಟಯಾದ ಮಗಳನ್ನು ನೋಡಿಕೊಳ್ಳುವುದು ಅವಳಿಗೆ ಸ್ವಲ್ಪವಾದರೂ ತಪ್ಪುತ್ತಿತ್ತು.

ವೀಣಾ ಮಡಿದ ಮೇಲೆ, ವೆಂಕು ದೊಡ್ಡವಳಾಗುತ್ತಾ ಬಂದಂತೆ ಅವಳು ಕ್ರಮೇಣ ಶಾಮುವಿನ ಮನೆಯಿಂದ ದೂರವಾಗಿದ್ದಳು. ಆದರೆ ಶಾಮಣ್ಣನಲ್ಲಿದ್ದ ಪ್ರೀತಿ, ವಿಶ್ವಾಸ ಮಾತ್ರ ಸ್ವಲ್ಪವೂ ಕಡಿಮೆಯಾಗಿರಲಿಲ್ಲ.

ತನ್ನ ಮದುವೆಗಾಗಿ ಶಾಮು ಅಕ್ಕರೆಯಿಂದ ತಂದುಕೊಟ್ಟಿದ್ದ ಸೊಗಸಾದ ಹಸಿರು ಸೀರೆಯನ್ನು ಕೈಗೆ ತೆಗೆದುಕೊಂಡು ವೆಂಕು ಶಾಮುವಿನ ಮುಖ ನೋಡಿದಳು.

ಹಳ್ಳಿಯ ಮನೆಯಾದುದರಿಂದ ರೂಮಿನ ಛಾವಣಿ ತುಂಬಾ ಕೆಳಗಿತ್ತು. ನೆಲಕ್ಕೂ, ಛಾವಣಿಗೂ ಏಕವಾಗಿ ಶಾಮು ನಿಂತಿದ್ದ. ಅವನ ಎತ್ತರವಾದ ಭವ್ಯ ನಿಲುವು ವೆಂಕುವಿಗೆ ಅತ್ಯಂತ ಪ್ರಿಯವಾದ ದೃಶ್ಯವಾಗಿತ್ತು.

"ನಮ್ಮ ಶಾಮಣ್ಣನಷ್ಟು ಉದ್ದ ಈ ಹಳ್ಳೀಲೇ ಯಾರೂ ಇಲ್ಲ" ಎಂದವಳು ಜಂಭದಿಂದ ಹೇಳಿಕೊಳ್ಳುತ್ತಿದ್ದಳು.

ಆದರೆ ಶಾಮು ಈಗ ಮೊದಲಿನ ಶಾಮುವಾಗಿರಲಿಲ್ಲ. ಅವನ ಮೈ ಬಡಕಲಾಗಿತ್ತು. ಅವನ ಕೆಂಪು ಬಣ್ಣ ಮಾಸಲು ಬಣ್ಣಕ್ಕೆ ತಿರುಗಿತ್ತು. ಕಣ್ಣುಗಳು ಅಪಾರ ವೇದನೆಗೆ ಗುರಿಯಾಗಿ ಮಂಕಾಗಿ ಹೋಗಿದ್ದವು.

ವೆಂಕು ಗದ್ಗದ ಕಂಠದಿಂದ ನುಡಿದಳು.

"ನಿನ್ನ ತಂಗಿಯಾಗೋ ಪುಣ್ಯ ನನಗೆಲ್ಲಿದೆ ಶಾಮಣ್ಣ? ನಿನ್ನ ತಂಗಿಯಾಗಿದ್ದರೇ ಚೆನ್ನಾಗಿತ್ತು."

"ಆಗ ತಾನೇ ಏನು? ಹೀಗೆ ಒಬ್ಬನ್ನ ಕಟ್ಟಿಕೊಂಡು ಓಡಿಹೋಗ್ತಿದ್ದೆ. ಅಲ್ವೇ?"

"ಆದರೂ ಆಗ ನಿನ್ನ ದುಃಖಾನ ಸ್ವಲ್ಪವಾದರೂ ಕಡಿಮೆ ಮಾಡಬಹುದಿತ್ತು."

ವೆಂಕು ನಿಟ್ಟುಸಿರಿನೊಡನೆ ಹೇಳಿದಳು. ಅವಳ ಮಾತು ಕೇಳಿ ಶಾಮು ಚಕಿತನಾದ.

ಯಾರನ್ನು ತಾನು ಇನ್ನೂ ಮಗುವೆಂದು ಭಾವಿಸಿದ್ದನೋ ಅವಳು ಈಗ ಹಿರಿಯಳಂತೆ ಮಾನವನ ಸುಖ, ದುಃಖದ ಬಗ್ಗೆ ಮಾತನಾಡುತ್ತಿದ್ದಾಳೆ!

"ದುಃಖ! ನನಗೆಂತಹ ದುಃಖ?"

"ನನಗೆಲ್ಲಾ ಗೊತ್ತು ಶಾಮಣ್ಣ. ನಾನೇನೂ ನೀನು ತಿಳಿದುಕೊಂಡಿರುವಂತೆ ಇನ್ನೂ ಮಗುವಲ್ಲ. ಜಾನಿ ಹೋದಾಗಿನಿಂದ ನೀನಾಗಲಿ, ವೀರಳಾಗಲಿ ಒಂದು ಗಳಿಗೆ ಸುಖವಾಗಿಲ್ಲ. ಇದು ನನಗೆ ಗೊತ್ತು."

"ಬೊಂಬೆ ಜೊತೆ ಆಟ ಆಡೋದು ಬಿಟ್ಟು ನಿನಗಿನ್ನೇನು ಗೊತ್ತಿದೆ?" ಶಾಮು ಹಾಸ್ಯದಲ್ಲಿ ಅವಳ ಮಾತನ್ನು ಹಾರಿಸಲೆತ್ನಿಸಿದ.

"ನೀನು ತಪ್ಪು ತಿಳಿದುಕೊಂಡಿದೀಯ. ನನಗೆಲ್ಲಾ ಗೊತ್ತಾಗತ್ತೆ. ನಮ್ಮ ಮನೆಗಿಂತಲೂ ನಾನು ನಿಮ್ಮ ಮನೆಯಲ್ಲಿ ಹೆಚ್ಚು ಕಾಲ ಕಳೆದಿದ್ದೇನೆ. ನಾನು ನಿನ್ನ ತಂಗಿಯಾಗಿದ್ದಿದ್ದರೆ ಅವರಿಗೆ 'ನಮ್ಮ ಅಣ್ಣನ್ನ ನೋಡಿಕೊಂಡು ಬರ್ತೀನೆ' ಎಂದು ಹೇಳಿ ಎರಡೆರಡು ದಿನಕ್ಕೆ ಇಲ್ಲಿಗೆ ಬರಬಹುದಾಗಿತ್ತು. ಈಗ ಹಾಗೆ ಹೇಳಿ ಬರೋಕ್ಕಾಗುತ್ತದೆಯೆ?"

ಈ ಪುಟ್ಟ ಹುಡುಗಿಗೆ ಎಷ್ಟೊಂದು ವಿಷಯ ಗೊತ್ತಿದೆ!

ವೆಂಕುವಿನ ಎದುರಿನಲ್ಲಿ ಈಗ ಶಾಮು ಮಗುವಿನಂತಾದ. ಅವನಿಗೆ ಏನು ಹೇಳಬೇಕೋ ತೋರದಾಯಿತು. ಅವನು ಮಾತು ಬದಲಾಯಿಸಲೆಂದು

"ವೆಂಕು, ನಿನ್ನ ಗಂಡನ ಹೆಸರು ಹೇಳು" ಎಂದ.

ವೆಂಕು ಅವನ ಮಾತು ಕೇಳಿಸದವಳಂತೆ "ಎಲ್ಲಿ ಶಾಮಣ್ಣ ನಿನಗೆ ನಮಸ್ಕಾರ ಮಾಡುತ್ತೇನೆ" ಎಂದು ಹೇಳಿ ಶಾಮುವಿಗೆ ನಮಸ್ಕಾರ ಮಾಡಿ ಒಳಗೆ ಹೊರಟುಹೋದಳು.

ಹುಡುಗಿಯರ ಬುದ್ಧಿ ಹೀಗೇಂತ ಹೇಳೋಕ್ಕಾಗುವುದಿಲ್ಲ ಎಂದು ಕೊಂಡ ಶಾಮು.

ವೆಂಕುವಿನ ಮದುವೆ ಜೋಯಿಸರ ಅಂತಸ್ತಿಗೆ ತಕ್ಕಂತೆ ನಡೆಯಿತು. ಹುಡುಗ ವೆಂಕುವಿಗೆ ಅನುರೂಪನಾದ ವರನಾಗಿದ್ದ. ಅವನಿಗೂ ಸುಮಾರು ಇಪ್ಪತ್ತೆರಡು ವರ್ಷಗಳಾಗಿದ್ದವು. ಹಸೆಯ ಮೇಲೆ ಕುಳಿತಿದ್ದ ಜೋಡಿ ಯನ್ನು ಶಾಮು ಕಣ್ಣು ತುಂಬಾ ನೋಡಿದ. ವೆಂಕುವಿಗೆ ಸೋದರಮಾವನಿರ ಲಿಲ್ಲ. ಆದರೆ ಜೋಯಿಸರು ಏನೇನೋ ಇಲ್ಲದ ಸೋದರಿಕೆ ಕಲ್ಪಿಸಿ ಶಾಮುವನ್ನು ಅವಳ ಸೋದರಮಾವನನ್ನಾಗಿ ಮಾಡಿದ್ದರು. ಶಾಮುವೇ ಸರ್ವಾಲಂಕಾರಭರಿತಳಾದ ವಧುವನ್ನು ಧಾರೆಗೆ ಕರೆದುಕೊಂಡು ಬಂದಿದ್ದ.

ವೆಂಕು ಬಹಳ ಗಂಭೀರಳಾಗಿ ಕುಳಿತಿದ್ದಳು. ಅವಳ ಪುಟ್ಟ ಹೃದಯ ದಲ್ಲಿ ಇಷ್ಟೊಂದು ಒಲವು, ಅಂತಃಕರಣ, ಮಮತೆ ಎಲ್ಲಿಂದ ಬಂದವೋ ?

ಶಾಮು ಹಸೆಯ ಮಣೆಯ ಬಳಿಯೇ ಕುಳಿತು, ವೆಂಕುವಿನ ಗಂಡ ನೊಡನೆ ಮಾತನಾಡುತ್ತಾ ಯಾವುದೋ ಮಾತಿಗೆ " ನೀವು ಭಾಗ್ಯಶಾಲಿ ಗಳು " ಎಂದ.

ವೆಂಕು ತಲೆ ಎತ್ತಿ ಶಾಮುವಿನ ಮುಖ ನೋಡಿದಳು. ಅವಳ ಕಣ್ಣು ಗಳಲ್ಲಿ ನೀರು ತುಂಬಿಕೊಂಡಿದ್ದಂತೆ ಶಾಮುವಿಗೆ ಭಾಸವಾಯಿತು.

ವೆಂಕುವಿನ ಮದುವೆ ಮೂರುದಿನ ನಡೆಯಿತು. ಶಾಮು, ಮೀರ ಮದುವೆ ಮನೆಯಲ್ಲಿ ಸಂಭ್ರಮದಿಂದ ಓಡಾಡಿದರು.

ಹುಡುಗನಿಗೆ ಕೆಲಸವಿದ್ದುದರಿಂದ ಮದುವೆ ಮುಗಿಸಿಕೊಂಡು ಊರಿಗೆ ಹೊರಟಾಗಲೇ ಹೆಂಡತಿಯನ್ನೂ ಜೊತೆಯಲ್ಲಿ ಕರೆದುಕೊಂಡು ಹೊರಟ. ಬೀಗರು ಊರಿಗೆ ಹೊರಡುವ ದಿನ ಶಾಮುವಿನ ಮನೆಯಲ್ಲಿ ಎಲ್ಲರಿಗೂ ಭಾರಿ ಔತಣವಾಯಿತು. ವೆಂಕು ಶಾಮುವಿನ ಕಾಲಿಗೆ ನಮಸ್ಕಾರ ಮಾಡಿ

" ಹೋಗಿ ಬರುತ್ತೇನೆ ಶಾಮಣ್ಣ. ನಿನ್ನ ಆರೋಗ್ಯ ನೋಡಿಕೋ " ಎಂದಳು. ಮೀರ ವೆಂಕುವನ್ನು ದೇವರ ಮನೆಗೆ ಕರೆದೊಯ್ದು ಮಡಿಲು ತುಂಬಿದಳು. ಎಲೆ, ಅಡಿಕೆಯೊಡನೆ ರವಿಕೆಯ ಕಣವನ್ನು ನೋಡಿ ವೆಂಕು

" ಶಾಮಣ್ಣ ನನ್ನ ಮದುವೆಯ ಅರ್ಧ ಖರ್ಚನ್ನು ವಹಿಸಿಕೊಂಡಿದ್ದು ಸಾಲದೆ ? ಈಗ ಕಣವೇಕೆ ?" ಎಂದಳು.

" ಸಾಕು ಜಂಭ. ತಗೋ " ಎಂದಳು ಮೀರ.

ವೆಂಕು ಹಿಂದೆ ಮುಂದೆ ನೋಡಿ ತಗ್ಗಿದ ದನಿಯಲ್ಲಿ ನುಡಿದಳು.

" ಮೀರಕ್ಕ, ನಾನು ಒಂದು ಮಾತು ಹೇಳ್ತೀನಿ. ಕೋಪಸಿಕೊಳ

ಬೇಡಿ. ವಯಸ್ಸಿನಲ್ಲಿ ನಾನು ನಿಮಗಿಂತಲೂ ಚಿಕ್ಕವಳು. ಆದರೂ...."

"ಏನು ?"

"ಶಾಮಣ್ಣ ನಿಮ್ಮನ್ನ ತುಂಬಾ ಪ್ರೀತಿಸುತ್ತಾನೆ. ನಿಮಗದು ಗೊತ್ತೇ?"

"..............."

"ಶಾಮಣ್ಣ ನಿಮ್ಮನ್ನ ಎಷ್ಟು ಪ್ರೀತಿಸುತ್ತಾನೆಂಬುದು ನಿಮಗೆ ಗೊತ್ತಿಲ್ಲ. ಆದರೆ ನನಗೆ ಗೊತ್ತು. ಅವನ ಪ್ರೀತಿಯ ಆಳ ನನಗೆ ಗೊತ್ತು. ನೀವೂ ಅವನನ್ನು ಪ್ರೀತಿಸಿ. ಶಾಮು ಹೇಗಿದಾನೆ ಒಂದು ಸಾರಿ ಕಣ್ಣೆತ್ತಿ ನೋಡಿ. ನಿಮಗೋಸ್ಕರವಾಗಲ್ಲದಿದ್ದರೂ ಶಾಮುವಿಗೋಸ್ಕರ ಅವನನ್ನು ಪ್ರೀತಿಸಿ."

''ನಾನೇನೂ ಅವರನ್ನು ದ್ವೇಶಿಸುವುದಿಲ್ಲ.''

"ನೀವು ದ್ವೇಶಿಸುವುದಿಲ್ಲವೆಂದು ನನಗೆ ಗೊತ್ತು. ನೀವು ಶಾಮಣ್ಣ ನನ್ನು ಬಿಟ್ಟಾದರೂ ವಿದ್ಯೆಯನ್ನು ಮುಂದುವರಿಸಬೇಕೆ ? ನೀವು ಎಂತಹ ನಿಧಿಯ ಕೈಹಿಡಿದಿರುವಿರಿ ಎಂಬದು ನಿಮಗೇ ಗೊತ್ತಿಲ್ಲ. ವಜ್ರವನ್ನು ಕೈಲಿಟ್ಟುಕೊಂಡು ಗಾಜಿನ ಚೂರಿಗಾಗಿ ಹಂಬಲಿಸುತ್ತಿರುವಿರಿ...."

"ವೆಂಕೂ !"

"ನಾನು ಹೇಗಿದ್ದರೂ ಈ ದಿನ ಹೊರಟುಹೋಗುತ್ತೇನೆ. ನನ್ನ ಮನ ಸ್ಸಿನಲ್ಲಿರುವುದನ್ನೆಲ್ಲಾ ನಿಮಗೆ ಹೇಳಿ ಹೊರಟು ಹೋಗುತ್ತೇನೆ. ಏಳೇಳು ಜನ್ಮದ ಪುಣ್ಯ ಮಾಡಿದೀರಿ ನೀವು ಶಾಮಣ್ಣನ ಕೈ ಹಿಡಿಯೋಕೆ. ಅವನಿ ಗಿಂತಲೂ ನಿಮಗೆ ಓದು ಹೆಚ್ಚೆ ? ನಿಮಗೋಸ್ಕರ ಇವನು ಪ್ರಾಣ ಬೇಕಾ ದರೂ ಕೊಡ್ತಾನೆ. ನೀವು ಅವನಿಗೋಸ್ಕರ ಓದು ನಿಲ್ಲಿಸಲಾರಿರಾ ? ಅವನನ್ನು ಬಿಟ್ಟಿರಲು ನಿಮಗೆ ಹೇಗೆ ಮನಸ್ಸು....?"

ಎದುರಿಗೆ ನಿಂತಿದ್ದ ವೆಂಕುವಿನ ಕೆನ್ನೆಗೆ ಹೊಡೆಯಬೇಕೆನಿಸಿತು ಮೀರ ಳಿಗೆ. ಅವಳು ಬಹಳ ಸಂಯಮದಿಂದ ತನ್ನ ಕೋಪವನ್ನು ತಡೆದಳು.

"ನಿಮಗೆ ಶಾಮಣ್ಣನನ್ನು ಪ್ರೀತಿಸುವುದು ಸಾಧ್ಯವಾಗದಿದ್ದರೆ ದಯೆ ಯಿಂದ ನೋಡಬಹುದಲ್ಲವೇ ? ನೀವು ಅವನನ್ನು ಅರಿತುಕೊಂಡರೆ ಶಾಮು ನಿಜವಾಗಿಯೂ ಸುಖಿಯಾಗುತ್ತಾನೆ. ನಾನಿನ್ನು ಬರ್‍ತೀನಿ". ಎನ್ನುತ್ತಾ ವೆಂಕು ದೇವರ ಮನೆಯಿಂದ ಹೊರಗೆ ಬಂದಳು.

ವೆಂಕು ಹೊರಟು ಹೋದ ಎಷ್ಟೋ ಹೊತ್ತಿನವರೆವಿಗೆ ಮೀರ ಕಲ್ಲು ಕಂಬದಂತೆ ದೇವರ ಮನೆಯಲ್ಲಿಯೇ ನಿಂತಿದ್ದಳು.

ತಾನು ಶಾಮುವನ್ನು ಮದುವೆಯಾಗಿ ಹಳ್ಳಿಗೆ ಬಂದಾಗ ವೆಂಕುವಿಗೆ ಸುಮಾರು ಒಂಭತ್ತು ವರ್ಷಗಳಿದ್ದಿರಬಹುದು. ತನ್ನ ಕಣ್ಣೆದುರಿಗೇ ಬೆಳೆದು

ದೊಡ್ಡವಳಾದ ಹುಡುಗಿ ಈಗ ತನಗೇ ಬುದ್ಧಿವಾದ ಹೇಳುತ್ತಿದ್ದಾಳೆ! ವೆಂಕುವಿನ ಬಾಯಿಂದ ಈ ಬಗೆಯ ಮಾತುಗಳು ಬರಬಹುದು ಎಂದು ಮೀರ ಕನಸಿನಲ್ಲಿಯೂ ಎಣಿಸಿರಲಿಲ್ಲ. ವೆಂಕುವಿನ ಗಂಡ ನಿಜವಾಗಿಯೂ ಭಾಗ್ಯಶಾಲಿ. ತನ್ನ ಮಾತನ್ನು ಶಾಮು ಗೌರವಿಸಿದ್ದರೆ ಅವನೇ ಆ ಭಾಗ್ಯಶಾಲಿಯಾಗಬಹುದ್ದಿತ್ತು.

ಎಲ್ಲರ ಕರುಣೆ, ಸಹಾನುಭೂತಿ ಶಾಮುವಿನ ಕಡೆಯಿತ್ತೇ ಹೊರತು ಮೀರಳಿಗಾಗಿ ಯಾರೂ 'ಅಯ್ಯೋ' ಎನ್ನುತ್ತಿರಲಿಲ್ಲ. ಎಲ್ಲರೂ ಶಾಮುವಿಗಾಗಿ ಮರುಗುತ್ತಿದ್ದರು. ಆದರೆ ತನಗೋ? ಯಾರಿಗೂ ತನ್ನಲ್ಲಿ ಸಹಾನುಭೂತಿಯಿಲ್ಲ. ಎಲ್ಲರೂ ತನ್ನನ್ನು ಟೀಕಿಸುವವರೇ. ತಾನು ಮಾಡಿದ ತಪ್ಪಾದರೂ ಏನು?

ಮೀರಳ ಹೃದಯ ಛಲದಿಂದ ಮತ್ತೆ ಬಿರುಸಾಯಿತು.

—ಪ್ರಪಂಚವೇ ನನಗಿದಿರಾಗಿ ಬಂದರೂ ನಾನು ಇಟ್ಟ ಹೆಜ್ಜೆಯನ್ನು ಹಿಂದೆ ತೆಗೆಯುವುದಿಲ್ಲ ನಾನು ಓದಿಯೇ ಓದುತ್ತೇನೆ. ವೈದ್ಯಳಾಗುತ್ತೇನೆ. ನನ್ನ ಗಂಡನೇ ನನಗೆ ಬೆಂಬಲ ಕೊಡುತ್ತಿರುವಾಗ ಉಳಿದವರು ಏನು ಭಾವಿಸಿದರೇನು? ನನ್ನ ಗುರಿ ಸಾಧಿಸಲು ಕೊನೆಯವರೆವಿಗೂ ಹೋರಾಡಲೇಬೇಕು.

ಜೋಯಿಸರ ಮನೆಯ ಬೀಗರನ್ನು ಕಳುಹಿಸಿ ಶಾಮು ಒಳಗೆ ಬಂದಾಗ ಮೀರ ಬೆಪ್ಪಾಗಿ ಒಂದು ಕಡೆ ಕುಳಿತಿದ್ದಳು.

"ಅಮ್ಮಾವರಿಗೆ ಓಡಾಡಿ ಆಯಾಸವಾಯಿತೇನೋ?"

ಮೀರ ಶಾಮುವಿನ ಕಡೆ ತಿರುಗಿ ಅವನನ್ನು ಪರೀಕ್ಷಿಸುವಂತೆ ನೋಡಿದಳು.

ವೆಂಕುವಿನ ಮಾತು ನಿಜ. ಜಟ್ಟಿಯಂತಿದ್ದ ಶಾಮು ಬಡಕಲಾಗಿದ್ದ. ಕೆನ್ನೆ, ಎದೆಯ ಮೂಳೆ ಹಾಯ್ದುಕೊಂಡಿತ್ತು.

"ನನ್ನ ಹತ್ತಿರ ಬನ್ನಿ."

"ಬಂದ್ರೆ ಏನು ಕೊಡುತ್ತೀಯ?"

"ಡಾಕ್ಟರ ಹತ್ತಿರ ಬಂದರೆ ರೋಗಿಗಳಿಗೆ ಸಿಕ್ಕುವುದೇನು? ಔಷಧಿ."

"ನೀನು ಇನ್ನೂ ಡಾಕ್ಟರಾಗಿಲ್ಲ. ನಾನು ರೋಗಿಯೂ ಅಲ್ಲ."

"ಕೆಲವು ರೋಗಿಗಳಿಗೆ ತಮಗಿರುವ ಖಾಯಿಲೆ ಏನೂನ್ನೋದೇ ತಿಳಿಯೋಲ್ಲ. ಇಲ್ಲಿ ಹತ್ತಿರ ಬನ್ನಿ"

ಶಾಮು ಮರುಮಾತನಾಡದೆ ಮೀರಳ ಹತ್ತಿರ ನಿಂತ. ಮೀರ ಅವನ ಕೆನ್ನೆಯ ಮೇಲೆ ಕೈಯಾಡಿಸಿದಳು.

"ನಾಳೆ ಮೈಸೂರಿಗೆ ಹೋಗೋಣ. ನಡೆಯಿರಿ."

"ಯಾಕೆ?"

"ಅಲ್ಲಿ ನಿಮ್ಮನ್ನು ಸರಿಯಾದ ವೈದ್ಯರಿಗೆ ತೋರಿಸಿ ಔಷಧಿ ಕೊಡಿಸುತ್ತೇನೆ."

"ನಿನ್ನ ವೈದ್ಯರು 'ಶಾಂತಿ' ಎನ್ನುವ ಟಾನಿಕ್ಕನ್ನೂ ಕೊಡುತ್ತಾರೇನು?"

"ನಿಮಗೀಗ ಬಂದಿರುವ ಕಷ್ಟವಾದರೂ ಏನು?"

ಅದನ್ನು ನಾನು ಹೇಗೆ ಹೇಳಲಿ ಎನ್ನುವಂತೆ ಶಾಮು ನಕ್ಕ.

ಮೀರಳ ಹಠಕ್ಕೆ ಅವನು ಮೈಸೂರಿನ ಯಾತ್ರೆ ಮಾಡಲೇ ಬೇಕಾಯಿತು. ವೈದ್ಯರು ಶಾಮುವನ್ನು ಪರೀಕ್ಷೆ ಮಾಡಿ "ಇವರು ತಮ್ಮ ದುಡಿಮೆಗೆ ತಕ್ಕಂತೆ ಆಹಾರ ತೆಗೆದುಕೊಳ್ಳುವುದಿಲ್ಲ. ಆದುದರಿಂದ ಹೀಗಾಗಿದಾರೆ" ಎಂದು ಹೇಳಿ ಟಾನಿಕೊಂದರ ಹೆಸರನ್ನು ಬರೆದುಕೊಟ್ಟು ಹಣ್ಣು, ಹಾಲನ್ನು ಹೆಚ್ಚಾಗಿ ತೆಗೆದುಕೊಳ್ಳುವಂತೆ ಸೂಚಿಸಿದರು.

ಹಳ್ಳಿಯಲ್ಲಿರುವವರೆವಿಗೂ ಶಾಮುವಿನ ಆರೈಕೆಯನ್ನು ಮೀರ ತಾನೇ ನೋಡಿಕೊಂಡಳು. ಅವಳ ಆರೈಕೆಯ ಫಲವಾಗಿ ಶಾಮು ಮೊದಲಿನಂತೆ ಮೈಕೈ ತುಂಬಿಕೊಂಡ. ಬಿಳಚಿಕೊಂಡಿದ್ದ ಅವನ ಮುಖ ಮತ್ತೆ ಕೆಂಪಾಯಿತು.

ರಜ ಮುಗಿದು ಮೀರ ಮತ್ತೆ ಮೈಸೂರಿಗೆ ಹೊರಟಾಗ ಶಾಮು ಕೇಳಿದ

"ಸೌಭಾಗ್ಯವತಿಯವರ ದರ್ಶನ ಮತ್ತೆಂದು?"

"ಮುಂದಿನ ರಜದಲ್ಲಿ ನಾನು ಇಲ್ಲಿಗೆ ಬರುವುದಿಲ್ಲ. ವಿಜಯಳೊಡನೆ ಪೂನಾ, ಬೊಂಬಾಯಿಗೆ ಹೋಗಿಬರುತ್ತೇನೆ. ಮುಂದಿನದನ್ನು ಈಗಲೇ ಹೇಗೆ ಹೇಳಲಿ?"

ಅವಳಾಡಿದ ಮಾತು ಕೇಳಿ ಶಾಮುವಿನ ಮುಖ ಪೆಚ್ಚಾಯಿತು. ಮೀರ ತುಂಟ ನಗೆ ಬೀರಿ

"ಪುಣೆಯಿಂದ ಬರುವಾಗ ನಿಮಗೇನು ತರಲಿ?" ಎಂದು ಕೇಳಿದಳು.

"ನನಗೇನೂ ಬೇಡ."

"ನಿಮಗೇನಾದರೂ ತರುತ್ತೇನೆ ಹೇಳಿ."

"ಪೂನಾ ಯಾವುದಕ್ಕೆ ಪ್ರಸಿದ್ಧಿಯಾಗಿದೆ?"

"ಪೂನಾ ಪ್ರಸಿದ್ಧವಾಗಿರುವ ವಸ್ತುವನ್ನೇ ನಿಮಗೆ ತಂದುಕೊಡಲೇನು?"

"ಹೂಂ."

" ಪೂನಾ ಸುಂದರವಾದ ಹುಡುಗಿಯರ ತವರೂರು. ಅಲ್ಲಿಂದ ಹುಡುಗಿಯೊಬ್ಬಳನ್ನು ನಿಮಗಾಗಿ ತರುತ್ತೇನೆ."

" ಕರ್ಕೊಂಡು ಬಾ. ಅವಳು ಮರಾಟಿ ಆಡಲಿ. ನಾನು ಕನ್ನಡ ಆಡುತ್ತೇನೆ. ನೀನು ಅದನ್ನು ನೋಡಿ ಸಂತೋಷಪಡು."

" ಪ್ರೇಮಕ್ಕೆ ಯಾವ ಭಾಷೆಯೂ ಬೇಕಾಗಿಲ್ಲ."

" ನಾನು ನಿನ್ನ ಪ್ರೀತಿಸುತ್ತೇನೇಂತ ಹೇಳಬೇಕಾದ್ರೂ ಭಾಷೆ ಬೇಕಲ್ಲ."

" ಅದಕ್ಕೂ ಬೇಕಿಲ್ಲ. ಮೌನವೇ ಪ್ರೇಮದ ಭಾಷೆ. ಕಣ್ಣು ಭಾಷೆಯನ್ನಾಡುವ ನಾಲಿಗೆ."

" ಈಗ ನಾನು ನಿನ್ನ ಪ್ರೀತಿಸುತ್ತೇನೋ ಇಲ್ಲವೊ ನನ್ನ ಕಣ್ಣು ನೋಡಿ ಹೇಳು."

ಮೀರ ಬಹಳ ಬಲ್ಲವಳಂತೆ ಶಾಮುವಿನ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡಿದಳು. ಅವನ ಕಣ್ಣುಗಳಲ್ಲಿ ಅವಳನ್ನು ಅಲ್ಲಿಯೇ ಉಳಿಸಿಕೊಳ್ಳುವ ತೀವ್ರ ಆಸೆಯಿತ್ತು. ಕಣ್ಣುಗಳಿಗೆ ಸೆರೆ ಹಿಡಿಯುವ ಶಕ್ತಿಯಿದ್ದಿದ್ದರೆ ಮೀರ ಆಜನ್ಮ ಬಂದಿಯಾಗಿರುತ್ತಿದ್ದಳು. ಮೀರ ಒಂದು ಕ್ಷಣ ತಲೆ ಅಲುಗಿಸಿ

" ನಿಮಗೆ ನನ್ನಲ್ಲಿ ಪ್ರೀತಿಯಿಲ್ಲ" ಎಂದಳು.

"ಹೇಗೆ ಹೇಳ್ತೀಯ ?"

" ನನ್ನಲ್ಲಿ ಪ್ರೀತಿ ಇದ್ದಿದ್ದರೆ ನೀವು ನಾನು ಹೇಳಿದ ಹಾಗೆ ಕೇಳುತ್ತಿದ್ದಿರಿ."

" ನಿನ್ನ ಮಾತು ನಾನು ಯಾವಾಗ ಮೀರಿದ್ದೇನೆ ?"

" ನೀವು ಎರಡನೆ ಮದುವೆ ಮಾಡಿಕೊಳ್ಳಿ ಎಂದಾಗ..."

ಶಾಮು ನಗುತ್ತಿದ್ದವನು ತಟಕ್ಕನೆ ಸಿಟ್ಟುಗೊಂಡು

" ನಿನಗೆ ಯಾವಾಗಲೂ ಅದೇ ಧ್ಯಾನವಾಯಿತು" ಎಂದ.

" ನನ್ನ ಆದೊಂದು ಮಾತು ನಡೆಸಿಕೊಟ್ಟರೆ ನಾನು ಯಾವಾಗಲೂ ನಿಮ್ಮ ಬಳಿಯೇ ಇರುತ್ತೇನೆ."

" ಹೋಗು ಹೋಗು. ನೀನು ಎಲ್ಲಿಗಾದರೂ ಹೊರಟುಹೋಗು" ಎನ್ನುತ್ತಾ ಶಾಮು ಅವಳನ್ನು ತಳ್ಳಿದ.

ಮಂಚದ ತುದಿಯಲ್ಲಿ ಹಗುರವಾಗಿ ಕುಳಿತಿದ್ದ ಮೀರ ನೆಲದ ಮೇಲೆ ಬಿದ್ದಳು. ಅವಳ ಗಾಜಿನ ಬಳೆಗಳು ಒಡೆದು ಪುಡಿಪುಡಿಯಾದವು.

ಮಂಚದ ಮೇಲೆ ಮಲಗಿದ್ದ ಶಾಮು ಎದ್ದು, ಮೀರಳ ಕೈ ಹಿಡಿದು ಮೇಲೆಬ್ಬಿಸಿ "ಅಲ್ಲವೇ ಹುಡುಗಿ, ಮುಟ್ಟಿದ ಮಾತ್ರಕ್ಕೆ ಬಿದ್ದು ಹೋಗಬೇಕೆ ?" ಎಂದ.

"ಅಷ್ಟೊಂದು ಜೋರಾಗಿ ತಳ್ಳಿದರೆ ಬೀಳದೇ ?"

"ತಪ್ಪಾಯಿತು. ನೀನು ಬೀಳಬಹುದೂಂತ ನಾನು ತಿಳಿದುಕೊಂಡಿರಲಿಲ್ಲ."

"ನಾನು ಹೇಳಿದ ಹಾಗೆ ಕೇಳಿದರೆ ನಿಮ್ಮ ಈ ತಪ್ಪು ಕ್ಷಮಿಸುತ್ತೇನೆ."

"ಎರಡನೆಯ ಮದುವೆ ಮಾಡಿಕೊಳ್ಳುವ ಒಂದು ವಿಷಯ ಬಿಟ್ಟು ಬೇರೆ ಏನಾದರೂ ಹೇಳು ನಾನು ಕೇಳುತ್ತೇನೆ."

ಮೀರ ರೇಗಿಕೊಂಡು ರೂಮಿನಿಂದ ಆಚೆಗೆ ಹೊರಟುಹೋದಳು. ಶಾಮು 'ಮೀರಾ' ಎಂದು ಕೂಗುತ್ತಿದ್ದುದೂ ಅವಳ ಕಿವಿಗೆ ಬೀಳಲಿಲ್ಲ.

ತಾನು ಹೇಳಿದ ಮಾತನ್ನು ಶಾಮು ಪುರಸ್ಕರಿಸಲಿಲ್ಲವೆಂದು ಮೀರಳಿಗೆ ಗಂಡನ ಮೇಲೆ ಬಹಳ ಕೋಪ ಬಂತು. ಆ ಕೋಪ ಅಸಮಾಧಾನದಲ್ಲಿಯೇ ಮೀರ ಹಳ್ಳಿಯನ್ನು ಬಿಟ್ಟು ಕಾಲೇಜಿಗೆ ಬಂದಳು.

ಹಾಸ್ಟೆಲಿಗೆ ಬಂದ ದಿನವೂ ಮೀರಳ ಮನಸ್ಸಿಗೆ ಸಮಾಧಾನವಿರಲಿಲ್ಲ. ಶಾಮುವಿನ ಚಿಂತೆಯಿಂದ ಅವಳ ಮನಸ್ಸು ವ್ಯಗ್ರವಾಗಿತ್ತು. ಆದರೆ ಕಾಲೇಜಿನ ಬಾಗಿಲು ತೆಗೆದು ಪಾಠಗಳು ಪ್ರಾರಂಭವಾದೊಡನೆ, ಮೀರ ತನ್ನ ಸಂಸಾರದ ವಿಷಯಗಳನ್ನೆಲ್ಲಾ ಮರೆತು ಪಾಠಪ್ರವಚನಗಳಲ್ಲಿ ಮಗ್ನಳಾದಳು.

ಪೋಸ್ಟ್‌ಮಾರ್ಟಂಗೆ ಚಿಕ್ಕ ಬಾಲಕನೊಬ್ಬನ ಶವ ಬಂದ ದಿನ ಕಾಲೇಜಿನಲ್ಲೆಲ್ಲಾ ಹುಡುಗರು ಕೂಗಾಡಿದರು.

"ಹೆಣ ಬಂದಿದೆಯಂತೆ. ಕೊಲೆ ಮಾಡಿದ್ದಾರಂತೆ...."

ವಿಜಯ ಕಣ್ಣರಳಿಸಿ ಕೇಳಿದಳು "ಆರುವರ್ಷದ ಹುಡುಗನ್ನ ಕೊಲೆ ಮಾಡೋದಕ್ಕೆ ಕಾರಣ ? ಹಸುಳೆಯ ಮೇಲೆ ಈ ದ್ವೇಷ !"

ಮೂರನೆಯ ವರ್ಷದಲ್ಲಿದ್ದ ಗೋಪಿನಾಥ ಹೇಳಿದ.

"ಈ ಹುಡುಗನ ಮೇಲೆ ಯಾರಿಗೂ ಕೋಪವಿರಲಿಲ್ಲ. ಈ ಹುಡುಗನ ತಂದೆ ಹಳ್ಳಿಯಲ್ಲಿ ಒಬ್ಬ ರೈತ. ಒಂದು ಹುಣಿಸೆ ಮರಕ್ಕಾಗಿ ಈ ರೈತನಿಗೂ, ಮತ್ತೊಬ್ಬ ರೈತನಿಗೂ ಬಹಳ ಜಗಳವಾಯಿತಂತೆ. ಜಗಳದಲ್ಲಿ ಮತ್ತೊಬ್ಬ ರೈತನಿಗೆ ಸ್ವಲ್ಪ ಹೆಚ್ಚಾಗಿ ಏಟೇ ಬಿಟ್ಟು. ಅವನು ಅದನ್ನೇ ಮನಸ್ಸಿನಲ್ಲಿಟ್ಟುಕೊಂಡಿದ್ದ. ಒಂದು ದಿನ ಈ ಹುಡುಗ ತನ್ನ ತಂದೆಯ ಆಡುಗಳು, ಹಸುವನ್ನು ಮೇಯಿಸಿಕೊಂಡು ಬರಲು ಹೋಗಿದ್ದ. ಹಳ್ಳಿಯಿಂದ ದೂರ ಒಂಟಿಯಾಗಿ ಸಿಕ್ಕಿದ ಈ ಮಗುವಿನ ಮೇಲೆ ಆ ರೈತ ತನ್ನ ಸೇಡು ತೀರಿಸಿಕೊಂಡ. ಈಗ ಹುಡುಗ ಎಷ್ಟು ಹೊತ್ತಾದರೂ ಹಳ್ಳಿಗೆ ಬಾರದಿರುವುದನ್ನು ನೋಡಿ ತಂದೆ ಮಗನನ್ನು ಹುಡುಕಿಕೊಂಡು ಹೊರಟ. ರಕ್ತದ ಮಡುವಿ

ನಲ್ಲಿ ಮಲಗಿದ್ದ ದೇಹವನ್ನು ನೋಡಿದ. ಮುಂದೆ ಪೋಲೀಸಿನವರು ಬಂದರು. ಇಲ್ಲಿಗೆ ಪೋಸ್ಟ್‌ಮಾರ್ಟಂಗೆ ಹೆಣ ಕಳಿಸಿದ್ದಾರೆ."

ಎಲ್ಲರೂ ಡಿಸೆಕ್ಷನ್ ಥಿಯೇಟರಿನ ಬಳಿಗೆ ಧಾವಿಸಿದರು. ಹೆಣ ಕುಯ್ದು ಮನಸ್ಸು ಕಲ್ಲಾಗಿದ್ದ ಮೆಡಿಕಲ್ ವಿದ್ಯಾರ್ಥಿಗಳು ಹೆಣವನ್ನು ನೋಡಿದಾಗ ಅವರಿಗೆ ಭೀತಿಯಾಗಲೀ ಅಸಹ್ಯವಾಗಲಿ ಆಗುತ್ತಿರಲಿಲ್ಲ. ಮರದತುಂಡಿನಂತೆ ಬಿದ್ದಿದ್ದ ನಿರ್ಜೀವ ದೇಹಗಳು ಅವರಲ್ಲಿ ಯಾವ ವಿಧವಾದ ಭಾವನೆಯನ್ನೂ ಹುಟ್ಟಿಸುತ್ತಿರಲಿಲ್ಲ.

ಆದರೆ ಇದು ?

ಸುಮಾರು ಆರು ವರ್ಷದ ಹುಡುಗನ ದೇಹ ಮೇಜಿನ ಮೇಲೆ ಮಲಗಿತ್ತು. ಅವನ ಮೈಮೇಲೆ ಎಣಿಸಲಾಗದಷ್ಟು ಗಾಯಗಳಾಗಿದ್ದವು. ಅವನ ದೇಹ ರಕ್ತದಿಂದ ಕಡೆದಂತಿತ್ತು. ತಲೆಯ ಬುರುಡೆಯ ಮೇಲೆ ಆರುಕಡೆ ಮುಚ್ಚಿನಿಂದ ಏಟು ಬಿದ್ದಿತ್ತು. ಕೂದಲು ರಕ್ತದಲ್ಲಿ ನೆಂದು ತಲೆಗೆ ಅಂಟಿಕೊಂಡಿತ್ತು.

ಇನ್ನು ಅವನ ಮುಖ !

ಅದು ಮನುಷ್ಯನ ಮುಖವೋ, ಪ್ರಾಣಿಯದೋ ಎಂಬ ಗುರುತು ಸಹ ಸಿಕ್ಕದಷ್ಟು ಅವನ ಮುಖವನ್ನು ಕೊಚ್ಚಿ ಹಾಕಿದ್ದರು. ಮುಖದ ಬಲಭಾಗ ಸಂಪೂರ್ಣವಾಗಿ ಕೊಚ್ಚಿ ಹೋಗಿತ್ತು. ಎಡಗಡೆಯ ಕಣ್ಣುಗುಡ್ಡೆ ಈಚೆಗೆ ಹೊರಟುಕೊಂಡಿತ್ತು.

ವಿಜಯ ದೇಹವನ್ನು ನೋಡಿ ಹಿಂದೆ ಸರಿದಳು. ಮೀರ ಕಲ್ಲೆದೆ ಮಾಡಿಕೊಂಡು, ಅಳುಕದೆ ಧೈರ್ಯವಾಗಿ ನಿಂತಿದ್ದಳು. ಯಾವುದೋ ಮಾತುಗಳು ಕೇಳಿಬಂದವು.

" ಈ ಹುಡುಗನ ಮೈಮೇಲೆ, ಮುಖದ ಮೇಲೆ ಆಗಿರುವ ಗಾಯ, ಏಟುಗಳಿಂದಲೇ ಪ್ರಾಣ ಹೋಗಿದ್ದಿರಬಹುದೇ ? ಅಥವಾ ಪ್ರಾಣ ಹೋದ ಮೇಲೆ ಬಿದ್ದ ಪೆಟ್ಟುಗಳೇ ಇವು ?"

ಪರೀಕ್ಷೆಯನಂತರ ವಿದ್ಯಾರ್ಥಿಗಳು ಒಮ್ಮತದಿಂದ ಹೇಳಿದರು.

" ತಲೆಯ ಮೇಲೆ ಮಚ್ಚಿನಿಂದ ಒಂದು ಏಟು ಬಿದ್ದ ಕೂಡಲೇ ಹುಡುಗ ಸತ್ತು ಹೋಗಿದ್ದಾನೆ. ಕೋಪದಿಂದ ಹುಚ್ಚನಾಗಿದ್ದ ಕೊಲೆಗಾರ ಆಮೇಲೆ ಅವನ ದೇಹವನ್ನು ಕೊಚ್ಚಿ ತುಂಡು ಮಾಡಿದ್ದಾನೆ."

ಅಬ್ಬ ! ಇವನೇ ಮಾನವ !

ಯಾವುದೋ ಒಂದು ಕ್ಷುಲ್ಲಕ ಕಾರಣಕ್ಕಾಗಿ ಏನೂ ಅರಿಯದ ಹಸು

ಳಿಯನ್ನು ತನ್ನ ಕಿಚ್ಚಿನ ಕಿಡಿಗೆ ಆಹುತಿ ಮಾಡಿದ್ದಾನೆ. ಅವನನ್ನು ಮಚ್ಚಿನಿಂದ ಹೊಡೆದು ಕೊಂದುಹಾಕಿದುದಲ್ಲದೇ, ಸತ್ತ ಹೆಣದ ಮೇಲೆ ಗಾಯಗಳನ್ನು ಮಾಡಿ ತನ್ನ ಕೋಪವನ್ನು ಶಾಂತ ಮಾಡಿಕೊಂಡಿದ್ದಾನೆ.

ಮಾನವನನ್ನು 'ನಾಗರೀಕ' ಎಂದು ಹೇಗೆ ಹೇಳುವುದು?

ಮೀರಳಿಗೆ ಅಮೆರಿಕದಿಂದ ಹೊರಡುವ 'ಲೈಫ್' ಮಾಸಪತ್ರಿಕೆಯಲ್ಲಿ ಬಂದಿದ್ದ ಸುದ್ದಿಯೊಂದು ನೆನಪಿಗೆ ಬಂತು.

ಅಮೆರಿಕಾ ಪ್ರಪಂಚದ ದೃಷ್ಟಿಯಲ್ಲಿ ಅತ್ಯಂತ ಮುಂದುವರಿದಿರುವ ದೇಶ. ನಾಗರೀಕತೆ, ಸಭ್ಯತೆ, ಶ್ರೀಮಂತಿಕೆಯಿಂದ ಮೆರೆದಾಡುವ ದೇಶವದು. ಆದರೆ ಅಲ್ಲಿ ನಡೆದ ಒಂದು ಪ್ರಸಂಗ—

ಯಾವುದೋ ನಗರವೊಂದರಲ್ಲಿ,ಊರಿನ ನಾಗರೀಕರು ಬೆಳೆದು ಬಲಿಷ್ಟವಾಗಿದ್ದ ಗೂಳಿಯೊಂದಕ್ಕೂ, ಸಿಂಹವೊಂದಕ್ಕೂ ಕಾಳಗವೇರ್ಪಡಿಸಿದರು. ಬಿಗಿಯಾದ ಸರಳಿನ ಪಂಜರವನ್ನು ಏರ್ಪಡಿಸಿ ಅದರಲ್ಲಿ 'ಗೂಳಿಯನ್ನೂ, ಸಿಂಹವನ್ನೂ ಕಾಳಗವಾಡಲು ಬಿಟ್ಟು, ಊರಿನ ಜನ 'ಮನರಂಜನೆ' ನೋಡುತ್ತಾ ಕುಳಿತರು.

ಎರಡು ಪ್ರಾಣಿಗಳಿಗೂ ಭಯಂಕರ ಜಗಳವಾಯಿತು. ಕಾಳಗದಲ್ಲಿ ಗೂಳಿ ಸಿಂಹವನ್ನು ಹರಿದು ಹಾಕಿತು. ಈ ಕಾಳಗವನ್ನು ನೋಡುತ್ತಿದ್ದ ಜನ ಎಷ್ಟು ಉದ್ರೇಕಗೊಂಡರೆಂದರೆ, ಆ ಕಾಳಗದಿಂದ ಸ್ಫೂರ್ತಿ ಹೊಂದಿದ ಪ್ರೇಕ್ಷಕರಿಗೇ ಜಗಳಗಳು ಆರಂಭವಾದವು. ಬೆಂಚು, ಕುರ್ಚಿಗಳು ಹಾರಾಡಿ ಮತ್ತೊಬ್ಬರ ತಲೆಯ ಮೇಲೆ ಬಿದ್ದವು. ಕೊನೆಗೆ ಪೋಲೀಸಿನವರು ಬಂದು ಪರಿಸ್ಥಿತಿಯನ್ನು ಶಾಂತಮಾಡಬೇಕಾಯಿತು.

ಸಿಂಹವನ್ನು ಸೀಳಿಹಾಕಿದ ಗೂಳಿಗೆ ಸಿಕ್ಕ ಬಹುಮಾನ? ಮೈಯೆಲ್ಲಾ ಗಾಯವಾಗಿ ರಕ್ತ ಸೋರುತ್ತಿದ್ದ ಗೂಳಿಯನ್ನು ಕಟುಕನ ಅಂಗಡಿಗೆ ಒಪ್ಪಿಸಿದರಂತೆ ಆ ಜನ.

ಇಪ್ಪತ್ತನೇ ಶತಮಾನದಲ್ಲಿ ನಾಗರಿಕ ಅಮೆರಿಕದ ನಾಗರೀಕತೆಯಿದು. ಹಸಿದ ಗೂಳಿ, ಸಿಂಹದ ಕಾಳಗದಿಂದ ಮನರಂಜನೆ ಪಡೆಯುವ ಮಾನವರು. ಕಂದನ ಹೆಣವನ್ನು ಕೊಚ್ಚಿ ತಂದೆಯ ಮೇಲಿನ ಕ್ರೋಧವನ್ನು ತೀರಿಸಿಕೊಳ್ಳುವ ಮಾನವ!

ಮೀರಳಿಗೆ ತುಂಬಾ ಸಂಕಟವಾಯಿತು. ಕರುಳು ಎದ್ದು ಬಾಯಿಗೆ ಬರುತ್ತಿದೆಯೇನೋ ಎಂಬಂತೆ ಅವಳಿಗೆ ಭಾಸವಾಯಿತು. ಸೆರಗಿನಿಂದ ಬಾಯನ್ನು ಗಟ್ಟಿಯಾಗಿ ಮುಚ್ಚಿ ಅವಳು ಹೊರಗೆ ಹೋದಳು.

ಶಾಂತಾರಾಮ್, ಜಯಶ್ರೀ ಯಾವುದೋ ಚಿತ್ರದ ಶೂಟಿಂಗಿಗಾಗಿ ಮೈಸೂರಿಗೆ ಬರುವರೆಂದು ತಿಳಿದು ವಿದ್ಯಾರ್ಥಿಗಳು ಪುಲಕಿತರಾದರು. ಶಾಂತಾರಾಮ್ ಮೀರಳ ಅಚ್ಚುಮೆಚ್ಚಿನ ದಿಗ್ದರ್ಶಕ. ಅವನ ಜಾಣ್ಮೆ, ಕಲೆಯಲ್ಲಿರುವ ಆಸಕ್ತಿಯನ್ನು ಮೀರ ತುಂಬಾ ಮೆಚ್ಚಿಕೊಂಡಿದ್ದಳು. ಅಭಿನಯ ಕಲೆಯ ಮೇಲೆ ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡು ವರೆಂದು ತಿಳಿದ ಹಾಸ್ಟೆಲಿನ ವಿದ್ಯಾರ್ಥಿನಿಯರೂ ಹೊರಟರು.

ಮೈಸೂರಿನ ಎಲ್ಲಾ ಕಾಲೇಜುಗಳಿಂದಲೂ ವಿದಾರ್ಥಿ, ವಿದ್ಯಾರ್ಥಿನಿ ಯರು ಬಂದಿದ್ದರು.

"ಮೈಸೂರಿನಲ್ಲಿ ಇಷ್ಟೊಂದು ವಿದ್ಯಾರ್ಥಿಗಳಿದ್ದಾರೆ ಎಂದು ತಿಳಿದುದು ಈ ದಿನವೇ" ಎಂದು ವಿಜಯ ನಗೆಯಾಡಿದಳು.

ಶಾಂತಾರಾಮ್, ಜಯಶ್ರೀ ಕಾರಿನಲ್ಲಿ ಬಂದಿಳಿದರು. ವಿದ್ಯಾರ್ಥಿಗಳ ಮುಖಂಡ ಅವರಿಗೆ ಹಾರ, ತುರಾಯಿ ಹಾಕಿ ಸ್ವಾಗತಿಸಿದ. ಅವರು ವೇದಿಕೆಯ ಮೇಲೆ ಹೋಗಿ ಕುಳಿತರು.

ಶಾಂತಾರಾಮ್ ಚಲನಚಿತ್ರ ಅಭಿನಯದ ಮೇಲೆ ಪುಟ್ಟ ಭಾಷಣ ಮಾಡಿದರು. ಅವರು "ನೀವೇನಾದರೂ ಪ್ರಶ್ನೆ ಕೇಳುವ ಹಾಗಿದ್ದರೆ ಕೇಳ ಬಹುದು" ಎಂದು ಹೇಳಿ ಕುಳಿತುಕೊಂಡರು.

ಆತ ನಿರೀಕ್ಷಿಸಿದ್ದರೇನೋ—ವಿದ್ಯಾರ್ಥಿಗಳು ಕಲೆಯ ಮೇಲೆ ಪ್ರಶ್ನೆ ಗಳನ್ನು ಕೇಳಬಹುದೆಂದು.

ಪ್ರಶ್ನೆಗಳು ಬರತೊಡಗಿದವು.

"ಜಯಶ್ರೀಯೊಡನೆ ಬೇರೆ ನಟ ಅಭಿನಯಿಸುವಾಗ ನಿಮಗೇನು ಎನಿ ಸುತ್ತದೆ?"

"ಶಾಕುಂತಲದ ಶೃಂಗಾರರಸ ಪ್ರಧಾನ ಚಿತ್ರದಲ್ಲಿ ಸಹ ದುಷ್ಯಂತ ಶಕುಂತಳೆಯನ್ನು ಒಂದು ಬಾರಿಯೂ ಮುತ್ತಿಡಲಿಲ್ಲವೇಕೆ?"

"ಜಯಶ್ರೀಯ 'ಮೆಷರ್‌ಮೆಂಟ್ಸ್' ಏನು?"

ಕೆಲವು ಪುಂಡರ ತಂಡದಿಂದಾಗಿ ವಿದ್ಯುತ್‌ದೀಪಗಳು ತಟ್ಟನೆ ಆರಿ ಹೋದವು. ಇದನ್ನು ನಿರೀಕ್ಷಿಸಿಯೇ ಏನೋ ಪೆಟ್ರೋಮ್ಯಾಕ್ಸ್ ದೀಪವನು ವಿದ್ಯಾರ್ಥಿಗಳ ಮುಖಂಡ ಸಿದ್ಧಮಾಡಿ ತಂದಿದ್ದ.

ಹಿಂದಿನಿಂದ ಕೂಗುಗಳು ಕೇಳಿ ಬಂದವು.

"ನಾವು ಜಯಶ್ರೀನ ನೋಡಬೇಕು. ಅವಳ ಮುಖಕ್ಕೆ ದೀಪ ಹಿಡಿ ಯಿರಿ."

ಅಷ್ಟೊಂದು ಜನ ವಿದ್ಯಾರ್ಥಿಗಳ ಎದುರಿನಲ್ಲಿ ಏನೂ ಮಾಡಲಾರದೇ ಶಾಂತಾರಾಮ್ ದೀಪವನ್ನು ಎತ್ತಿ ಜಯಶ್ರೀಯ ಮುಖದ ಬಳಿ ಹಿಡಿದರು.

ಆಕೆಯ ಮುಖ ಕೋಪದಿಂದ ಕೆಂಪಾಗಿತ್ತು. ಆಕೆ ಕೆಳತುಟಿಯನ್ನು ಕಚ್ಚುತ್ತಾ, ಕರವಸ್ತ್ರವನ್ನು ತಿರುಚುತ್ತಾ ಮುಖ ಕೆಳಗೆ ಮಾಡಿ ಕುಳಿತಿದ್ದರು.

ಆ ದಂಪತಿಗಳು ವಿದ್ಯಾರ್ಥಿಗಳ ಕೋಟೆಯನ್ನು ಭೇದಿಸಿಕೊಂಡು ಹೊರಗೆ ಹೋಗಬೇಕಾದರೆ ಸಾಕಾಗಿಹೋಯಿತು.

ಆಮೇಲೆ ಮುಖಂಡ ವಿದ್ಯಾರ್ಥಿಗಳ ನಡತೆಯನ್ನು ಖಂಡಿಸಿ ಕ್ಷಮಾಪಣೆ ಕೇಳಿಕೊಂಡನಂತೆ.

"ಹೊರಗಿನ ಜನಕ್ಕೆ ನಮ್ಮ ವಿದ್ಯಾರ್ಥಿಗಳು ಕೊಡುವ 'ಇಂಪ್ರೆಷನ್' ಎಷ್ಟು ಚೆನ್ನಾಗಿದೆಯೋ?" ಎಂದು ವಿಜಯ ಪರಿತಾಪಪಟ್ಟಳು.

"ಜಯಶ್ರೀ 'ಮೆಷರ್‌ಮೆಂಟ್ಸ್' ಕಟ್ಟಿಕೊಂಡು ಇವರಿಗೇನಾಗಬೇಕಾಗಿದೆ? ಆಕೆಯ ಎದೆ, ಸೊಂಟ, ನಿತಂಬದ ಸುತ್ತಳತೆ ಅರಿತು ಅವಳಿಗೆ ಈಜುವ ಉಡಿಗೆ ಹೊಲಿಸಬೇಕೇನೋ?" ಎಂದು ಮೀರ ವ್ಯಸನಪಟ್ಟಳು.

"ಪ್ರತಿಯೊಬ್ಬ ವಿದ್ಯಾರ್ಥಿಯೂ ಹೀಗೇ ಎಂದು ಹೇಳಲಾಗದಿದ್ದರೂ, ಒಟ್ಟಿನಲ್ಲಿ ವಿದ್ಯಾರ್ಥಿಗಳ ಮನೋಭಾವ ಯಾವ ಕಡೆ ಹರಿಯುತ್ತಿದೆ ಎಂದು ಈದಿನ ತಿಳಿಯಿತು" ಯಶೋದ ಹೇಳಿದಳು.

"ಕೆಲವು ಹುಡುಗಿಯರು ತಾನೇ ಇನ್ನೇನು—ಜಯಶ್ರೀ ಯಾವ ಸೆಂಟು ಹಚ್ಚಾಳೆ, ಯಾರ ಹತ್ತಿರ ರವಿಕೆ ಹೊಲಿಸುತ್ತಾಳೆ ಎಂದು ಕೇಳಲಿಲ್ಲವೇ?"

"ವಿದ್ಯಾರ್ಥಿಗಳೊಂದ ಮೇಲೆ ಅವರೂ ಸೇರಿಕೊಂಡ ಹಾಗಾಯಿತು."

"ಇವರು ಜಯಶ್ರೀಯಲ್ಲಿ ತೋರಿಸಿದ ಕುತೂಹಲದ ನೂರರಲ್ಲಿ ಒಂದು ಭಾಗವನ್ನು ಕಲೆಯಲ್ಲಿ ತೋರಿಸಬಾರದಿತ್ತೇ?"

"ಈ 'ಮಾಬ್ ಮೆಂಟಾಲಿಟಿ'ಗೆ ಏನೂ ಮಾಡೋಕ್ಕಾಗುವುದಿಲ್ಲ. ಎಲ್ಲ ದೇಶಗಳಲ್ಲೂ ಒಂದು ನೂರು ಜನ ಸೇರಿದರೆ ಹೀಗೇ ವರ್ತಿಸುತ್ತಾರೆ."

ವಿದ್ಯಾರ್ಥಿನಿಯರು ಖಿನ್ನ ಮನಸ್ಸಿನಿಂದ ಹಾಸ್ಟೆಲನ್ನು ಸೇರಿದರು.

ಮಾರನೆಯ ದಿನ ಎರಡನೇ ವರ್ಷದವರಿಗೆ ಒಂದು ಗಂಟೆ ಕ್ಲಾಸಿರಲಿಲ್ಲ. ಹಾಸ್ಟೆಲಿಗೆ ಹೋಗೋಣವೆಂದು ಮೀರ, ವಿಜಯ. ಯಶೋದ ಹೊರಟರು. ಅವರು ಕಾರಿಡಾರಿನಲ್ಲಿ ಬರುತ್ತಿದ್ದಾಗ ಬರಿದಾಗಿದ್ದ ರೂಮೊಂದರಲ್ಲಿ ಗೋಪಿನಾಥ ಗೆಳೆಯನೊಬ್ಬನ ಹಸ್ತವನ್ನು ನೋಡುತ್ತ ಕುಳಿತಿದ್ದ.

ಬಾಗಿಲಿನ ಮುಂದೆ ಹಾದು ಹೋಗುತ್ತಿದ್ದ ಮೀರಳನ್ನು ನೋಡಿ ನಕ್ಕು "ನಮಸ್ಕಾರ" ಎಂದ.

"ನಮಸ್ಕಾರ. ನಿಮಗೆ ಕೈ ನೋಡಲು ಬೇರೆ ಬರುತ್ತದೆಯೇ?"

"ಸುಮಾರಾಗಿ ಬರುತ್ತದೆ. ಪುಸ್ತಕವನ್ನು ಓದಿ ತಿಳಿದುಕೊಂಡಿದ್ದೇನೆ."

ವಿಜಯ ಮೀರಳನ್ನು ಚುಚ್ಚಿ "ನಾವೂ ಕೈ ತೋರಿಸೋಣ" ಎಂದಳು. ಮೀರ ನಿರುಪಾಯಳಾಗಿ ಗೆಳತಿಯರೊಡನೆ ಒಳಗೆ ಬಂದಳು.

"ಇವರು ವಿಜಯ, ಯಶೋದ, ಇವರು ಗೋಪಿನಾಥ್–ನಾಟಕದ ಸಂದರ್ಭದಲ್ಲಿ ನನಗೆ ಇವರ ಪರಿಚಯವಾಯಿತು."

ನಮಸ್ಕಾರಗಳ ವಿನಿಮಯವಾಯಿತು. ಗೋಪಿನಾಥ ಗೆಳೆಯನ ಕೈ ಬಿಟ್ಟು ಹುಡುಗಿಯರ ಕಡೆ ತಿರುಗಿದ.

ವಿಜಯ ಕುತೂಹಲದಿಂದ ತನ್ನ ಪುಟ್ಟ ಕೈ ನೀಡಿ

"ನನ್ನ ಕೈ ನೋಡಿ" ಎಂದಳು.

ಅವಳು ತನ್ನ ಮುಂದೆ ನೀಡಿದ ಕೈಯನ್ನು ಗೋಪಿನಾಥ ಪರೀಕ್ಷಿಸಿ ನೋಡತೊಡಗಿದ. ಪೆನ್ಸಿಲೊಂದನ್ನು ಕೈಲಿ ಹಿಡಿದು ಹಸ್ತರೇಖೆಗಳನ್ನು ಬಿಡಿಸಿ ನೋಡಿದ.

"ನಿಮ್ಮದು ಬಹಳ ಪುಟ್ಟ ಕೈ. ಗೆರೆಗಳು ಇನ್ನೂ ಸರಿಯಾಗಿಯೇ ಡೆವಲಪ್ ಆಗಿಲ್ಲ. ನಿಮ್ಮದು ಪ್ರೀತಿ, ವಿಶ್ವಾಸದಿಂದ ತುಂಬಿದ ಹೃದಯ. ಅತ್ಯಂತ ಸ್ನೇಹಪರರು—ಸಂಗೀತದಲ್ಲಿ ಬಹಳ ಆಸಕ್ತಿಯಿದೆ..."

"ಹೌದು. ನಾನು ಒಳ್ಳೆಯ ಡಾಕ್ಟರಾಗುತ್ತೀನೋ ಇಲ್ಲವೋ ಹೇಳಿ.'

"ಸಾಧಾರಣವಾದ ವೈದ್ಯರಾಗುವಿರಿ. ಯಾಕೆಂದರೆ...."

"ಅವಳಿಗೆ ಯಾವಾಗ ಮದುವೆಯಾಗುತ್ತದೆ ಹೇಳಿ. ಯಾರನ್ನು ಮದುವೆಯಾಗುತ್ತಾಳೆ?" ಮೀರ ಕುತೋದ್ಯದಿಂದ ಕೇಳಿದಳು.

"ಓ ಸಾಕು ಬಿಡು" ವಿಜಯ ಕೆಂಪಾಗಿ ಹೇಳಿದಳು.

ವಿಜಯಳ ನಾಚಿಕೆ ನೋಡಿ ಗೋಪಿನಾಥ ತಲೆ ಎತ್ತಿ ಅವಳ ಮುಖದ ಕಡೆ ನೋಡಿದ.

ಎಷ್ಟು ಮುದ್ದಾದ ಹುಡುಗಿ! ಅವಳ ದುಂಡುಮುಖಕ್ಕೆ ಉಂಗುರದ ಮಾದರಿಯ ಲೋಲಾಕುಗಳು ಎಷ್ಟು ಚೆನ್ನಾಗಿ ಕಾಣುತ್ತವೆ. ಗೋಧಿಯ ಬಣ್ಣದ ತನುಕಾಂತಿ, ದೊಡ್ಡ ಕಣ್ಣುಗಳು, ಅವುಗಳಲ್ಲಿನ ಮುಗ್ಧತೆಯಿಂದಾಗಿ ಅವಳ ಮುಖ ಮಗುವಿನ ಮುಖದಂತೆ ಕಾಣುತ್ತಿತ್ತು. ಸಾಧಾರಣ ವಾದೊಂದು ನೂಲಿನ ಸೀರೆಯಲ್ಲೂ ಅವಳು ರಾಣಿಯಂತೆ ಕಾಣುತ್ತಿದ್ದಳು.

ಗೋಪಿನಾಥ ಮತ್ತೆ ನೋಟವನ್ನು ಅವಳ ಕೈಯಿನ ಕಡೆಗೆ ಹರಿಸಿದ.

ನೀಳವಾದ ಮೃದುವಾದ ಬೆರಳುಗಳು....

"ಈ ರೀತಿಯ ಬೆರಳುಗಳಿದ್ದರೆ ಅವರು ಯಾವುದಾದರೊಂದು ಕಲೆಯಲ್ಲಿ ಪರಿಣಿತರಾಗುತ್ತಾರೆ."

"ವಿಜಯ ಹಿಂದೂಸ್ಥಾನಿ ಸಂಗೀತ ಬಹಳ ಚೆನ್ನಾಗಿ ಹೇಳ್ತಾಳೆ. ನಿಮಗೆ ಗೊತ್ತಿರಲಿಲ್ಲವೇನು ?" ಎಂದು ಯಶೋದ ಕೇಳಿದಳು.

ಗೋಪಿನಾಥ ತಲೆ ಅಲುಗಿಸಿದ. ಅದೇಕೋ ಅವನ ಮುಖ ಬೆವರಿತು.

"ನೀವು ಮದುವೆ ವಿಷಯ ಹೇಳಲಿಲ್ಲವಲ್ಲಾ ?" ಮೀರ ಕೇಳಿದಳು.

"ಅವರು ಓದು ಮುಗಿಸುವವರೆಗೆ ಮದುವೆಯಾಗುವುದಿಲ್ಲ. ಆಮೇಲೆ ಈ ಕಾಲೇಜಿನಲ್ಲಿರುವವರಲ್ಲೇ ಒಬ್ಬರನ್ನು ಮದುವೆಯಾಗುತ್ತಾರೆ...."

"ಆ ಭಾಗ್ಯಶಾಲಿ ಯಾರು ?"

"ಅದು ನನಗೆ ಗೊತ್ತಾಗೋದಿಲ್ಲ. ಅವರು ಆಮೇಲೆ ತಮ್ಮ ಸಂಸಾರದಲ್ಲೇ ಹೆಚ್ಚು ಆಸಕ್ತಿ ವಹಿಸುತ್ತಾರಾದ್ದರಿಂದ ಒಳ್ಳೆಯ ಡಾಕ್ಟರಾಗುವುದಿಲ್ಲ. ಇದು ಕೆರಿಯರ್ ಗರ್ಲ್‌ನ ಕೈಯಲ್ಲ. ಸದ್ಗೃಹಿಣಿಯ ಕೈ...."

"ಸಾಕು ಬಿಡಿ. ಏನೇನೋ ಹೇಳ್ತೀರಾ...." ಎನ್ನುತ್ತಾ ವಿಜಯ ಕೈ ಹಿಂದಕ್ಕೆ ತೆಗೆದುಕೊಂಡಳು. ಗೋಪಿನಾಥ ವಸ್ತ್ರದಿಂದ ಮುಖ ಒರೆಸಿಕೊಂಡ.

ಯಶೋದ ತನ್ನ ಕೈಯನ್ನು ತೋರಿಸಿಕೊಂಡಳು. ಅವರಿಬ್ಬರ ಒತ್ತಾಯದಿಂದ ಮೀರ ತನ್ನ ಕೈಯನ್ನೂ ತೋರಿಸಲೇಬೇಕಾಯಿತು.

"ನಿಮಗೆ ಹಣಕ್ಕೆ ಕಡಿಮೆಯಿಲ್ಲ. ತುಂಬಾ ಶ್ರೀಮಂತರು—ಉತ್ತಮ ವೈದ್ಯರಾಗುವಿರಿ—ನಿಮಗೆ ಅತ್ಯಂತ ಪ್ರಿಯರಾದವರನ್ನು ಕಳೆದುಕೊಂಡಿದ್ದೀರಿ ಅಥವ ಕಳೆದುಕೊಳ್ಳುವಿರಿ. ನಿಮಗೆ ಜೀವನದಲ್ಲಿ ಅಷ್ಟೇನೂ ಸುಖವಿಲ್ಲ. ನೀವು ಒಳ್ಳೆಯ ಗೆಳತಿ, ಒಳ್ಳೆಯ ವಿದ್ಯಾರ್ಥಿನಿ. ಉತ್ತಮ ವೈದ್ಯರಾಗುವುದರಲ್ಲಿ ಸಂದೇಹವಿಲ್ಲ. ಆದರೆ ಎಂದಿಗೂ ಉತ್ತಮ ಗೃಹಿಣಿ ಎನಿಸಿಕೊಳ್ಳುವುದಿಲ್ಲ...."

ಮೀರ ಬೆಚ್ಚಿ ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಂಡಳು.

"ನಮ್ಮ ಕೈಗಳನ್ನು ನೋಡಿದಕ್ಕೆ ನಿಮ್ಮ ಫೀಸೇನು ?" ವಿಜಯ ಕೇಳಿದಳು.

"ನನ್ನೊಡನೆ ಕ್ಯಾಂಟೀನಿಗೆ ಬಂದು ತಿಂಡಿ ತಿನ್ನಬೇಕು" ಗೋಪಿ ಹೇಳಿದ.

"ನಿಮ್ಮ ಲೆಕ್ಕದಲ್ಲೇ? ಇದೇನು ಅನ್ಯಾಯ ?" ವಿಜಯ ಪ್ರತಿಭಟಿಸಿದಳು. ಯಶೋದೆಯೂ ಅವಳೊಡನೆ ದನಿಗೂಡಿಸಿದಳು.

" ಹಾಗಾದರೆ ನಿಮ್ಮಿಷ್ಟ" ಇಂದ ಗೋಪಿ.

" ಹೋಗೋಣ ಬನ್ನಿ. ನಾಳೆ ನಾವು ಅವರಿಗೆ ಕೊಡಿಸಿದರಾಯಿತು" ಮೀರ ಪರಿಹಾರ ಸೂಚಿಸಿದಳು.

ಎಲ್ಲರೂ 'ಕ್ಯಾಂಟೀನ್' ಕಡೆ ನಡೆದರು.

ದಿನವೆಲ್ಲ ಗೋಪಿನಾಥನ ಮಾತುಗಳು ಮೀರಳ ಕಿವಿಯಲ್ಲಿ ಮೊರೆಯುತ್ತಿದ್ದವು.

" ಯು ಆರ್ ಎ ಗುಡ್ ಫ್ರೆಂಡ್, ಗುಡ್ ಸ್ಟೂಡೆಂಟ್, ಬಟ್ ನಾಟ್ ಎ ಗುಡ್ ಹೌಸ್ ವೈಫ್."

ಅವನ ಮಾತು ನಿಜವಿರಬಹುದೇ? ಇದ್ದರೂ ಇರಬಹುದು. ಮೀರಳಿಗೆ ತನ್ನ ಸಂಸಾರವೇ ಸರ್ವಸ್ವ ಎನ್ನುವ ಭಾವನೆ ಎಂದೂ ಬಂದಿರಲಿಲ್ಲ. ವೀಣ ಳಿದ್ದಾಗ ಮಾತ್ರ...ಒಡೆದ ಕನಸು.

ಕ್ಲಾಸಿನಲ್ಲಿ ಪಾಠಗಳನ್ನು ಸಹ ಮನಸ್ಸಿಟ್ಟು ಕೇಳಲಾಗಲಿಲ್ಲ ಮೀರಳಿಗೆ. ಕಾಲೇಜು ಮುಗಿದಾಗ ಏನೋ ಯೋಚನೆ ಮಾಡುತ್ತಿದ್ದ ಮೀರ ವಿಜಯಳ ಮಾತುಗಳಿಂದ ಎಚ್ಚರಗೊಂಡಳು.

" ಗೋಪಿನಾಥ್ ಒಳ್ಳೆಯವರು. ಅಲ್ಲವೇ ಮೀರಾ ?"

ಮೀರಳಿಗೆ ತುಂಬಾ ನಗು ಬಂತು. ಅವಳು ಕೀಟಲೆ ಮಾಡುತ್ತಾ

" ಉಳಿದ ಹುಡುಗರು ನಿನ್ನ ತಲೆಯ ಮೇಲೆ ಕಲ್ಲು ಹಾಕಿದರೇನು ?"

" ಹಾಗಲ್ಲ. ಆತ ಬಹಳ ಗಂಭೀರವಾಗಿ ಇರುತ್ತಾರೆ. ಹುಡುಗಿಯರನ್ನು ದಿಟ್ಟಿಸಿ ನೋಡುವುದಿಲ್ಲ. ಯಾರನ್ನೂ ರೇಗಿಸುವುದಿಲ್ಲ. ಕ್ಲಾಸಿನಲ್ಲೂ ತಮ್ಮ ಪಾಡಿಗೆ ತಾವಿರುತ್ತಾರೆ ಎಂದು ಅವರ ಸಹಪಾಠಿ ಕಾಂತಿ ಹೇಳಿದಳು."

" ಅವರು ಪುಕ್ಕಟೆಯಾಗಿ ನಿನ್ನ ಕೈ ನೋಡಿದರೂಂತ ಒಳ್ಳೆಯವರಾಗಿ ಬಿಟ್ಟರೇನೋ ?" ಯಶೋದ ಕೆಣಕಿದಳು.

ಅವರು ತರಗತಿಯೊಂದರ ಮುಂದೆ ಹಾದುಹೋಗುತ್ತಿದ್ದಂತೆ ತರಗತಿ ಮುಗಿದು ಹುಡುಗರ ತಂಡ ಹೊರಗೆ ಬರತೊಡಗಿತು. ಗುಂಪಿನಲ್ಲಿ ಗೋಪೀನಾಥನನ್ನು ಕಂಡು ಮೀರ

" ನೋಡು ನಿನ್ನ ಹೀರೋ ಅಲ್ಲಿದ್ದಾರೆ. ನಿನ್ನ ಸರ್ಟಿಫಿಕೇಟನ್ನು ಅವರಿಗೇ ಕೊಡು " ಎಂದಳು.

" ನನಗೂ ಗೊತ್ತು ಅವರು ಒಳ್ಳೆಯವರೂಂತ. ಆದರೂ ಸುಮ್ಮನೆ ನನ್ನ ಹಾಸ್ಯ ಮಾಡ್ತೀಯ."

ಗುಂಪಿನಲ್ಲಿ ಹಿಂದೆ ಹೋಗುತ್ತಿದ್ದ ಗೋಪಿನಾಥನನ್ನು ಯಶೋದ

"ಮಿಸ್ಟರ್ ಗೋಪೀನಾಥ್" ಎಂದು ಕೂಗಿದಳು.

ಗೋಪಿ ಹಾಗೇ ನಿಂತು ಹಿಂತಿರುಗಿ 'ಏನು' ಎನ್ನುವಂತೆ ನೋಡಿದ.

"ಮಿಸ್ ವಿಜಯ ಪರಾಂಜಪೆ ಅದೇನೋ ನಿಮ್ಮನ್ನು ಕೇಳಬೇಕೆಂದಿದಾರೆ."

ವಿಜಯಾಗೆ ಈಗ ನಿಜವಾಗಿಯೂ ಯಶೋದಳ ಮೇಲೆ ಕೋಪ ಬಂತು. ಎಲ್ಲರ ಎದುರಿನಲ್ಲಿ ಆತನನ್ನು ಕೂಗಿ ನಿಲ್ಲಿಸುವಂಥಹ ಅಗತ್ಯವಾದರೂ ಏನು?

ಅವಳ ಕಿವಿಯಲ್ಲಿದ್ದ ಉಂಗುರಗಳು—ಎರಡು ಜಡೆ—ನೂಲಿನ ಸೀರೆ—ಮಗುವಿನಂತಹ ಮುಖ—

ಗೋಪೀನಾಥ ತಡವರಿಸುತ್ತಾ ಕೇಳಿದ.

"ಏನಾಗಬೇಕಿತ್ತು?"

ವಿಜಯಳಿಗೆ ಅವನೊಡನೆ ಮಾತನಾಡುವುದು ಏನೂ ಇರಲಿಲ್ಲ. ಯಶೋದ ಅವನನ್ನು ಕೂಗಿ ನಿಲ್ಲಿಸಿದ ಮೇಲೆ ಅವಳಿಗೆ 'ಏನೂ ಇಲ್ಲ. ಹೋಗಿ' ಎನ್ನಲು ಸಂಕೋಚವಾಯಿತು. ಮೀರ ಅವಳ ಸಹಾಯಕ್ಕೆ ಬಂದು

"ತಾನು ಈ ವರ್ಷ ಪರೀಕ್ಷೆಯಲ್ಲಿ ಪಾಸಾಗಬಹುದೇ ಎಂದು ಕೇಳುತ್ತಾಳೆ" ಎಂದಳು.

"ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದರೆ ಖಂಡಿತ ಪಾಸಾಗುವಿರಿ."

"ಅದನ್ನು ಹೇಳುವುದಕ್ಕೆ ನೀವೇ ಆಗಬೇಕೇನೋ?" ವಿಜಯ ಕೇಳಿದಳು.

"ನಿಮ್ಮ ಹಸ್ತ ಸಾಮುದ್ರಿಕ ವಿವರವಾಗಿ ತಿಳಿಯಲು ಆಸೆಯಿದೆಯೇ?"

"ಯಾರಿಗೆ ತಾನೆ ಆಸೆ ಇರುವುದಿಲ್ಲ."

"ಇನ್ನೊಂದು ದಿನ ನಿಧಾನವಾಗಿ ನೋಡಿ ಹೇಳುತ್ತೇನೆ. ನಿಮಗೆ ಮೀರಾ....?"

"ನನಗೆ ಅದರಲ್ಲಿ ಅಷ್ಟೊಂದು ಆಸಕ್ತಿಯಿಲ್ಲ. ಬೇಕಾದರೆ ಯಶೋದ...."

"ಸಧ್ಯ ಬೇಡಮ್ಮ. ಕೈ ತೋರಿಸಿ ಅವಲಕ್ಷಣ ಎನಿಸಿಕೊಳ್ಳಲು ನನಗಾಸೆಯಿಲ್ಲ."

"ಈಗ ವಿಜಯಳಿನೊಬ್ಬಳಿಗೇ 'ಪಾಮಿಸ್ಟ್ರಿ'ಯಲ್ಲಿ ಆಸಕ್ತಿ ಬಂದಿದೆ." ಮೀರ ನಗುತ್ತಾ ಹೇಳಿದಳು.

"ನೋಡೋಣ. ನನಗೆ ಬಿಡುವಿದ್ದಾಗ ಒಂದು ದಿನ ಹೇಳುತ್ತೇನೆ.

ಬರಲಾ ?" ಎಂದು ಹುಡುಗಿಯರ ಅಪ್ಪಣೆ ಪಡೆದು ಗೋಪಿ ಹೊರಟು ಹೋದ.

"ವಿಜಯಾಗೆ 'ಪಾಮಿಸ್ಟ್ರಿ'ಗಿಂತಲೂ 'ಪಾಮಿಸ್ಟ್'ನಲ್ಲಿ ಆಸಕ್ತಿಯಿದೆ" ಯಶೋದ ಮತ್ತೆ ಕೀಟಲೆ ತೆಗೆದಳು.

"ನನ್ನ ಕೈ ತೋರಿಸಿಕೊಂಡಾದ ಮೇಲೆ ಆತ ಎದುರಿಗೆ ಸಿಕ್ಕಿದರೂ ವಿಷ್ ಕೂಡ ಮಾಡೊಲ್ಲ. ಬೇಕಾದರೆ ನೋಡು" ಎಂದಳು ವಿಜಯ.

"ಪಾಪ! ಅವಳನ್ನು ಯಾಕೆ ಹಾಸ್ಯಮಾಡ್ತೀಯ ಯಶೋದ. ಹುಡುಗಿ ಕೈ ತೋರಿಸೋಣಾಂತ ಆಸೆ ಪಡ್ತಾಳೆ. ಅದು ಸಹಜ" ಎಂದು ಮೀರ ಹಿರಿಯಳಂತೆ ಇಬ್ಬರಿಗೂ ಸಮಾಧಾನ ಹೇಳಿದಳು.

ಎರಡನೇ ವರ್ಷದ ಪರೀಕ್ಷೆ ಅತ್ಯಂತ ಕಠಿಣವಾದುದೆಂದು ಮೀರಳಿಗೆ ತಿಳಿದಿತ್ತು. ಎಂತಹ ಬುದ್ಧಿವಂತರೂ ಎರಡನೇ ವರ್ಷದಲ್ಲಿ ಫೇಲಾಗುವರೆಂದು ಎಲ್ಲರೂ ಹೆದರಿಸುತ್ತಿದ್ದರು. ಬೆಳಿಗ್ಗೆ ಓದಲು ಮೀರಳಿಗೆ ಬಿಡುವು ಸಿಕ್ಕುತ್ತಿರಲಿಲ್ಲ. ಆದುದರಿಂದ ಅವಳು ಪ್ರತಿ ದಿನ ರಾತ್ರಿ ಎರಡುಗಂಟೆಯವರೆಗೆ ಓದಿ ಮಲಗುತ್ತಿದ್ದಳು. ಯಶೋದ, ಮನೋರಮಾ ಸಹ ವ್ಯಾಸಂಗದಲ್ಲಿ ಹೆಚ್ಚು ಸಮಯವನ್ನು ಕಳೆಯುತ್ತಿದ್ದರು.

ಆದರೆ ಡಾಲಿಗೆ ಮಾತ್ರ ಓದಲು ಸಮಯವಿರುತ್ತಿರಲಿಲ್ಲ. ಅವಳು ಮೊದಲಿನಂತೆಯೇ ಅಲಂಕಾರ ಮಾಡಿಕೊಂಡು ತನ್ನನ್ನು ಹುಡುಕಿಕೊಂಡು ಬರುತ್ತಿದ್ದ ಕಸಿನ್ನಿನ ಜೊತೆ ಹೊರಗೆ ಹೊರಡುತ್ತಿದಳು. 'ಡಾಲಿಯ ಕಸಿನ್' ಎಂಬುದು ಹುಡುಗಿಯರಿಗೆ ಹಾಸ್ಯದ ಮಾತಾಗಿಹೋಗಿತ್ತು.

"ಈ ಸಲ ಡಾಲಿ ಪಾಸಾದರೆ ಅವಳ ಕಸಿನ್ನಿನ್ನಾಣೆ" ಎಂದು ಯಶೋದ ಹೇಳಿದ್ದಳು. ಪರೀಕ್ಷೆ ಮುಗಿಯಿತು. ಪರೀಕ್ಷೆ ಮುಗಿದೊಡನೆ ವಿಜಯ, ಮೀರಾ ಪೂನಾಗೆ ಹೊರಟರು. ವಿಜಯ ಮುಂಚಿತವಾಗಿ ಪೂನಾದಲ್ಲಿದ್ದ ತನ್ನ ಸೋದರತ್ತೆಗೆ ಬರುವವಿಷಯವಾಗಿ ಕಾಗದ ಬರೆದಿದ್ದಳು. ಮೀರ ಶಾಮುವಿಗೂ ತಾನು ಪುಣೆಗೆ ಹೊರಡುವ ವಿಷಯ ತಿಳಿಸಿ 'ಸಾಧ್ಯವಾದರೆ ಲಕ್ಷಣವಾಗಿರುವ ಹುಡುಗಿಯೊಬ್ಬಳನ್ನು ನಿಮಗಾಗಿ ತರುತ್ತೇನೆ' ಎಂದು ಬರೆದಿದ್ದಳು.

ಮೀರ, ವಿಜಯ ಸಾಮಾನುಗಳ ಸಮೇತ ಪ್ಲಾಟ್‌ಫಾರಮ್ಮಿಗೆ ಬಂದರು. ಪೂನಾಗೆ ಹೊರಡುವ ರೈಲು ಇನ್ನೂ ಲೈನಿಗೆ ಬಂದಿರಲಿಲ್ಲ. ಸಾಮಾನುಗಳನ್ನು ಒಂದು ಕಡೆ ಇರಿಸಿ ಇಬ್ಬರೂ ಸುತ್ತಲೂ ನೋಡುತ್ತಾ ನಿಂತರು.

" ಅರಸೀಕೆರೆ ರೈಲು ಬರೋಕೆ ಇನ್ನೂ ಎಷ್ಟು ಹೊತ್ತೋ?" ಮೀರ ಕೇಳಿದಳು.

" ಮೀರ ಅಲ್ಲಿರೋದು ಗೋಪಿನಾಥ್ ಹಾಗಿಲ್ಲವೇ ?"

" ಸರಿ. ನಿನಗೆ ಯಾರನ್ನು ನೋಡಿದರೂ ಗೋಪಿನಾಥನ ಹಾಗೇ ಕಾಣ್ತಾರೆ " ಮೀರ ವಿಜಯಳನ್ನು ಕೆಣಕಿದಳು.

" ಈ ಕಡೆಯೇ ತಿರುಗಿದರು....ಅವರೆ....ನೋಡು ನಮ್ಮನ್ನ ನೋಡಿ ನಕ್ಕರು....ಈ ಕಡೆಗೇ ಬರುತ್ತಿದ್ದಾರೆ."

ವಿಜಯಳ ಮಾತು ನಿಜವಾಗಿತ್ತು. ಗೋಪೀನಾಥ ಗೆಳತಿಯರಿಬ್ಬರನ್ನೂ ನೋಡಿ ನಕ್ಕು ಹತ್ತಿರ ಬಂದು

" ಎಲ್ಲೋ ಪ್ರಯಾಣ ಹೊರಟ ಹಾಗಿದೆ " ಎಂದ.

" ವಿಜಯಳ ತವರುಮನೆಗೆ ಹೋಗ್ತಿದೀವಿ."

" ಅಂದರೆ....?"

" ಪೂನಾಗೆ ಹೋಗ್ತಿದೀವಿ. ಅಲ್ಲಿ ಅವಳ ಸೋದರತ್ತೆ ಇದಾರೆ. ಹಾಗೆ ಬೊಂಬಾಯನ್ನೂ ನೋಡಿಬರುತ್ತೇವೆ. ಅಲ್ಲಿ ನಮ್ಮಣ್ಣ ಗೋಪಾಲ ಇದಾನೆ."

" ಸಂತೋಷ. ನಿಮ್ಮ ಪ್ರಯಾಣ ಸುಖವಾಗಿರಲಿ. ನೀವೇ ಪುಣ್ಯ ವಂತರು."

" ವಿಜಯಾ ಜೊತೆ ಪ್ರಯಾಣ ಮಾಡ್ತೀನಿಂತ ಹಾಗೆ ಹೇಳುತ್ತಿರುವಿ ರೇನು ?"

ಗೋಪಿ ಹುಡುಗಿಯಂತೆ ಕೆಂಪಾದ.

" ಹಾಗಲ್ಲ....ನೀವು ಊರು ನೋಡಿ....ಬರ್ತೀರೀಂತ...."

" ನಮ್ಮ ವಿಜಯಾ ಕೈ ಕೊನೆಗೂ ನೀವು ನೋಡಲೇ ಇಲ್ಲ " ಮೀರ ಅವನನ್ನು ಆಕ್ಷೇಪಿಸಿದಳು.

" ನನಗೆ ಈಗ ಕೈ ತೋರಿಸುವ ಆಸೆ ಇದೆ " ವಿಜಯ ಹೇಳಿದಳು.

" ನೀವು ಬಂದ ಮೇಲೆ...."

" ಏನೂ ಬೇಕಿಲ್ಲ. ನಿಮುಗ್ಯಾಕೆ ತೊಂದರೆ."

" ತೊಂದರೆ ಏನಿಲ್ಲ. ನೀವು ವಾಪಸ್ಸು ಬಂದ ಮೇಲೆ ಬೇಡಾಂದ್ರೂ ನಾನು ಬಿಡೋದಿಲ್ಲ." ಗೋಪಿ ಒತ್ತಿ ನುಡಿದ.

" ನೀವು ರಜದಲ್ಲಿ ಎಲ್ಲಿಗೂ ಹೋಗುವುದಿಲ್ಲವೇನು ?"

" ಇಲ್ಲ. ಯಾರೋ ಸ್ನೇಹಿತನ್ನ ಕಳಿಸಿಕೊಡೋಕೆ ಬಂದಿದ್ದೆ. ಅಕ

ಸ್ಮಾರ್ತ್ ನಿಮ್ಮ ಭೇಟಿಯಾಯಿತು." ಹಾಗೆ ಹೇಳುವಾಗ ಅವನು ವಿಜಯಳ ಕಡೆ ನೋಡಿದ.

ಅವಳ ಕೆನ್ನೆಯ ಮೇಲೆ ಗೋಪಿಯ ಗಲ್ಲ, ಬಾಯಿಯ ನೆರಳು ಬಿದ್ದಿತ್ತು. ಸ್ವಚ್ಛ ಕೆನ್ನೆಯ ಮೇಲೆ ಮೂಡಿದ್ದ ತನ್ನ ನೆರಳನ್ನೇ ಮತ್ಸರ ದಿಂದ ನೋಡಿದ ಗೋಪಿ.

ಅದೇ ಸರಳತೆ, ಮುಗ್ಧತೆ.

ಗೋಪಿ ಅಸೂಯೆಗೊಂಡು ಹಿಂದಕ್ಕೆ ಸರಿದ. ಅವನ ಕ್ರಾಪಿನ ನೆರಳು ಅವಳ ಕೊರಳಿನ ಮೇಲೆ ಪ್ರತಿಬಿಂಬಿತವಾಯಿತು. ಗಾಳಿ ಅವನ ಕ್ರಾಪನ್ನು ಕೆದರಿದಾಗ ಕೊರಳಿನ ಮೇಲಿದ್ದ ನೆರಳೂ ಅಲುಗಾಡುತ್ತಿತ್ತು.

ವಿಜಯ ಕೊರಳಿಗೆ ಹವಳದ ಸರ ಹಾಕಿಕೊಂಡಿದ್ದಳು. ಅವಳ ಕೊರ ಳಿನ ಬಣ್ಣಕ್ಕೂ, ಹವಳದ ಸರಕ್ಕೂ ತುಂಬ ಚೆನ್ನಾಗಿ ಹೊಂದಿಕೆಯಾಗಿತ್ತು.

ವಿಜಯ ಮೌನಗೌರಿಯಂತೆ ನಿಂತು ಅವರಿಬ್ಬರೂ ಆಡುತ್ತಿದ್ದ ಮಾತುಗಳನ್ನು ಕೇಳುತ್ತಿದ್ದಳು. ಇಂಗ್ಲಿಷಿನಲ್ಲಿ ಪ್ರಾರಂಭವಾದ ಸಂಭಾಷಣೆ ಈಗ ಕನ್ನಡಕ್ಕೆ ತಿರುಗಿತ್ತು. ವಿಜಯಳಿಗೆ ಕನ್ನಡ ಈಗ ಸುಮಾರಾಗಿ ತಿಳಿ ಯುತ್ತಿತ್ತು. ತಪ್ಪುತಪ್ಪಾಗಿ ಎಳೆಯ ಮಗುವಿನಂತೆ ತೊದಲು ಕನ್ನಡವನ್ನು ಆಡುತ್ತಿದ್ದಳು.

ಗೋಪಿ ಮೀರಳೊಡನೆ ಮಾತನಾಡುತ್ತಿದ್ದರೂ, ಅವನ ಗಮನವೆಲ್ಲವೂ ವಿಜಯಳ ಕೊರಳಿನ ಮೇಲಿತ್ತು.

ಎಷ್ಟು ಸುಂದರ ! ಎಷ್ಟು ಮೃದು !

ತನ್ನ ನೆರಳೇ ತನಗಿಂತಲೂ ಭಾಗ್ಯಶಾಲಿ,

ಟ್ರೈನು ಲೈನಿಗೆ ಬಂತು. ಗೋಪಿ ಹತ್ತಿ ಹುಡುಗಿಯರಿಬ್ಬರಿಗೂ ಕೂಡಲು ಜಾಗ ಮಾಡಿಕೊಟ್ಟ. ಅವರ ಸಾಮಾನುಗಳನ್ನು ಸರಿಯಾಗಿರಿಸಿ

"ಯಾವುದಾದರೂ ಪೇಪರು ಬೇಕಿತ್ತೇ ?" ಎಂದ.

"ಕನ್ನಡ ವಾರಪತ್ರಿಕೆಗಳನ್ನು ತಂದುಕೊಡಿ" ಎನ್ನುತ್ತಾ ಮೀರ ಪರ್ಸ್ ತೆಗೆದಳು. ಗೋಪಿ ತಿರುಗಿ ನೋಡದೆ ಹೊರಟುಹೋದ.

ಅವನು ಹಿಂತಿರುಗಿ ಬಂದು ಮೀರಳಿಗೆ ಕನ್ನಡ ಪತ್ರಿಕೆಗಳನ್ನು ಕೊಟ್ಟು ವಿಜಯಳ ಕೈಗೆ ಹಿಂದಿ ಮಾಸಪುಸ್ತಕವನ್ನು ನೀಡುತ್ತಾ

"ನಿಮಗೆ ಹಿಂದಿ ಬರುತ್ತದಲ್ಲವೇ ?" ಎಂದ.

"ಓಹೋ" ಎನ್ನುತ್ತಾ ವಿಜಯ ಅದರ ಹೆಸರು ಓದಿ ನಗತೊಡಿ ತೊಡಗಿದಳು.

" ಯಾವ....ಎಂತಹ ಪುಸ್ತಕ ಅದು ?" ಗೋಪಿ ಗಾಬರಿಗೊಂಡು ಕೇಳಿದ.

ನಗುವಿನ ನಡುವೆ ವಿಜಯ ಹೇಳಿದಳು

" ಹಿಂದಿ ' ಚಂದಮಾಮ ' ತಂದಿದ್ದೀರಿ ನನಗೆ........"

" ಹಿಂದೀದು ಅದೊಂದೇ ಇದ್ದಿದ್ದು........"

" ಇದು ಮಕ್ಕಳ ಪುಸ್ತಕ."

" ಕೊಡಿ. ಬದಲಾಯಿಸಿ ಬೇರೆ ಯಾವುದಾದರೂ ಇಂಗ್ಲಿಷಿನದು ತಂದು ಕೊಡ್ತೀನಿ."

" ಊಹೂಂ. ನನಗಿದೇ ಇರಲಿ. ನೀವು ಮೊದಲು ತಂದದ್ದೇ ನನಗಿರಲಿ" ಎನ್ನುತ್ತಾ ವಿಜಯ ಪುಸ್ತಕವನ್ನು ತನ್ನ ಕೈ ಚೀಲದಲ್ಲಿರಿಸಿಕೊಂಡಳು.

"ಕಾಲೇಜು ಬಾಗಿಲು ತೆಗೆದ ಮೇಲೇ ನಿಮ್ಮ ಭೇಟಿ" ಎನ್ನುತ್ತಾ ಗೋಪಿ ಟ್ರೈನಿನ ಕಿಟಕಿಯ ಮೇಲೆ ಕೈಯಿಟ್ಟ. ವಿಜಯಳೂ ಕಿಟಕಿಯ ಮೇಲೆ ಕೈಯಿಟ್ಟಿದ್ದಳು. ಗೋಪಿ ತನ್ನ ಕೈಮೇಲೆ ಕೈ ಇಟ್ಟೊಡನೆ ವಿಜಯ ಕಂಪಿಸಿ ತನ್ನ ಕೈ ಹಿಂದಕ್ಕೆಳೆದುಕೊಂಡಳು.

" ಸಾರಿ."

ಅವನೇಕೆ 'ಸಾರಿ' ಎಂದುದು ಮೀರಳಿಗೆ ತಿಳಿಯಲಿಲ್ಲ. ವಿಜಯಳ ಮುಖ ಮುಂಜಾವಿನ ಅರುಣನಂತಿತ್ತು.

" ನಿಮ್ಮ ಸಹಾಯಕ್ಕೆ ನಾವು ಕೃತಜ್ಞರು " ಮೀರ ಅವನನ್ನು ಬೀಳ್ಕೊಡುವವಳಂತೆ ಮಾತನಾಡಿದಳು.

ಆದರೆ ಗೋಪಿಗೆ ಅದೇಕೋ ಅಲ್ಲಿಂದ ಹೋಗುವ ಮನಸ್ಸಿರಲಿಲ್ಲ. ಅವನು ಹಿಂದೆ ಸರಿದು ಭಾರವಾದ ದನಿಯಲ್ಲಿ " ಹೋಗಿ ಬನ್ನಿ. ವಿಷ್ ಯು ಎ ಹ್ಯಾಪಿ ಜರ್ನಿ." ಎನ್ನುತ್ತಾ ಮರೆಯಾದ.

ಬೆಳಕು ಹೋಗಿ ಕತ್ತಲು ಕವಿಯುತ್ತಾ ಬಂದಿತು. ಮೈಸೂರಿನಿಂದ ಹೊರಟ ಮೇಲೆ ದಾವಣಗೆರೆಯವರೆವಿಗೆ ಕನ್ನಡ ಸುಮಾರಾಗಿ ಒಂದೇ ರೀತಿಯಿತ್ತು. ಅಲ್ಲಿಂದ ಕ್ರಮೇಣ ಕನ್ನಡ ರೂಪಾಂತರ ತಾಳತೊಡಗಿತ್ತು. ಧಾರವಾಡ ಕಳೆದನಂತರ ಕನ್ನಡ, ಮರಾಟಿ ಕಂಪಾರ್ಟ್‌ಮೆಂಟಿನಲ್ಲಿ ಕೇಳಬಂದವು. ಬೆಳಗಾಂ ಕಳೆದ ಮೇಲಂತೂ ಕನ್ನಡದ ಸೊಲ್ಲು ಅಡಗಿ ಹೋಗಿತ್ತು.

ವಿಜಯ ಪ್ರಯಾಣ ಬೇಸರವಾದಾಗಲೆಲ್ಲಾ ' ಚಂದಮಾಮ '

ಹಿಡಿದುಕೊಂಡು ಕುಳಿತುಕೊಳ್ಳುತ್ತಿದ್ದಳು. ಅದರಲ್ಲಿ ಅವಳೇನು ಓದುತ್ತಿದ್ದಳೋ? ಓದುವ ನೆಪದಲ್ಲಿ ಅವಳು ಕನಸಿನ ಮನೆಯನ್ನು ಕಟ್ಟುತ್ತಿದ್ದಳು. ಆಗಾಗ್ಗೆ ನಗೆಯ ತರಂಗವೊಂದು ಅವಳ ತುಟಿಮಿಂಚಿನಲ್ಲಿ ಆಡಿ ಮರೆಯಾಗುತ್ತಿತ್ತು.

"ಚಂದಮಾಮ ಎಷ್ಟು ಸಲ ಓದುತ್ತೀಯ? ಸಾಕು" ಎಂದು ಮೀರ ಅವಳನ್ನು ಹಾಸ್ಯ ಮಾಡಿದ್ದಳು.

ಪೂನಾದಲ್ಲಿ ಗೆಳತಿಯರನ್ನು ಎದುರುಗೊಳ್ಳಲು ವಿಜಯಳ ಸೋದರ ಮಾವ ಕೇತ್ಕರ್ ಬಂದಿದ್ದರು. ವಿಜಯ ಅವರಿಗೆ ಗೆಳತಿಯ ಪರಿಚಯ ಮಾಡಿಕೊಟ್ಟಳು.

ಪೂನಾದಲ್ಲಿ ಗೆಳತಿಯರು ಹದಿನೈದು ದಿನವಿದ್ದರು. ಅಲ್ಲಿಯ ಪೇಷ್ವಾ ಪಾರ್ಕ್, ಸಾಂಬಾಜಿ ಪಾರ್ಕುಗಳನ್ನೂ, ಪಾರ್ವತಿ ಬೆಟ್ಟವನ್ನೂ ನೋಡಿದ್ದಾಯಿತು. ಬಾಯಾರಿದಾಗಲೆಲ್ಲಾ ರಸ್ತೆಯ ಪಕ್ಕದಲ್ಲಿದ್ದ 'ರಮಣೀಯ ರಸವಂತಿ'ಗೆ ನುಗ್ಗಿ, ಮಂಜಿನಗೆಡ್ಡೆ ಹಾಕಿದ ಕಬ್ಬಿನ ಹಾಲನ್ನು ಕುಡಿದ ಬರುತ್ತಿದ್ದರು.

ಪೂನಾದಿಂದ ಅವರು ಮುಂಬಯಿಗೆ ಹೊರಟರು. ಮುಂಬಯಿಯಂತಹ ಮಹಾನಗರವನ್ನು ನೋಡಿ ಮೀರ ಅಚ್ಚರಿಗೊಂಡಳು. ಆ ಜನ ಸಂಖ್ಯೆ, ಟ್ರಾಮು, ಬಸ್ಸುಗಳು, ಟ್ರೈನುಗಳು—ಯಾವಾಗಲೂ ತಲೆಚಿಟ್ಟು ಹಿಡಿಸುವಷ್ಟು ಗದ್ದಲ.

ಸೆಖೆ, ಬೆವರನ್ನಂತೂ ಸಹಿಸುವುದಕ್ಕೇ ಆಗುತ್ತಿರಲಿಲ್ಲ.

ಗೋಪಾಲನ ಮನೆಯಲ್ಲಿ ವಿಜಯ, ಮೀರ ಬಿಡಾರ ಹೂಡಿದ್ದರು. ಗೋಪಾಲನ ಮನೆಯನ್ನು ನೋಡಿ ಮೀರ

"ಎಷ್ಟೊಂದು ಪುಟ್ಟ ಮನೆ!" ಎಂದಳು.

"ಇಷ್ಟು ದೊಡ್ಡ ಮನೆ ಸಿಕ್ಕಿರೋದು ನನ್ನ ಪುಣ್ಯ" ಎಂದ ಗೋಪಾಲ. ರಾಧ ನಾಲ್ಕು ಮಕ್ಕಳ ತಾಯಾಗಿದ್ದಳು. ಹಿರಿಯವನು ಕಿಶೋರ ಹತ್ತು ವರ್ಷದವನಾಗಿದ್ದ.

ಗೋಪಾಲನ ಮೊದಲಿನ ಹುಡುಗಾಟಿಕೆ, ಸರಸ ಸ್ವಭಾವ ಮಾಯವಾಗಿದ್ದುದನ್ನು ಮೀರ ಗಮನಿಸಿದಳು.

"ಏನು ಸಂಸಾರ ತಾಪತ್ರಯವೋ" ಎಂದಿತು ಮನಸ್ಸು.

ಮುಂಬಯಿಯಲ್ಲಿ ನೋಡಬೇಕಾದ ಸ್ಥಳಗಳೆಲ್ಲವನ್ನೂ ನೋಡಿದ್ದಾಯಿತು.

ಮಲಬಾರ್ ಹಿಲ್ಸ್, ಮೆಟ್ರೋ, ಜೋಗೇಶ್ವರಿ, ಆರೆ ಕಾಲೋನಿ, ಮಿಂಟು, ಮೆರೀನ್ ಡ್ರೈವ್, ಗೇಟ್‌ವೇ ಆಫ್ ಇಂಡಿಯಾ, ಚೌಪಾತಿ, ತಾಜ್....ಬಲಾರ್ಡ್‌ಪೀರ್, ಸಾಂತಾಕ್ರೂಸ್ ನಿಲ್ದಾಣ....

ಅಲೆದು ಅಲೆದು ಗೆಳತಿಯರಿಬ್ಬರೂ ಹಣ್ಣಾದರು.

ಅವರು ಊರಿಗೆ ಹೊರಡುವ ಹಿಂದಿನ ದಿನ ಗೋಪಾಲನ ಮನೆಯಲ್ಲಿ ಭಾರಿ ಔತಣವಾಯಿತು. ಗೋಪಾಲ ಮೀರಳಿಗೂ, ವಿಜಯಳಿಗೂ ಸಿಲ್ಕಿನ ಸೀರೆಯೊಂದನ್ನು ಉಡುಗೊರೆಯಾಗಿ ಕೊಟ್ಟ.

ಅವರು ಮುಂಬಯಿನಿಂದ ನೇರವಾಗಿ ಮೈಸೂರಿಗೆ ಹೊರಟರು. ಮೈಸೂರಿಗೆ ಬರುವ ವೇಳೆಗೆ ಪರೀಕ್ಷೆಯ ಫಲಿತಾಂಶ ಬಂದಿತ್ತು. ಮೀರ, ವಿಜಯ, ಯಶೋದ ಪಾಸಾಗಿದ್ದರು. ಯಶೋದಳ ಊಹೆಯಂತೆ ಡಾಲಿ ಫೆಯಿಲಾಗಿದ್ದಳು.

ಇನ್ನೂ ಒಂದು ವಾರ ರಜವಿದ್ದುದರಿಂದ ಮೀರ ಮೈಸೂರಿನಲ್ಲಿ ಟ್ರೈನು ಬದಲಾಯಿಸಿ ಹಳ್ಳಿಗೆ ಹೊರಟಳು.

ಮುಂಬಾಗಿಲಿನಲ್ಲಿಯೇ ರೈತನೊಡನೆ ಮಾತನಾಡುತ್ತಿದ್ದ ಶಾಮು ಮೀರಳನ್ನು ನೋಡಿ ಆಶ್ಚರ್ಯದಿಂದ

" ಈ ಸಲ ಬರೋದಿಲ್ಲಾಂತ ಬರೆದಿದ್ದೆಯಲ್ಲಾ " ಎಂದ.

" ಅಲ್ಲಿಗೆ ಹೋಗಿ ಬಂದೆವು. ಇನ್ನೂ ಒಂದು ವಾರ ರಜ ಇದೆ...." ಎನ್ನುತ್ತಾ ಮೀರ ಒಳಗೆ ಹೋದಳು. ಶಾಮು ರೈತರನ್ನು ಕಳುಹಿಸಿ ಒಳಗೆ ಬಂದಾಗ ಮೀರ ಎಲ್ಲಿಯೂ ಕಾಣಲಿಲ್ಲ. ಅವನು

" ಅತ್ತೇ, ಎಲ್ಲಿ ಹೋದಳು ಮೀರ ?" ಎಂದ ವೆಂಕಮ್ಮನವರಿಗೆ.

" ಸ್ನಾನಮಾಡಿ ಮೂರು ದಿನವಾಗಿತ್ತಂತೆ. ಬಂದವಳೇ ಸ್ನಾನ ಮಾಡಲು ಹೋಗಿದಾಳೆ."

ಮೀರ ಸ್ನಾನ ಮುಗಿಸಿ ಹೊರಗೆ ಬರಲು ಮುಕ್ಕಾಲುಗಂಟೆಯಾಯಿತು. ರೈಲಿನ ಧೂಳು ಹೋಗಿಸಲು ಅವಳು ತಲೆಗೆ ಸ್ನಾನ ಮಾಡಿದ್ದಳು. ತನ್ನ ದಾರಿಯನ್ನೇ ಕಾಯುತ್ತಿದ್ದ ಶಾಮುವಿಗೆ

" ಬಂದುಬಿಟ್ಟೆ ಒಂದು ನಿಮಿಷ " ಎಂದವಳೇ ರೂಮಿಗೆ ಓಡಿದಳು. ಇಬ್ಬರೂ ಜೊತೆಯಾಗಿ ಊಟಕ್ಕೆ ಕುಳಿತರು. ಶಾಮುವಿಗಂತೂ ಮೀರಳನ್ನು ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ.

ಅವಳಿಂದ ಮೈಸೂರು ಗಂಧದ ಸಾಬೂನಿನ ವಾಸನೆ ಹೊರಹೊಮ್ಮುತ್ತಿತ್ತು. ತಲೆಗೂದಲಂತೂ ಅಂಕೆಯಿಲ್ಲದ ಹುಚ್ಚು ಕುದುರೆಯಂತೆ ಹಾರಾ

ಡುತ್ತಿತ್ತು. ಹಣೆಗೆ ಆತುರಾತುರವಾಗಿ ಮೂರು ಕಾಸಿನಗಲ ಕುಂಕುಮವಿರಿಸಿ ಕೊಂಡಿದ್ದಳು. ವೆಂಕಮ್ಮನವರು 'ದೇವರ ಪ್ರಸಾದ'ವೆಂದು ಕೊಟ್ಟಿದ್ದ ಚೂರು ಮಲ್ಲಿಗೆ ಹೂವು ಮುಡಿಯಲ್ಲಿ ಜೋಲುತ್ತಿತ್ತು. ಬಿಸಿಲಿನ ಅಲೆದಾಟ ದಿಂದ ಮೈ ಬಣ್ಣ ಸ್ವಲ್ಪ ಮಾಸಿದ್ದರೂ, ಮುಖ ಆರೋಗ್ಯದಿಂದ ಮಿನುಗು ತ್ತಿತ್ತು.

ಮೀರ ಶಾಮುವಿಗೆ ಯಾವಾಗಲೂ ಹೊಸ ಹುಡುಗಿಯಂತೆ ಕಾಣುತ್ತಿ ದ್ದಳು. ಮದುವೆಯಾಗಿ ಸುಮಾರು ಎಂಟೊಂಭತ್ತು ವರ್ಷಗಳಾಗಿದ್ದರೂ ಮದುವೆಯ ಮೊದಲು ಅವಳನ್ನು-ತನಗೆ ಟಿಕೀಟು ಮಾರಲು ಬಂದಾಗ—ನೋಡಿದಾಗ ತನ್ನಲ್ಲಿ ಮೂಡಿದ್ದ ಭಾವನೆಗಳೇ ಈಗಲೂ ಅವನಿಗೆ ಇದ್ದವು.

ಈಗಲೂ ಅದೇ ಆಕರ್ಷಣೆ, ಮೋಹ.

ಮದುವೆಯ ದಿನ ರಾತ್ರಿ ಅವಳು ತನ್ನ ಕೊಟಡಿಗೆ ಬಂದಾಗ ಅವಳಲ್ಲಿ ಎಷ್ಟು ಸೆಳೆತವಿತ್ತೋ ಈಗಲೂ ಅದೇ ಸೆಳೆತ.

ಒಂದೊಂದು ಸಲ ಅವಳು ತನ್ನನ್ನು ಬಹಳ ಪ್ರೀತಿಸುವವಳಂತೆ ಮಾತ ನಾಡಿಸುತ್ತಾಳೆ. ಮತ್ತೊಂದು ಸಲ ತನ್ನ ಪರಮದ್ವೇಷಿಯಂತೆ ದೂರ ಸರಿಯುತ್ತಾಳೆ. ಒಮ್ಮೆ ತನ್ನನ್ನು ಮಗುವಿನಂತೆ ಮುದ್ದು ಮಾಡಿದರೆ, ಮತ್ತೊಮ್ಮೆ ತಾನೇ ಅವನ ಮಗುವಿನಂತೆ ಮುದ್ದುಗರೆಯುತ್ತಾಳೆ. ಅತಿ ಬುದ್ಧಿವಂತಿಕೆಯಿಂದ ಮಾತನಾಡುವ ಅವಳ ಸುಂದರ ಬಾಯಿ ಮತ್ತೊಮ್ಮೆ ಅತಿ ಮೂರ್ಖತನದಿಂದ ಮಾತನಾಡುತ್ತದೆ. ಪ್ರೀತಿ, ಕನಿಕರ, ಮಮತೆ, ಸ್ನೇಹ ತುಳುಕಿಸುವ ಆ ಹೊಳಪುಗಣ್ಣುಗಳೇ ಮತ್ತೊಮ್ಮೆ ತಿರಸ್ಕಾರ, ತಾತ್ಸಾರವನ್ನು ಉಗಿಯುತ್ತವೆ. ತನ್ನ ಕೊರಳಿಗೆ ಹಾರವಾಗುವ ಆ ನೀಳ ತೋಳುಗಳೇ ಮತ್ತೊಮ್ಮೆ ಹತ್ತಿರ ಹೋದ ತನ್ನನ್ನು ಒರಟಾಗಿ ದೂರ ತಳ್ಳುತ್ತವೆ.

ಇಲಿಯನ್ನು ಆಟವಾಡಿಸುವ ಬೆಕ್ಕು—ಅವಳು. ಸುಂದರ, ಆದರೆ ಕ್ರೂರ.

"ಇದೇನು ನನ್ನ ಹೀಗೆ ನೋಡ್ತೀರಿ? ಎಲೇನ ನೋಡಿಕೊಂಡು ಸುಮ್ಮನೆ ಊಟಮಾಡಬಾರದೆ" ಮೀರ ನಸುಕೋಪದಿಂದ ವೆಂಕಮ್ಮನ ವರಿಗೆ ಕೇಳಿಸದಂತೆ ಪಿಸುಗುಟ್ಟಿದಳು.

ಶಾಮು ಎಚ್ಚರಗೊಂಡು ಹೇಳಿದ.

"ನಿನ್ನ ನೋಡಿ ಬಹಳ ದಿನವಾಯಿತು. ಸುಮಾರು ಒಂದು ವರ್ಷ ವಾಗಿರಬಹುದು. ನಿನ್ನ ಮುಖ ಹೇಗಿತ್ತು ಎನ್ನುವುದೇ ಮರೆತುಹೋಗಿತ್ತು. ಅದಕ್ಕೆ ಜ್ಞಾಪಿಸಿ...."

"ಊಟವಾದ ಮೇಲೆ ನಿಧಾನವಾಗಿ ಜ್ಞಾಪಿಸಿಕೊಳ್ಳುವಿರಂತೆ. ನೀವು 'ಸಾಕು' ಎನ್ನುವವರೆಗೂ ನಿಮ್ಮ ಮುಂದೇನೇ ಕುಳಿತಿರುತ್ತೇನೆ."

"ಆಮೇಲೆ ಕೊಟ್ಟ ಮಾತಿಗೆ ತಪ್ಪಬಾರದು."

ಊಟ ಮುಗಿದ ಮೇಲೆ ಮೀರ ಹೇಳಿದಳು.

"ಪೂನಾದಿಂದ ನಿಮಗೆ ಚೆಲುವೆಯೊಬ್ಬಳನ್ನು ತರುವುದಾಗಿ ಹೇಳಿದ್ದೆ. ಆದರೆ ಸರಿಯಾದವರು ಯಾರೂ ಸಿಕ್ಕಲಿಲ್ಲ."

"ನೀನು ತಪ್ಪು ತಿಳಿದುಕೊಂಡಿದೀಯ. ನೀನು ಚೆಲುವೇನ ತಂದಿದೀಯ ನನಗೆ."

"ಎಲ್ಲಿ? ಯಾರು?!

"ನೀನೇ" ಶಾಮು ನಕ್ಕು ಹೇಳಿದ.

"ನಾನಿಲ್ಲಿ ಒಂದು ವಾರ ಮಾತ್ರ ಇರುವ ಚೆಲುವೆ. ಆಮೇಲೆ ಹಾರಿ ಹೋಗುತ್ತೇನೆ."

"ಪರವಾಗಿಲ್ಲ. ಒಂದು ವಾರ ನಾನು ಹೇಳಿದಂತೆ ನೀನಿದ್ದರೆ ಸಾಕು. ಹಕ್ಕಿಗಳು ಬೆಳಗಿನಲ್ಲಿ ಎಲ್ಲಿ ಹಾರಿಹೋದರೂ ಸಂಜೆ, ತಮ್ಮ ಗೂಡಿಗೇ ಮರಳಿ ಬರುತ್ತವೆ" ಎಂದ ಶಾಮು.

"ನನಗಿಂತ ಒಂದು ವರ್ಷ ಮುಂದಿರುವ ಹುಡುಗನೊಬ್ಬ ಚೆನ್ನಾಗಿ ಕೈ ನೋಡ್ತಾನೆ. ಅವನು ನನ್ನ ಕೈ ನೋಡಿ 'ನೀವು ಒಳ್ಳೆಯ ಗೃಹಿಣಿಯಲ್ಲ' ಎಂದು ಹೇಳಿದ. ಅವನ ಮಾತು ನಿಜ ಅಲ್ಲವೇ ?"

"ಹೇಗೆ ಹೇಳ್ತೀಯ."

"ಒಳ್ಳೆಯ ಗೃಹಿಣಿ ಗಂಡನ್ನ ಬಿಟ್ಟು ಓದೋಕೆ ಹೋಗೋದಿಲ್ಲ. ಗಂಡನಿಗೆ ನೀನು ಬೇರೆ ಮದುವೆ ಮಾಡಿಕೋ ಎಂದು ಪೀಡಿಸುವುದಿಲ್ಲ. ಆದರೆ ನೀವು ಒಳ್ಳೆಯ ಗೃಹಸ್ಥರು. ಇಷ್ಟಾದರೂ ನನ್ನೇ ಕಟ್ಟಿಕೊಂಡು ಅಳ್ತೀರಿ."

"ನಿನ್ನ ಅಳ್ಸೋದಕ್ಕಾಗದ ಮೇಲೆ ಅಳಲೇಬೇಕು."

"ಇದೆಲ್ಲಿಯ ಹಣೆ ಬರಹ. ಹಾಯಾಗಿ ಬೇರೊಬ್ಬ ಹುಡುಗೀನ...."

"ತೆಗೆದೆಯಲ್ಲಾ ಹಳೇ ರಾಗಾನ."

"ನನಗಾಗಿ, ನಿಮಗಾಗಿ...."

"ಆವತ್ತು ನಿನ್ನ ಮಂಚದಿಂದ ತಳ್ಳಿದ್ದು ನೆನಪಿದೆಯೇ? ನೀನು ಹೀಗೆ ಮಾತನಾಡಿದರೆ ನಿನ್ನ ತಗೊಂಡು ಹೋಗಿ ಕೆರೆಗೆ ಎಸೆದು ಬರುತ್ತೇನೆ."

"ಹಾಗೆ ಮಾಡಿದರೆ ನಿಮಗೆ ಪುಣ್ಯ ಬರುತ್ತದೆ."

"ನನ್ನ ಯಾಕೆ ಹಿಂಸೆ ಮಾಡ್ತೀಯ ಮೀರಾ? ನೀನು ಇಲ್ಲಿ ಒಂದು ವಾರ ಮಾತ್ರ ಇರ್ತೀಯ. ಒಂದು ವಾರವಾದರೂ ನಾವು ಸುಖವಾಗಿರೋಣ. ಕೆಲಸಕ್ಕೆ ಬಾರದ ಮಾತುಗಳನ್ನಾಡಿ, ನನ್ನ ಮನಸ್ಸಿಗೂ ಬೇಜಾರು ಮಾಡಿ ನೀನೂ ಯಾಕೆ ಬೇಜಾರು ಮಾಡಿಕೊಳ್ತೀಯ?"

ಅವನ ದನಿಯಲ್ಲಡಗಿದ್ದ ನೋವನ್ನು ಗುರುತಿಸಿ ಮೀರ

"ಸಧ್ಯಕ್ಕೆ ನಿಮ್ಮನ್ನ ಬಿಟ್ಟಿದೀನಿ" ಎಂದಳು.

ಕಾಲೇಜಿನಲ್ಲಿ ಮೂರನೆಯ ವರ್ಷ ಪ್ರಾರಂಭವಾಯಿತು. ಈಗ ಬೆಳಗಿನ ಹೊತ್ತು ಆಸ್ಪತ್ರೆಯ ಡ್ಯೂಟಿ ಬೀಳುತ್ತಿತ್ತು. ಪ್ರತಿದಿನ ಬೆಳಿಗ್ಗೆ ಎಂಟೂವರೆ ಯಿಂದ ಹತ್ತು ಗಂಟೆಯವರೆವಿಗೆ, ತಮಗೆ ನೋಟೀಸ್ ಬೋರ್ಡಿನಲ್ಲಿ ಹಾಕಿದ್ದ ಸೂಚನೆಯಂತೆ ಒಂದೊಂದು ಗುಂಪು ಒಂದೊಂದು ವಾರ್ಡನ್ನು ಸುತ್ತಿ, ಅಲ್ಲಿರುವ ರೋಗಿಗಳ ರೋಗದ ಇತಿಹಾಸ, ಚಿಹ್ನೆ, ಪರಿಹಾರ ಇವುಗಳನ್ನು ಅರಿತುಕೊಳ್ಳಬೇಕಾಗಿತ್ತು. ಒಂದು ದಿನ ಚೆಲುವಾಂಬಾ ಆಸ್ಪತ್ರೆಗೆ ಹೋದರೆ ಮತ್ತೊಂದು ದಿನ ಕೃಷ್ಣರಾಜೇಂದ್ರ ಆಸ್ಪತ್ರೆಗೆ ಹೋಗಬೇಕಾಗಿತ್ತು.

ಕೊರಳಿಗೆ ಸ್ಟೆತಾಸ್ಕೋಪಿನ ಹಾರ ಹಾಕಿಕೊಂಡು ಓಡಾಡುವಾಗ ಮೀರಳಿಗೆ ತುಂಬಾ ಹೆಮ್ಮೆಯೆನಿಸುತ್ತಿತು.

ರೋಗಿಗಳ ರೋಗದ ಇತಿಹಾಸವೋ ಬಹಳ ವಿಚಿತ್ರವಾಗಿರುತ್ತಿತ್ತು. ಒಂದೇ ರೀತಿಯಿರುವ ಇಬ್ಬರು ರೋಗಿಗಳಿಗೆ ಒಂದೇ ಔಷಧ ಹಿಡಿಯುತ್ತಿರ ಲಿಲ್ಲ.

ಸ್ಪೆಷಲ್‌ವಾರ್ಡು, ಜನರಲ್ ವಾರ್ಡು ಎಲ್ಲದರಲ್ಲಿಯೂ ವಿದ್ಯಾರ್ಥಿ ಗಳು ಸ್ವತಂತ್ರವಾಗಿ ಓಡಾಡುತ್ತಿದ್ದರು. ಆದರೆ ಸ್ಪೆಷಲ್ ವಾರ್ಡಿನಲ್ಲಿರು ತ್ತಿದ್ದ ಹಲವರು ಈ ವಿದ್ಯಾರ್ಥಿಗಳನ್ನು ಒಳಗೆ ಕಾಲಿರಿಸಲು ಸಹ ಬಿಡು ತ್ತಿರಲಿಲ್ಲ.

ಒಂದು ಸಲ ಹಳ್ಳಿಯ ಗೌಡನೊಬ್ಬ ಆಸ್ಪತ್ರೆಗೆ ಬಂದ. ಅವನ ಗಂಟಲಿನ ಮೇಲೆ ಬೆಳೆದಿದ್ದ ತೆಂಗಿನಕಾಯಿ ಗಾತ್ರದ ಗಂಟನ್ನು ಸರ್ಜನರಿಗೆ ತೋರಿಸಲು ಅವನು ಬಂದಿದ್ದ.

ಸರ್ಜನರ ಹಿಂದೆ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಗುಂಪೂ ಬಂದಿತು. ಸರ್ಜನ್ ಅವನ ಗಂಟನ್ನು ಪರೀಕ್ಷಿಸಿ ವಿದ್ಯಾರ್ಥಿಗಳ ಕಡೆ ತಿರುಗಿ

"ಈ ಗೌಡ ಮೊದಲೇ ಬಂದು ಆಪರೇಷನ್ ಮಾಡಿಸಿಕೊಂಡಿದ್ದರೆ ಚೆನ್ನಾಗಿತ್ತು. ಮೊದಲು ಅಲಕ್ಷ್ಯ ಮಾಡಿ ಈಗ ಅತಿ ದೊಡ್ಡದಾದ ಮೇಲೆ ಹಿಂಸೆ ತಡೆಯಲಾರದೆ ಬಂದಿದ್ದಾನೆ. ಈ ಆಪರೇಷನ್ ಮಾಡುವುದು ಕಷ್ಟ.

ಯಾಕೆಂದರೆ ಈ ಗಂಟಿನಲ್ಲಿ ರಕ್ತದ ಸರಬರಾಜು ಬಹಳ ಆಗುತ್ತದೆ. ಆದ್ದರಿಂದ ಆಪರೇಷನ್ ಮಾಡುವಾಗಲೇ ಅತೀ ರಕ್ತಸ್ರಾವವಾಗಿ ಇವನು ಸತ್ತು ಹೋದರೂ ಹೋಗಬಹುದು. ನನ್ನ ಕೈಲಾದ ಪ್ರಯತ್ನ ಮಾಡುತ್ತೇನೆ" ಎಂದು ಇಂಗ್ಲಿಷಿನಲ್ಲಿ ಹೇಳಿ, ಗೌಡನ ಕಡೆ ತಿರುಗಿ ಅವನ ಬೆನ್ನು ತಟ್ಟಿ ನಗುತ್ತಾ

"ನಾನು ಆಪರೇಷನ್ ಮಾಡ್ತೀನಿ. ಏನೂ ಹೆದರಿಕೋಬೇಡ. ಎಲ್ಲಾ ಸರಿಯಾಗುತ್ತದೆ" ಎಂದರು.

"ಪ್ರಾಣಕ್ಕೇನೂ ಭಯಲ್ಲವಾ ಬುದ್ಧಿ ?"

"ಏನೂ ಭಯವಿಲ್ಲ."

ಡಾಕ್ಟರ ಅಭಯ ನುಡಿ ಕೇಳಿದ ಗೌಡ ಸುಪ್ರೀತನಾಗಿ ಎದ್ದು ಹೋದ. ಗೊತ್ತಾದ ದಿನದಲ್ಲಿ ಆಪರೇಷನ್ ಮೊದಲಾಯಿತು. ವಿದ್ಯಾರ್ಥಿಗಳು 'ಮಾಸ್ಕು'ಗಳನ್ನು ಧರಿಸಿ, ಉಸಿರು ಬಿಗಿಹಿಡಿದು ಸರ್ಜನರ ಕೈ ಚಳಕವನ್ನು ನೋಡುತ್ತಾ ನಿಂತರು. ಗೌಡನಿಗೆ ಕ್ಲೋರೋಫಾರಂ ಕೊಟ್ಟು ಜ್ಞಾನ ತಪ್ಪಿಸಲಾಗಿತ್ತು.

ಗಂಟಿಗೆ ಚಾಕು ಹಾಕಿ ಅರ್ಧ ಅಂಗುಲ ಕತ್ತರಿಸುವುದರಲ್ಲಿ ರಕ್ತದಿಂದ ಆಪರೇಷನ್ನಿನ ಮೇಜೆಲ್ಲಾ ಕೆಂಪಗಾಗಿ, ರಕ್ತ ನೆಲದ ಮೇಲೆ ಸೋರ ತೊಡಗಿತು.

ಸರ್ಜನರ ಬೆರಳುಗಳು ಮರಗಟ್ಟಿದವು. ಅವರ ಕಣ್ಣುಗಳು ಕಿರಿದಾದವು. ಗಂಟಿನಲ್ಲಿ ನೂರರಲ್ಲಿ ಒಂದು ಭಾಗವನ್ನೂ ಅವರು ಕೂಯ್ದಿದ್ದರಲಿಲ್ಲ. ಆಗಲೇ ಅವನ ದೇಹದಿಂದ ರಕ್ತ ಪ್ರವಾಹವಾಗಿ ಹರಿದು ಬರುತ್ತಿತ್ತು.

ನಿಟ್ಟುಸಿರಿನೊಡನೆ ಸರ್ಜನ್ ಹೇಳಿದರು.

"ಆಪರೇಷನ್ ಸಾಧ್ಯವಿಲ್ಲ. ಆಪರೇಷನ್ ಪೂರ್ತಿ ಮುಗಿಯುವುದರೊಳಗೆ ಅವನು ಈ ಸ್ಥಳದಲ್ಲಿಯೇ ಸತ್ತು ಹೋಗುತ್ತಾನೆ. ಆದುದರಿಂದ ಯಾತನೆ ಅನುಭವಿಸಿಯಾದರೂ ಕೆಲವು ದಿನಗಳು ಈತ ಬದುಕಿರಲಿ" ಎನ್ನುತ್ತಾ ನರ್ಸ್ ಕಡೆ ತಿರುಗಿ

"ಬ್ಯಾಂಡೇಜ್ ಕಟ್ಟಿಬಿಡಿ" ಎನ್ನುತ್ತಾ ಕೈ ತೊಳೆದು ಹೊರಗೆ ಬಂದರು.

ವಿದ್ಯಾರ್ಥಿಗಳ ಗುಂಪೂ ಅವರ ಹಿಂದೆಯೇ ಹೊರಕ್ಕೆ ಬಂತು.

ಸರ್ಜನ್ ಸಿಗರೇಟು ಎಳೆಯುತ್ತಾ ಹೇಳಿದರು.

"ಗೌಡನಿಗೆ ಎಚ್ಚರವಾದ ಮೇಲೆ ಅವನಿಗೆ ಬಹಳ ನಿರಾಶೆಯಾಗ

ಬಹುದು. ಆದರೆ ನಾನೇನು ಮಾಡಲಿ ? ನಾನಾಗಿಯೇ ಆಪರೇಷನ್ ಮಾಡಿ ಅವನನ್ನು ಕೊಲ್ಲಲಾರೆ. ಯಶಸ್ವಿಯಾಗಿ ಆಪರೇಷನ್ ಮಾಡಲಾಗಲಿಲ್ಲಾ ಎಂಬ ಕೊರಗು ಮಾತ್ರ ನನ್ನಲ್ಲುಳಿಯಿತು."

ಸಿಗರೇಟಿನ ಹೊಗೆ ಬಿಡುತ್ತಾ ಅವರು ಮುಂದುವರಿಸಿದರು.

"ಗೌಡ, ಅವನ ಹೆಂಡತಿ ಮಕ್ಕಳಿಗೆ ನಾನು ಸಾಕಷ್ಟು ಭರವಸೆ ಕೊಟ್ಟದ್ದೆ! ಈಗ ಎಲ್ಲಾ ನೀರಿನಲ್ಲಿ ಹೋಮ ಮಾಡಿದಂತಾಯಿತು. ನನ್ನ ಕೈ ಚಳಕ, ಜಾಣ್ಮೆ ಎಲ್ಲವೂ ಈ ದಿನದ ಮಟ್ಟಿಗೆ, ಗೌಡನ ಮಟ್ಟಿಗೆ ವ್ಯರ್ಥ ವಾಯಿತು."

ವಿದ್ಯಾರ್ಥಿಗಳು ಮಾತನಾಡುತ್ತಾ ನಿಂತಿದ್ದಂತೆಯೇ ಟ್ರಾಲಿಯಲ್ಲಿ ಜ್ಞಾನವಿಹೀನನಾಗಿದ್ದ ಗೌಡನನ್ನು ತಳ್ಳಿಕೊಂಡು ಹೋಗಿ, ವಾರ್ಡ್‌ಬಾಯ್‌ಗಳು ಅವನನ್ನು ವಾರ್ಡಿನಲ್ಲಿ ಮಲಗಿಸಿದರು.

ವಿದ್ಯಾರ್ಥಿಗಳು ಅಲ್ಲಿಂದ ಚೆದರಿದರು.

ಆಸೆ, ಭರವಸೆ—ಇವುಗಳೇ ರೋಗಿಗಳನ್ನುಳಿಸುವ ಜೀವಮಂತ್ರಗಳು. ಸರ್ಜನ್ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು—

"ರೋಗಿ ಕೊನೆಯ ಉಸಿರು ಎಳೆಯುತ್ತಿರುವಾಗಲೂ ಅವನಿಗೆ ಧೈರ್ಯ, ಭರವಸೆ ಕೊಡಿ. ರೋಗಿಯಾಗಲಿ, ವೈದ್ಯನಾಗಲಿ ಸಹನೆ, ಭರವಸೆಯನ್ನು ಎಂದಿಗೂ ಕಳೆದುಕೊಳ್ಳಬಾರದು. ನಿರಂತರ ಪ್ರಯೋಗದಲ್ಲೇ ವೈದ್ಯನ ಜೀವನ ಕಳೆಯುತ್ತದೆ. ಆದರೆ ಭರವಸೆ ಅದರ ಬೆಂಗಾವಲಿಗಿರಬೇಕು. ನಿಮ್ಮಲ್ಲಿ ಆತ್ಮವಿಶ್ವಾಸವಿರಲಿ. ಅದನ್ನೆಂದಿಗೂ ಕಳೆದುಕೊಳ್ಳಬೇಡಿ. ಈ ಪ್ರಪಂಚದಲ್ಲಿ ನಾವು ಮಾಡಲಾಗದಿರುವುದು ಯಾವುದೂ ಇಲ್ಲ. ಕಣ್ಣಿಲ್ಲದವನಿಗೆ ಕಣ್ಣು, ಕೈಕಾಲಿಲ್ಲದವನಿಗೆ ಕೈಕಾಲು ನೀಡಿ ವಿಜ್ಞಾನ ನಿಧಾನವಾಗಿ ನಿಸರ್ಗವನ್ನು ಗೆಲ್ಲುತ್ತಿದೆ. ನಿಸರ್ಗ ನಮ್ಮ ಅಡಿಯಾಳಾಗದಿದ್ದರೂ, ಸಾಕಷ್ಟು ನಮ್ಮ ಕೈವಶವಾಗಿದೆ."

ಸರ್ಜನರ ಮಾತು ಕೇಳುತ್ತಾ ಮೀರ ತನ್ನನ್ನು ತಾನೆ ಮರೆಯುತ್ತಿದ್ದಳು.

ವಿಜಯ ಪರಾಂಜಪೆ ತನ್ನನ್ನು ತಾನೇ ಮರೆತಿದ್ದಳು—ಬೇರೊಂದು ರೀತಿಯಲ್ಲಿ. ಮುಂಬಯಿ, ಪೂನಾ ಪ್ರವಾಸ ಮುಗಿಸಿಕೊಂಡು ಬಂದ ಮೇಲೆ ವಿಜಯ ತುಂಬಾ ಬದಲಾಯಿಸಿದ್ದಳು. ಅವಳು ಮೊದಲಿನಂತೆ ಕಾಲೇಜಿಗೆ ಬರುತ್ತಿದ್ದಳು, ಮೊದಲಿನಷ್ಟೇ ಸ್ನೇಹದಿಂದ ಮೀರಳೊಡನೆ ಮಾತನಾಡುತ್ತಿದ್ದಳು. ಆದರೂ ಅವಳಲ್ಲಿ ಏನೋ ಬದಲಾವಣೆಯಾಗಿದೆಯೆಂದು ಮೀರಳಿಗೆ ತೋರಿತು.

ಕ್ಲಾಸಿನಲ್ಲಿ ಪಾಠ ಕೇಳುತ್ತಿದ್ದಂತೆಯೇ ವಿಜಯಳ ಕಣ್ಣುಗಳು ಕನಸು ಕಾಣುತ್ತಿದ್ದವು. ಅನ್ಯಮನಸ್ಕತೆ ದಿನದಿನಕ್ಕೆ ಹೆಚ್ಚಾಯಿತು.

ಒಂದು ದಿನ ಚೆಲುವಾಂಬಾ ಆಸ್ಪತ್ರೆಯ ಜನರಲ್ ವಾರ್ಡಿನಲ್ಲಿ ಮೀರ ರೋಗಿಗಳ ಟೆಂಪರೇಚರನ್ನು ನೋಡುತ್ತಿದ್ದಳು. ವಿಜಯ ಮಾತ್ರ ವಾರ್ಡಿನೊಳಗೆ ಬರದೇ ಹೊರಗೆ ಕಾರಿಡಾರಿನಲ್ಲಿಯೇ ನಿಂತಿದ್ದಳು.

ಗೋಪೀನಾಥ ತನ್ನ ಮತ್ತೊಬ್ಬ ಗೆಳೆಯನೊಡನೆ ಅಲ್ಲಿಗೆ ಬಂದ.

"ನಮಸ್ಕಾರ. ನಿಮ್ಮ ಪ್ರವಾಸ ಮುಗಿದ ಮೇಲೆ ನೋಡಲೇ ಇಲ್ಲ."

"ನಮಸ್ಕಾರ."

"ಮೀರ ಎಲ್ಲಿ? ಅವರು ಬರಲಿಲ್ಲವೇನು?"

"ಬಂದಿದ್ದಾಳೆ. ಒಳಗೆ ಚಾರ್ಜ್‌ಷೀಟುಗಳನ್ನು ನೋಡುತ್ತಿದ್ದಾಳೆ.

"ನಾವೂ ಹೋಗೋಣ. ಬನ್ನಿ."

ಗೋಪೀನಾಥ ತನ್ನ ಪಕ್ಕದಲ್ಲಿ ನೋಡಿದ. ಅದಾವ ಮಾಯದಲ್ಲೋ ಅವನ ಸ್ನೇಹಿತ ಒಳಗೆ ಹೊರಟುಹೋಗಿದ್ದ.

"ನೀವು ಹೋಗಿ ಬನ್ನಿ. ಅದೇಕೋ ಈ ದಿನ ನನಗೆ ತಲೆನೋವು ಬಂದಿದೆ."

"ನೀವು ಬಂದರೆ ನಾನೂ ಹೋಗುತ್ತೇನೆ."

"ನಾನು ಬರುವುದಿಲ್ಲ."

"ಹಾಗಾದರೆ ನಾನೂ ಹೋಗುವುದಿಲ್ಲ."

"ಹೀಗೆ ಹೇಳಿದರೆ ಹೇಗೆ? ಎಷ್ಟಾದರೂ ನೀವು ನಾಲ್ಕನೆ ವರ್ಷದಲ್ಲಿರುವಿರಿ. ನಮಗಿಂತಲೂ ನಿಮ್ಮ ಜವಾಬ್ದಾರಿ ಹೆಚ್ಚಾಗಿದೆ."

"ಇವತ್ತೊಂದು ದಿನ ಹೋಗದಿದ್ದರೆ ಏನೂ ಆಗುವುದಿಲ್ಲ."

"ಸರಿ. ನಿಮ್ಮಿಷ್ಟ."

ಇಬ್ಬರೂ ಮಾತನಾಡುತ್ತಾ ನಿಧಾನವಾಗಿ ಅಲ್ಲಿಂದ ಸರಿದರು.

ವಿಜಯಳ ಕೈ ಅವಳ ಸರದೊಡನೆ ಆಟವಾಡುತ್ತಿತ್ತು. ಗೋಪೀನಾಥನ ಎತ್ತರದ ಎದುರಿಗೆ ಪುಟ್ಟ ವಿಜಯ ಮಗುವಿನಂತೆ ಕಾಣುತ್ತಿದ್ದಳು.

"ನಾನಿನ್ನೂ ನಿಮ್ಮ ಸಾಲ ತೀರಿಸಿಯೇ ಇಲ್ಲ."

ವಿಜಯ ಕೊರಳೆತ್ತಿ "ಯಾವುದು?" ಎಂದಳು.

"ನಿಮ್ಮ ಕೈನ ಸರಿಯಾಗಿ ನೋಡುತ್ತೇನೆಂತ ಹೇಳಿದ್ದೆ. ಮರೆತಿರಾ?"

ವಿಜಯ ನಾಚಿದಳು. ತಲೆ ಬಗ್ಗಿಸಿಕೊಂಡೇ ಹೇಳಿದಳು.

"ಓ ಅದೇನು ಪರವಾಗಿಲ್ಲ ಬಿಡಿ. ನನಗೀಗ ಕೈತೋರಿಸಿಕೊಳ್ಳುವುದರಲ್ಲಿ ಶ್ರದ್ಧೆ ಇಲ್ಲ."

"ಆದರೆ ನನಗೆ ನಿಮ್ಮ ಕೈ ನೋಡಬೇಕೆಂದು ಆಸೆಯಿದೆ. ಇನ್ ವೈ ಓನ್ ಇಂಟರೆಸ್ಟ್...."

ವಿಜಯ ತಲೆ ಅಲುಗಿಸಿ "ಊಹೂಂ" ಎಂದಳು.

"ನೀವು ಇಷ್ಟೊಂದು ಹಟಮಾಡ್ತೀರೀಂತ ನನಗೆ ತಿಳಿದಿರಲಿಲ್ಲ. ನಾನು ಅಂದುಕೊಂಡಿದ್ದೆ—ನೀವು ಬಹಳ ಸಬ್‌ಮಿಸಿವ್ ಅಂತ."

"ಈಗಲಾದರೂ ನಾನು ಸಬ್‌ಮಿಸಿವ್ ಅಲ್ಲಾಂತ ತಿಳಿದಿರಬಹುದು."

"ಪ್ಲೀಸ್...." ಅವನು ರಾಗ ಎಳೆದ.

"ಆಗಲಿ. ಆದರೆ ಈ ಆಸ್ಪತ್ರೆಯ ಕಾಂಪೌಂಡಿನಲ್ಲಿಯೇ ಕುಳಿತು ನನ್ನ ಕೈ ನಿಮಗೆ ತೋರಿಸಲಾರೆ. ಆಮೇಲೆ ಒಂದು ನಿಮಿಷದಲ್ಲಿ ಇಲ್ಲಿ ಗುಂಪು ಸೇರುತ್ತದೆ."

"ಗಾಯಿತ್ರಿ ಭವನ್‌ಗೆ ಹೋಗೋಣ. ಬರುವಿರಾ?"

ಇಬ್ಬರೂ ಗಾಯಿತ್ರಿ ಭವನ್‌ಗೆ ನಡೆದರು. ವಿಜಯಳ ಮನಸ್ಸಿನಲ್ಲಿ ನಾನಾ ಯೋಚನೆಗಳು ಮೂಡಿ ಮರೆಯಾದವು.

ಇದೇನು ಹಚ್ಚು ತನಗೆ! ಯಾವುದೋ ಕನಸಿನ ಸುಳಿಗೆ ಸಿಕ್ಕಿ ನಾನೇಕೆ ಹೀಗೆ ವರ್ತಿಸಬೇಕು? ತನ್ನ ಗುರಿ, ಆದರ್ಶ ಎಲ್ಲವನ್ನೂ ಮರೆಸಿ, ತನ್ನನ್ನು ಇಷ್ಟು ದೀನಳನ್ನಾಗಿ ಮಾಡಿರುವುದು ಯಾವುದು ಅದು?

ಗೋಪೀನಾಥನೆ? ಅವನ ಚಲುವಾದ ಮುಖವೆ? ಎತ್ತರವಾದ ಭವ್ಯ ನಿಲುವೇ? ಇಬ್ಬರೂ ಜೊತೆಯಾಗಿ ಹೋಟಲಿನ ಮೆಟ್ಟಲುಗಳನ್ನೇರಿದರು. ಗೋಪಿಯ ಕಾಲುಗಳು ಒಟ್ಟಿಗೆ ಎರಡು ಮೂರು ಮೆಟ್ಟಲುಗಳನ್ನು ಹಾರುತ್ತಿದ್ದವು.

ಗೋಪೀನಾಥ ಎಂತಹ ಹುಡುಗನೋ ಏನೋ? ತಾನು ಅವನೊಡನೆ ಬಂದುದು ಸರಿಯೇ? ನಾನು ಬರಬಾರದಿತ್ತು. ತನ್ನ ಮನೋದೌರ್ಬಲ್ಯವನ್ನು ತಾನಾಗಿಯೇ ಪ್ರದರ್ಶಿಸಿಕೊಂಡಂತಾಯಿತು. ನಾನು ಅವನೊಡನೆ ಒಂಟಿಯಾಗಿ ಬಂದುದು ಸರಿಯೇ? ನಾಳೆ ಉಳಿದ ಹುಡುಗರು ತಮ್ಮನ್ನು ಕೀಟಲೆ ಮಾಡುವುದಿಲ್ಲವೆ? ತನಗೆ ಅದೆಷ್ಟು ಧೈರ್ಯ ಬಂದಿದೆ! ಹುಡುಗರು ರೇಗಿಸಬಹುದೆಂಬ ಭೀತಿಯನ್ನೂ ಮೆಟ್ಟಿ ತನ್ನನ್ನು ಇಲ್ಲಿಗೆ ಕರೆತಂದ ಶಕ್ತಿ ಯಾವುದು?

ವಿಜಯ ತನ್ನ ಭಾವನೆಗಳಲ್ಲಿ ಮುಳುಗಿದ್ದಳು. ತಗ್ಗಿದ್ದ ಅವಳ ಮುಖ ಅವನಿಗೆ ಸರಿಯಾಗಿ ಕಾಣುತ್ತಿರಲಿಲ್ಲ. ಕಪ್ಪು ಕೂದಲಿನ ಕಾರ್ಮೋಡ, ಭುಜದ ಮೇಲೆ ಎರಡಾಗಿ ಒಡೆದ ಕಪ್ಪು ಜಡೆಯ ಜಲಪಾತ, ಉಂಗುರದ

ಲೋಲಕ್ಕುಗಳು. ಇವುಗಳ ಹೊರತು ಅವನಿಗೆ ಅವಳು ಕಾಣಲಿಲ್ಲ.

ಈ ಹುಡುಗಿಯಲ್ಲಿ ತನಗಿರುವ ಆಕರ್ಶಣೆಯಾದರೂ ಯಾವುದು? ತನ್ನ ಜಾತಿಯಲ್ಲ, ಕುಲವಲ್ಲ. ಕೊನೆಗೆ ತನ್ನ ಭಾಷೆಯು ಅವಳಿಗೆ ಸರಿಯಾಗಿ ತಿಳಿಯುವುದಿಲ್ಲ. ತನ್ನ ಮನಸ್ಸಿನ ಏಕಾಗ್ರತೆಯನ್ನು ನಾಶಮಾಡಿದ ಈ ಪುಟ್ಟ ಹುಡುಗಿ ಯಾರು? ಐದು ಅಡಿಯಿರುವ ಇವಳ ಪುಟ್ಟ ದೇಹದ ಶಕ್ತಿ ಅಷ್ಟೊಂದು ದೊಡ್ಡದೇ? ತನಗೆ ಯಾವಾಗಲೂ ಹುಡುಗಿಯರಲ್ಲಿ ಆಸಕ್ತಿಯಿರಲಿಲ್ಲ. ಹುಡುಗಿಯರನ್ನು ದ್ವೇಶಿಸುತ್ತಿರಲಿಲ್ಲವಾದರೂ, ಇತರ ಹುಡುಗರಂತೆ ಹುಡುಗಿಯರೆಂದರೆ ಆಸೆ ಪಡುತ್ತಿರಲಿಲ್ಲ. ಆದರೆ ಈಗ ಎಲ್ಲವೂ ಹೇಗೆ ಬದಲಾವಣೆಯಾಯಿತು! ಹುಡುಗಿಯರೊಡನೆ ಏನಾದರೂ ನೆಪ ಹಾಕಿಕೊಂಡು ಓಡಾಡುವ ಹುಡುಗರನ್ನು ಕಂಡರೆ ತನಗೆ ಎಷ್ಟು ತಿರಸ್ಕಾರವಿತ್ತು? ಈಗ?

ಇಬ್ಬರೂ ಮೆಟ್ಟಲುಗಳನ್ನೇರಿ ಪುಟ್ಟ ರೂಮೊಂದರಲ್ಲಿ ಹೋಗಿ ಕುಳಿತರು. ಮಾಣಿ ಬಂದು ನಿಂತು "ಏನು ತರಲಿ ಸಾರ್?" ಎಂದ.

"ಏನು ತಗೋತೀರಿ."

"ನನಗೇನೂ ಬೇಡ. ನೀವೇನುಬೇಕಾದರೂ ತರಿಸಿಕೊಳ್ಳಿ."

"ಎರಡು ಕಾಫಿ ತನ್ನಿ."

"ನಾನು ಮಹಾರಾಷ್ಟ್ರದವಳೆಂಬುದನ್ನು ಮರೆತಿರೇನೊ? ನಾವು 'ಚಾಯ್' ಕುಡಿಯುವುದು. ಕಾಫಿ ಸೇರುವುದಿಲ್ಲ."

"ಎರಡು 'ಚಾಯ್' ತನ್ನಿ."

"ನಿಮಗೇಕೆ ಟೀ? ಈ ಕಡೆ ಟೀ ಯಾರೂ ಕುಡಿಯುವುದಿಲ್ಲ."

"ಪರವಾಗಿಲ್ಲ, ನಿಮಗೆ ಕಂಪೆನಿ ಕೊಡಲು ಕುಡಿಯುತ್ತೇನೆ."

ಮಾಣಿ ಎರಡು ಬಟ್ಟಲುಗಳಲ್ಲಿ 'ಟೀ' ತಂದಿರಿಸಿ ಹೋದ.

ಗೋಪಿ ಆಸಕ್ತಿಯಿಂದ ಹೇಳಿದ "ನಿಮ್ಮ ಕೈ ತೋರಿಸಿ."

ಅವಳು ಮೇಜಿನ ಮೇಲೆ ತನ್ನ ಕೈ ನೀಡಿ, ಹಸ್ತವನ್ನು ಬಿಚ್ಚಿದಳು.

"ಸ್ವಲ್ಪ ತಾಳಿ" ಎನ್ನುತ್ತಾ ಗೋಪಿ ಜೋಬಿನಿಂದ ಸಿಲ್ಕಿನ ಕರವಸ್ತ್ರವನ್ನು ತೆಗೆದು ಮೇಜಿನ ಮೇಲೆ ಹರಡಿ "ಅದರ ಮೇಲೆ ಕೈಯಿಡಿ" ಎಂದ.

ದೇವರ ಪೂಜೆಗೆ ಅಣಿಮಾಡಿಕೊಳ್ಳುವ ಭಕ್ತನ ಭಕ್ತಿಯಿತ್ತು ಅವನ ಮುಖದಲ್ಲಿ. ವಿಜಯ ಮತ್ತೆ ಕೈ ನೀಡಿದಳು. ಗೋಪಿ ತನ್ನ ಜೇಬನ್ನು ತಡಕಾಡಿ ಪೆನ್ಸಿಲ್ಲನ್ನು ಹೊರಗೆ ತೆಗೆದು, ಅವಳ ಹಸ್ತರೇಖೆಗಳನ್ನು ನೋಡತೊಡಗಿದ.

ಕೈ ನೋಡುವ ನೆಪದಲ್ಲಿ ಆತ ಕೈ ಹಿಡಿಯಬಹುದಿತ್ತು. ಆದರೆ ಆತ ಎಷ್ಟು ಗೌರವ, ಸಭ್ಯತನದಿಂದ ವರ್ತಿಸುತ್ತಾನೆ!

ಗೋಪಿ ತಲೆ ಬಗ್ಗಿಸಿ ಅವಳ ಕೈ ನೋಡುತ್ತಿದ್ದ. ಅವಳು ಅವನ ಮುಖವನ್ನು ನೆಟ್ಟನೋಟದಿಂದ ನೋಡುತ್ತಿದ್ದಳು.

ದಟ್ಟವಾಗಿ ಬೆಳೆದ ಕೂದಲಿನ ಕ್ರಾಪು, ಕಪ್ಪು ದಪ್ಪ ಹುಬ್ಬುಗಳು, ನೇರವಾದ ಮೂಗು, ಹೊಳಪಾದ, ಅಷ್ಟೇನು ವಿಸ್ತಾರವಲ್ಲದ ಕಣ್ಣುಗಳು, ತುಂಬಿದ ತುಟಿಗಳು, ಸಾದುಗಪ್ಪು ಬಣ್ಣ, ರೋಮ ತುಂಬಿದ ಕೈ ಇವುಗಳನ್ನು ನೋಡುತ್ತಾ ವಿಜಯ ಮೈಮರೆತಳು.

ತನಗಿಂತ ಒಂದೆರಡು ವರ್ಷ ದೊಡ್ಡವನಿರಬಹುದು ಅಷ್ಟೆ. ಅವನನ್ನು ನೋಡುತ್ತಿದ್ದಂತೆಯೇ ಯಾವುದೋ ಭಾವನೆಯಿಂದ ಅವಳ ಹೃದಯ ಕರಗಿ ನೀರಾಯಿತು.

ಇವನಾರೋ ಏನೋ? ಇವನಿಗಾಗಿ ತನ್ನ ಹೃದಯವೇಕೆ ಮಿಡಿಯುತ್ತಿದೆಯೋ? ಎಲ್ಲಿಯೋ ಹುಟ್ಟಿ, ಎಲ್ಲಿಯೋ ಬೆಳೆದು, ತನಗೇನೇನೂ ಅಲ್ಲದ ಈತನಿಗಾಗಿ ತಾನೇಕೆ ತವಕಿಸಬೇಕು?

ಗೋಪಿ ಪೆನ್ಸಿಲ್ಲಿನಿಂದ ಅವಳ ಕೈ ರೇಖೆಗಳನ್ನು ಬಿಡಿಸಿ ನೋಡುತ್ತಿದ್ದ. —ಅವಳ ಬೆರಳುಗಳು, ಬಳೆಯಿಲ್ಲದ ದುಂಡುಗೈ, ಮೊಳಕೈನವರೆಗೆ ಬಂದಿದ್ದ ರವಿಕೆಯ ತೋಳು, ಹವಳದ ಸರ—

ಅಲ್ಲಿಂದ ಮುಖವನ್ನು ನೋಡುವ ಸಾಹಸ ಬರಲಿಲ್ಲ ಗೋಪಿಗೆ. ಅವಳ ಮುಖ ನೋಡಿದರೆ ಅಲ್ಲಿಂದ ತನ್ನ ಕಣ್ಣುಗಳನ್ನು ಕೀಳಲಾಗುವುದಿಲ್ಲ ವೆಂಬುದು ಅವನಿಗೆ ತಿಳಿದಿತ್ತು. ಅವನ ಕಣ್ಣುಗಳು ಧೀರನನ್ನು ಎದುರಿಸಲಾರದೆ ಓಡುವ ಹೇಡಿಯಂತೆ ಅವಳ ಮುಖದಿಂದ ಓಡುತ್ತಿದ್ದವು. ಅವನು ಅವಳ ಕಣ್ಣುಗಳನ್ನು ಪ್ರಯಾಸಪಟ್ಟು ತಪ್ಪಿಸುತ್ತಿದ್ದ.

ಅವನು ಅವಳ ಕೈಗಳಲ್ಲಿ ಅದೇನು ನೋಡುತ್ತಿದ್ದನೋ? ಇದುವರೆಗೂ ಅವನು ಒಂದು ಮಾತನಾಡಿರಲಿಲ್ಲ. ಅವನ ಕಣ್ಣುಗಳು ಅಂಗೈ ಮೇಲೆ ನೆಟ್ಟಿದ್ದವು. ಅವಳ ಅಂಗೈ ನಾಚಿತು. ಅದರ ಮೇಲೆ ಬೆವರಿನ ಹನಿಗಳು ಮೂಡಿದವು. ಇನ್ನು ಆತ ಮುಖ ನೋಡಿದರೆ ಗತಿಯೇನು?

ವಿಜಯ ಕೈ ಹಿಂದಕ್ಕೆಳೆದುಕೊಂಡು, ವಸ್ತ್ರದಿಂದ ಕೈಯನ್ನು ಒರೆಸಿಕೊಂಡು ಮತ್ತೆ ನೀಡಿದಳು.

" ಹೋಗಿ. ನೀವೇನೂ ಹೇಳುವುದೇ ಇಲ್ಲ. ಸುಮ್ಮನೆ ಕೈ ನೋಡ್ತಾ ಇದೀರಿ. ಅಥವಾ ನನ್ನ ಕೈಯಲ್ಲಿ ಎಷ್ಟು ಮೂಳೆಗಳಿವೆ, ನರಗಳಿವೆ, ರಕ್ತ

ನಾಳಗಳಿದೇಂತ ನೋಡ್ತಿದ್ದೀರೇನೋ ?"

"ಹಾಗಲ್ಲ. ನಿಮಗೆ ಸರಿಯಾಗಿ ಹೇಳಬೇಕಾದರೆ ರೇಖೆಗಳನ್ನು ಚೆನ್ನಾಗಿ ಸ್ಟಡಿ ಮಾಡಬೇಕು."

"ನೀವೇನು ಹೇಳಿದರೂ ನಾನು ನಂಬಬೇಕು ಅಲ್ಲವೇ ?" ವಿಜಯ ನಕ್ಕಳು.

"ಈ ಬೆರಳಿನ ಮೇಲೆ ಸಣ್ಣ ಗಾಯವಾಗಿದೆಯಲ್ಲಾ ಅದೇನು ?"

"ಬೆಳಿಗ್ಗೆ ಆಲೂಗೆಡ್ಡೆ ಹೆಚ್ಚಲು ಹೋಗಿ ಕೈ ಕುಯಿದುಕೊಂಡೆ."

"ಹಾಗಾದರೆ ನೀವು ಒಳ್ಳೆಯ ಡಾಕ್ಟರಾಗುತ್ತೀರಿ. ಒಂದು ಆಲೂಗೆಡ್ಡೆ ಹೆಚ್ಚಲು ಬರದಿದ್ದವರು ಹೆಣ ಕುಯ್ಯುತ್ತಾರೆಯೇ ? ನೀವು ಡಾಕ್ಟರಾಗಿ ಒಂದು ಆಪರೇಷನ್ ಮುಗಿಸಿದ ಮೇಲೆ ನಿಮ್ಮ ಕೈಕಾಲುಗಳಿಗೆ ಮದ್ದು ಹಚ್ಚುವವರನ್ನು ಬೇರೆ ತರಬೇಕು."

"ನೀವು ಕೈ ನೋಡಿ ಸಾಕು. ಗಾಯ ನೋಡಬೇಕಾಗಿಲ್ಲ."

"ನಾನು ಈ ದಿನ ನಿಮ್ಮ ಕೈ ನೋಡಲಾರೆ. ಅದಕ್ಕೆ ಕಾನ್‌ಸನ್ಟ್ರೇಟ್ ಮಾಡಬೇಕು. ಇನ್ನೊಂದು ದಿನ ನೋಡುತ್ತೇನೆ. ಕ್ಷಮಿಸಿ."

"ಹಾಗಾದರೆ ಸುಳ್ಳು ಹೇಳಿ ನನ್ನ ಯಾಕೆ ಇಲ್ಲಿಗೆ ಕರೆದುಕೊಂಡು ಬಂದಿರಿ ?"

"ಅದರ ತಪ್ಪಿಗೆ ಜುಲ್ಮಾನೆ—ಇಗೋ ಈ 'ಟೀ' ತೆಗೆದುಕೊಳ್ಳಿ" ಎನ್ನುತ್ತಾ ಗೋಪಿ ಕಪ್ಪನ್ನು ಎತ್ತಿ ವಿಜಯಳ ಕೈಗಿತ್ತ. ಅವಳು ಟೀ ಬಟ್ಟಲನ್ನು ತನ್ನ ತುಟಿಯ ಬಳಿಗೆ ತೆಗೆದುಕೊಂಡು ಹೋದಳು. ಅವನು ಸುಮ್ಮನೆ ಅವಳ ಕಡೆ ನೋಡುತ್ತಿದ್ದ. ವಿಜಯಾ ನಕ್ಕು ತನ್ನ ಬಟ್ಟಲನ್ನು ಕೆಳಗಿರಿಸಿ, ಅವನ ಮುಂದಿದ್ದ ಬಟ್ಟಲನ್ನು ಎತ್ತಿ

"ನಾನು ಕುಡಿದರೆ ನೀವು ಕುಡಿದಹಾಗಾಯಿತೇ ? ತಗೊಳ್ಳಿ" ಎಂದಳು. ತನ್ನ ನೋಟದ ಅಸಭ್ಯತನಕ್ಕಾಗಿ ಅವನು ನಾಚಿದ. ಅವಳು ಕೊಟ್ಟ ಬಟ್ಟಲನ್ನು ಕೈಲಿ ಹಿಡಿದ.

"ಇಬ್ಬರೂ ಒಟ್ಟಿಗೆ ಕುಡಿಯೋಣ. ಒನ್, ಟೂ, ತ್ರೀ, ಆಫ್" ವಿಜಯ ಬಟ್ಟಲನ್ನು ಬರಿದುಮಾಡಿ ಕೆಳಗಿರಿಸಿದಳು. ಗೋಪಿ ಕೋಟಿನ ತೋಳನ್ನು ಹಿಂದೆ ಮಾಡಿ ಗಂಟೆ ನೋಡಿ "ಹೋಗೋಣ" ಎಂದ.

ಇಬ್ಬರಿಗೂ ಅಲ್ಲಿಂದ ಹೊರಡುವ ಮನಸ್ಸಿರಲಿಲ್ಲ. ಅಲ್ಲಿಂದ ಕಾಲು ತೆಗೆಯಲು ಇಷ್ಟಪಡದೆ ನಿಂತಿದ್ದ ಗೋಪಿಯನ್ನು ನೋಡಿ ವಿಜಯ ಹೇಳಿದಳು.

" ಹೋಗೋಣ. ನೀವಿನ್ನು ಮನೆಗೆ ಹೋಗಿ ಊಟ ಮಾಡಿ ಬರಬೇಕೇನೋ ?"

" ನೀವು ?"

" ನಾನು ಈ ದಿನ ಹಾಸ್ಟಲಿನಲ್ಲಿ ಮೀರಳ ಅಥಿತಿ."

" ಹಾಸ್ಟಲಿನಲ್ಲಿ ಏನು ಈ ದಿನ ?"

" ಏನೂ ಇಲ್ಲ. ನಾನೇ ನನ್ನನ್ನು ಮೀರಳ ಅಥಿತಿಯನ್ನಾಗಿ ಮಾಡಿಕೊಂಡಿದ್ದೇನೆ."

ವಿಜಯ ಹಾಸ್ಟಲಿನ ಕಡೆ ನಡೆದಳು. ಅವನು ಕಾಲೇಜಿನಲ್ಲಿರಿಸಿದ್ದ ಸೈಕಲ್ಲನ್ನು ತೆಗೆದುಕೊಳ್ಳಲು ಹೋದ.

ವಿಜಯ ಮೀರಳ ರೂಮಿಗೆ ಬಂದಾಗ ಮೀರ ಇನ್ನೂ ಬಂದಿರಲಿಲ್ಲ.

ವಿಜಯ ಆಲಸ್ಯದಿಂದ ಮೀರಳ ಮಂಚದಮೇಲೆ ಉರುಳಿಕೊಂಡಳು. ಮೀರ ಒಳಗೆ ಬಂದು ವಿಜಯಳನ್ನು ನೋಡಿ

" ಕೆಟ್ಟ ಹುಡುಗಿ, ನಿನಗಾಗಿ ನಾನು ಆಸ್ಪತ್ರೆಯೆಲ್ಲಾ ಅಲೆದಾಡಿ ಬಂದೆ. ಓಡಿಹೋಗೋದಕ್ಕೆ ಅಷ್ಟೊಂದು ಆತುರವೇ ?"

" ಸಾರಿ. ನಿನಗೆ ಹೇಳಿ ಬರಬೇಕಾಗಿತ್ತು."

" ನೀನು ಹೇಳದಿದ್ದರೂ ಗೋಪೀನಾಥ್‌ನ ಗೆಳೆಯ ಕೇಶವನ್ ಹೇಳಿದರು...."

ವಿಜಯ ಮೀರಳ ಕಣ್ಣು ತಪ್ಪಿಸುತ್ತಾ ಕೇಳಿದಳು

" ಏನೆಂದು ಹೇಳಿದರು ?"

" ಗೋಪಿ, ವಿಜಯ ಮಾತನಾಡುತ್ತಿದ್ದರು. ಅವರಿಬ್ಬರೂ ಒಟ್ಟಿಗೆ ಹೋಗಿರಬಹುದು ಎಂದರು. ರಾಧೆ ಅವಳ ಕೃಷ್ಣನೊಡನೆ ಹೋದ ಮೇಲೆ ನಾನೇಕೆ ಯೋಚನೆ ಮಾಡಲೀಂತ ನೇರವಾಗಿ ಇಲ್ಲಿಗೆ ಬಂದೆ."

" ದಯವಿಟ್ಟು ನನ್ನ ಅಣಕಿಸಬೇಡ ಮೀರಾ."

ಮೀರ ಹಾಸಿಗೆಯ ಮೇಲೆ ಕುಳಿತು ವಿಜಯಳ ಕಿವಿಯಲ್ಲಿ ಪಿಸುಗುಟ್ಟಿದಳು

" ವಿಜಯಾ, ಅವನು ನಿನ್ನ ಕೆನ್ನೆಗೆ ಮುತ್ತಿಟ್ಟನಾ ?" ಎಂದಳು.

ಮಲಗಿದ್ದ ವಿಜಯಾ ಹೌಹಾರಿ ಕುಳಿತು " ಏನಂದೆ ?" ಎಂದಳು.

ಮೀರ ಕನ್ನಡಿಯನ್ನು ತೆಗೆದು ವಿಜಯಳ ಕೈಗೆ ಕೊಟ್ಟಳು. ವಿಜಯ ಕನ್ನಡಿ ತೆಗೆದು ತನ್ನ ಮುಖಕ್ಕೆ ಹಿಡಿದುಕೊಂಡಳು. ಅವಳ ಒಂದೊಂದು ಕೆನ್ನೆಯಲ್ಲೂ ರೋಜಾ ಹೂವು ಅರಳಿತು, ಅವಳು ಕನ್ನಡಿಯನ್ನು ಹಿಂತಿರುಗಿಸಿದಳು.

"ನನ್ನ ಊಹೆ ಸರಿಯೇ?"

ವಿಜಯ ತಲೆ ಅಲುಗಿಸಿದಳು. "ಊಹೂಂ" ಎಂದಿತು ಬಾಯಿ.

"ಹಾಗಾದರೆ ಕೆನ್ನೆ ಯಾಕೆ ಇಷ್ಟು ಕೆಂಪಗಿದೆ?"

"..............."

"ಕಣ್ಣಿನಿಂದ ಮುತ್ತಿಟ್ಟಿರಬಹುದಲ್ಲವೇ? ನೋಡಿದ ಮಾತ್ರಕ್ಕೆ ನೀನು ಹೀಗಾಗಬೇಕಾದರೆ ಇನ್ನು ಅವನು...."

"ಮೀರಾ ದಯವಿಟ್ಟು ಸುಮ್ಮನಾಗು."

"ಗೋಪೀನಾಥ್ ಜೊತೆ ಯಾಕೆ ಹೋದೆ?"

"ಕೈ ನೋಡುತ್ತೇನೆ ಎಂದರು. ಆದುದರಿಂದ ಅವರೊಡನೆ ಹೋದೆ."

"ಕೈ ನೋಡಿ ಏನು ಹೇಳಿದರು?"

"ಏನೂ ಹೇಳಲಿಲ್ಲ."

"ನೋಡಿದ್ದು ಕೈಯೋ ಅಥವಾ ಮುಖವೋ?"

"ಗೊತ್ತಿಲ್ಲ."

"ಏಳು ಊಟಮಾಡಿ ಬರೋಣ. ಇನ್ನು ಕಾಲೇಜಿಗೆ ಹೊತ್ತಾಗುತ್ತದೆ" ಎಂದು ಮೀರ ವಿಜಯಳನ್ನು ಎಬ್ಬಿಸಿದಳು.

ಆಗಸ್ಟ್ ಹದಿನೈದರ ದಿನಾಚರಣೆಯನ್ನು ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳು ಬಹಳ ಸಂಭ್ರಮದಿಂದ ಆಚರಿಸುತ್ತಿದ್ದರು. ಹಿಂದಿನ ವರ್ಷ ಶ್ರೀರಂಗಪಟ್ಟಣಕ್ಕೆ ಅವರ ತಂಡ ಹೋಗಿತ್ತು. ಈ ಬಾರಿ 'ಬೃಂದಾವನ'ಕ್ಕೆ ಹೋಗಲು ತೀರ್ಮಾನವಾಗಿತ್ತು. ಎರಡು ದಿನಗಳಿಗೆ ಮುಂಚೆಯೇ ಕೃಷ್ಣರಾಜಸಾಗರದ ಹೋಟಲಿಗೆ ರಾತ್ರಿಯ ಭೋಜನವನ್ನು ತಯಾರು ಮಾಡಬೇಕೆಂದು ಸೂಚನೆ ಕೊಟ್ಟಿದ್ದಲ್ಲದೆ, ಏನೇನು ತಯಾರು ಮಾಡಬೇಕೆಂಬ ವಿಷಯವನ್ನು ಸಹ ತಿಳಿಸಲಾಗಿತ್ತು.

ಮಧ್ಯಾಹ್ನ ಮೂರು ಗಂಟೆಗೆ ದೊಡ್ಡ ಐದು ಬಸ್ಸುಗಳು ಬಂದು ಕಾಲೇಜಿನ ಮುಂದೆ ನಿಂತವು. ಸೊಗಸಾಗಿ ಸಿಂಗರಿಸಿಕೊಂಡಿದ್ದ ಹುಡುಗ, ಹುಡುಗಿಯರ ತಂಡ ಗಲಾಟೆ ಮಾಡುತ್ತಾ ಬಸ್ಸನ್ನೇರಲು ಮೊದಲು ಮಾಡಿತು. ಒಂದು ಬಸ್ಸಿನಲ್ಲಿ ತುಂಬಿಕೊಂಡಿದ್ದ ಹುಡುಗರು ಕೆಳಗೇ ನಿಂತಿದ್ದ ಗೋಪೀಗೆ

"ಹಾರೋ ಒಳಗೆ ಜಾಗವಿದೆ" ಎಂದು ಕೂಗಿದರು.

ಆದರೆ ಗೋಪಿ ಯಾರೊಡನೆಯೋ ಮಾತನಾಡುತ್ತಿರುವವನಂತೆ ನಟಿಸಿದ. ಷರಾಯಿ ಜೇಬಿನಲ್ಲಿ ಕೈಹಾಕಿ, ಕಣ್ಣಿಗೆ ಕಪ್ಪು ಕನ್ನಡಕ ಹಾಕಿಕೊಂಡಿದ್ದ ಗೋಪಿ ಯಾರನ್ನೋ ನಿರೀಕ್ಷಿಸುತ್ತಿರುವಂತೆ ನಿಂತಿದ್ದ.

ಹುಡುಗಿಯರ ಗುಂಪಿನಲ್ಲಿ ಅವನ ಕಣ್ಣುಗಳು ಚುರುಕಾಗಿ ಓಡಾಡಿದವು. ಆದರೆ ವಿಜಯಳಾಗಲಿ, ಮೀರಳಾಗಲಿ ಅವನ ಕಣ್ಣಿಗೆ ಬೀಳಲಿಲ್ಲ. ಅವನಿಗೆ ಬೃಂದಾವನಕ್ಕೆ ಹೋಗುವ ಉತ್ಸಾಹವೆಲ್ಲಾ ಒಂದೇ ಸಲಕ್ಕೆ ಇಳಿದು ಹೋಯಿತು.

ಅಷ್ಟರಲ್ಲಿ ಮೀರಳ ಎತ್ತರವಾದ ನಿಲುವು ಅವನ ಕಣ್ಣಿಗೆ ಬಿತ್ತು. ಮೀರ ಬಂದಿದ್ದ ಮೇಲೆ ವಿಜಯ ಬಂದೇ ಇರಬೇಕು ಎಂದಿತು ಅವನ ಮನಸ್ಸು. ಮೀರ, ವಿಜಯ, ಯಶೋದ ಮಾತನಾಡುತ್ತಾ ಗೋಪಿ ಇದ್ದಲ್ಲಿಗೇ ಬಂದರು.

"ನಮಸ್ಕಾರ. ನೀವು ಬರಲಾರಿರಿ ಎಂದು ಭಾವಿಸಿದ್ದೆ."

"ನಾನೇನೋ ಬರಬಾರದು ಎಂದೇ ಮಾಡಿದ್ದೆ. ಯಶೋದ, ವಿಜಯಳ ಹಿಂಸೆ ಸಹಿಸಲಾರದೇ ಬರಬೇಕಾಯಿತು. ನೀವು ಯಾಕೆ ಇನ್ನೂ ಕೆಳಗೇ ನಿಂತಿದ್ದೀರಿ? ಯಾವುದಾದರೂ ಬಸ್ಸು ಹತ್ತುವುದು ತಾನೇ?"

"ಹುಡುಗಿಯರು ಮೊದಲು ಹತ್ತಲಿ. ಆಮೇಲೆ ನಾವು."

ಮೀರ, ವಿಜಯ, ಯಶೋದ ಬಳಿಯೇ ನಿಂತಿದ್ದ ಅರ್ಧ ತುಂಬಿದ್ದ ಬಸ್ಸೊಂದನ್ನು ಹತ್ತಿ ಕುಳಿತರು.

"ನೀವು ಇಲ್ಲೇ ಬರಬಹುದು. ಸ್ಥಳವಿದೆ." ಮೀರ ಕರೆದಳು.

ಮೀರ ಅವನನ್ನು ಆಹ್ವಾನಿಸದಿದ್ದರೂ ಗೋಪಿ ಆ ಬಸ್ಸನ್ನೇ ಖಂಡಿತವಾಗಿ ಹತ್ತುತ್ತಿದ್ದ. ಮೀರ ಕರೆದುದೇ ಸಾಕೆಂದು ಅವನು ಬಸ್ಸು ಹತ್ತಿದ. ಗೋಪಿ ಬಸ್ಸು ಹತ್ತಿ ಅವರು ಕುಳಿತಿದ್ದ ಎದುರು ಸಾಲಿನಲ್ಲಿ ಕುಳಿತ. ಕೂಡಲೇ ವಿಜಯ ಕಿಟಕಿಯ ಕಡೆ ಮುಖ ತಿರುಗಿಸಿಕೊಂಡಳು.

ಬಿಳಿಯ ಅರ್ಧ ತೋಳಿನ ಶರಟು. ಬಿಳಿಯ ಗರಿಮುರಿಯಾದ ಶರಾಯಿ, ಕಾಲಿಗೆ ಕಪ್ಪು ಶೂಸುಗಳು—ಅಷ್ಟೇ ಅವನ ಉಡಿಗೆ.

ಕಡು ನೀಲವರ್ಣದ ಜಾರ್ಜೆಟ್ ಸೀರೆ, ತಿಳಿಹಳದಿ ಸ್ಯಾಟಿನ್ ಚೋಲಿ. ಹವಳದ ಸರ, ಉಂಗುರದ ಲೋಲಕ್ಕುಗಳು—ಇಷ್ಟೇ ವಿಜಯಳ ಉಡುಪು, ಯಾವಾಗಲೂ ಬರಿದಾಗಿರುತ್ತಿದ್ದ ಅವಳ ಕೈಗಳಲ್ಲಿ ಒಂದು ನೀಲಿ ಬಳೆಯಿತ್ತು. ಒಂದೊಂದು ಜಡೆಯಲ್ಲೂ ಒಂದೊಂದು ಹಳದಿ ಗುಲಾಬಿ.

ಮೀರ ಈರುಳ್ಳಿ ಬಣ್ಣದ ರೇಶಿಮೆಯ ಸೀರೆಯುಟ್ಟು, ದಟ್ಟ ಕೆಂಪಿನ ಮಕಮಲ್ ಚೋಲಿ ಹಾಕಿಕೊಂಡಿದ್ದಳು.

ಗೋಪಿ ಮತ್ತೆ ವಿಜಯಳ ಕಡೆ ನೋಡಿದ.

—ಅವಳ ಕೊರಳು ಹಾಗೂ ಅವಳು ಹಾಕಿಕೊಂಡಿದ್ದ ಹವಳದ ಸರ

ಅವಳ ಕೊರಳನ್ನು ಮೆಲ್ಲನೆ ಮುಟ್ಟುವ ಆಸೆಯಾಯಿತು ಅವನಿಗೆ. ಗೋಪಿ ಕಷ್ಟಪಟ್ಟು ತನ್ನಾಸೆಯನ್ನು ನುಂಗಿಕೊಂಡ.

ವಿಜಯಳಿಗಿಂತಲೂ ಸುಂದರಿಯರಿದ್ದರು. ಆದರೂ ಅವನ ಕಣ್ಣು ಅವಳ ಕಡೆಗೇ ಓಡುತ್ತಿತ್ತು. ಅದರಲ್ಲಿ ಈ ದಿನವಂತೂ ಅವಳನ್ನು ಪಾಪದ ಕಣ್ಣಿನಿಂದ ನೋಡಬಾರದು.

ಗೋಪಿ ಕಣ್ಣಿಗೆ ಕಪ್ಪು ಕನ್ನಡಕ ಧರಿಸಿದ್ದರಿಂದ ನಿರ್ಭಯವಾಗಿ ವಿಜಯಳನ್ನು ನೋಡುತ್ತಿದ್ದ. ಅವಳು ಮಾತ್ರ ಅವನ ಕಡೆ ತಿರುಗಿರಲಿಲ್ಲ.

"ಲೋ ಗೋಪಿ, ಕ್ಯಾಮರಾ ತಂದಿದೀಯೇನೋ?" ಕೇಶವನ್ ಕೇಳಿದ.

"ತಂದಿದೀನೋ ಮಾರಾಯ. ನೀನೀಗ ಯಾರ ಫೋಟೋ ತೆಗೆಯ ಬೇಕು?"

"ಇಲ್ಲಿ ಯಾರದ್ದೂ ತೆಗೆಯಬೇಕಾಗಿಲ್ಲ."

"ನೀವು ಫೋಟೋಗ್ರಾಫರ್ ಬೇರೆ ಏನು?" ಮೀರ ಕೇಳಿದಳು.

"ಫೋಟೋಗ್ರಫಿ ನನ್ನ ಹಾಬಿ. ಆದರೆ ಅದು ಬಹಳ ಖರ್ಚಿನ ಹಾಬಿ. ಈಚೀಚೆಗೆ ಶುರು ಮಾಡಿದ್ದೇನೆ."

"ನಮ್ಮ ಯಶೋದೆಗೂ ಈ ಹುಚ್ಚಿದೆ. ಇಲಸ್ಟ್ರೇಟಡ್ ವೀಕ್ಲಿಗೆ ಪ್ರತಿ ತಿಂಗಳೂ ಫೋಟೋಗಳನ್ನು ಕಳಿಸುತ್ತಾಳೆ. ಅವು ವಾಪಸ್ಸು ಅವಳಿಗೇ ಬರುತ್ತವೆ."

"ನನ್ನ ಮಾನ ತೆಗೆಯಬೇಡ. ಸುಮ್ಮನಿರೆ" ಎಂದಳು ಯಶೋದ.

"ಈ ಮಗುವೇಕೆ ಮೌನವಾಗಿ ಕುಳಿತುಕೊಂಡಿದೆ?" ಮೀರ ವಿಜಯಳ ಕಡೆ ತಿರುಗಿ ಮಾತನಾಡಿದಳು.

ಗೋಪಿಯೊಡನೆ ಹೋಟಲಿಗೆ ಹೋಗಿದ್ದ ವಿಜಯ ಈಗ ಇತರರ ಎದುರಿಗೆ ಒಂದು ಮಾತನ್ನಾಡಿರಲಿಲ್ಲ.

"ನೀವಾಡುವುದನ್ನು ನಾನು ಕೇಳುತ್ತೇನೆ" ವಿಜಯ ಹೇಳಿದಳು.

ಬಸ್ಸು ಹೊರಟಿತು. ಗಾಳಿ ಭರ್‍ರೆಂದು ಬೀಸಿತು. ಹುಡುಗಿಯರು ಮುಡಿದಿದ್ದ ಹೂವಿನ ಪರಿಮಳ, ಹುಡುಗರು ಹಚ್ಚಿದ್ದ ಸೆಂಟು ಹೊತ್ತ ಗಾಳಿ ಬಸ್ಸಿನ ತುಂಬಾ ಅಲೆದಾಡಿತು. ಹುಡುಗರು ಸಿನಿಮಾ ಹಾಡುಗಳನ್ನು ಹಾಡಿದರು. ಅವರಲ್ಲಿ ಒಬ್ಬನೆಂದ

"ಎಲ್ಲರೂ ಹುಚ್ಚು ಹುಚ್ಚಾಗಿ ಕೂಗಾಡುವುದು ಬೇಡ. ಚೆನ್ನಾಗಿ ಹಾಡುವವರು ಒಬ್ಬರು ಹಾಡಲಿ. ಉಳಿದವರು ಕೇಳೋಣ."

" ನರಹರೀ, ನೀನು ಹೇಳೋ"

ನರಹರಿ ಗಂಟಲು ಸರಿಮಾಡಿಕೊಂಡು ಕೇಳಿದ

" ಸಿನಿಮಾ ಹಾಡು ಹೇಳಲೋ, ಕನ್ನಡ ಗೀತೆಗಳನ್ನು ಹೇಳಲೋ?"

" ಎರಡೂ ಹೇಳು."

" ಯೇ ರಾತ್ ಯೇ ಚಾಂದನೀ ಫಿರ್ ಕಹಾಂ...." ನರಹರಿ ಹಾಡಲು ಮೊದಲು ಮಾಡಿದ. ಹಾಡಿನ ಅರ್ಥ ತಿಳಿದ ವಿಜಯ ನಾಚಿಕೆಯಿಂದ ಕೆಂಪಾದಳು. ಆ ಹಾಡು ಮುಗಿದೊಡನೆ ನರಹರಿ ಎರಡು ಕನ್ನಡ ಗೀತೆಗಳನ್ನು ಹಾಡಿದ. ಅವನ ಹಾಡು ಮುಗಿದೊಡನೆ ಗೋಪಿ ಕೇಳಿದ

" ನೀವು ಹಾಡಿ, ಮಿಸ್ ವಿಜಯ ಪರಾಂಜಪೆ."

" ಈ ಬಸ್ಸಿನ ಗದ್ದಲವನ್ನು ಮೆಟ್ಟಿ ನಾನು ಹಾಡಲಾರೆ. ಕೆ. ಆರ್. ಎಸ್.ಲಿ ಬೇಕಾದರೆ ಹಾಡುತ್ತೇನೆ."

" ಥ್ಯಾಂಕ್ಸ್. ನೀವು ಮೀರಾ ?"

" ಕ್ಷಮಿಸಿ. ನನಗೆ ಹಾಡು ಬರುವುದಿಲ್ಲ."

ಬಸ್ಸು ಕೃಷ್ಣರಾಜಸಾಗರ ಸೇರಿದಾಗ ಸುಮಾರು ಐದು ಗಂಟೆಯಾಗಿತ್ತು. ರಾತ್ರಿ ಎಂಟು ಗಂಟೆಗೆ ಊಟವಿತ್ತು. ಅಲ್ಲಿಯವರೆಗೆ ಹುಡುಗ, ಹುಡುಗಿಯರು ಮನಬಂದಂತೆ ಅಲೆಯತೊಡಗಿದರು. ಗೋಪಿ, ಕೇಶವನ್ ಮೀರಳ ಗುಂಪಿಗೆ ಸೇರಿಕೊಂಡರು. ವಿಜಯಳೇನೋ ಮೂಕಿಯಾಗಿದ್ದಳು. ಆದರೆ ಕಣ್ಣಿಗಾದರೂ ಹಬ್ಬ ಮಾಡಿಕೊಳ್ಳಲು ಅಡ್ಡಿ ಏನು? ಹೂವಿನ ಪೊದೆಯ ಬಳಿ ಗೋಪಿ ಎಲ್ಲರನ್ನೂ ನಿಲ್ಲಿಸಿ ಫೋಟೋ ತೆಗೆದ. ಅವನು ತೆಗೆದಾದ ಕೂಡಲೇ ಯಶೋದ ಬಂದು

" ಈಗ ನೀವು ನಿಂತುಕೊಳ್ಳಿ. ನೀವು ಗುಂಪಿನಲ್ಲಿರುವ ಫೋಟೋನ ನಾನು ತೆಗೆಯುತ್ತೇನೆ" ಎಂದಳು.

" ಸಾಕು ಬಿಡು ಯಶೋದಾ" ವಿಜಯ ಹೇಳಿದಳು.

" ಶ್—ಸುಮ್ಮನಿರು."

ಗೋಪಿ ಹೋಗಿ ಮೀರ, ವಿಜಯಳ ನಡುವೆ ನಿಂತ.

" ರೆಡೀ....ಥ್ಯಾಂಕ್ಸ್" ಯಶೋದ ಕ್ಯಾಮರ ಅವನ ಕೈಗಿತ್ತಳು.

ಚಿಲುಮೆಯ ಬಳಿ ವಿಜಯ ಎಲ್ಲರಿಂದಲೂ ಸ್ವಲ್ಪ ದೂರ ನಿಂತಿದ್ದಾಗ ಗೋಪಿ ಹೂವಿನ ಪೊದೆಯ ಫೋಟೋ ತೆಗೆದುಕೊಳ್ಳುವವನಂತೆ ನಟನೆ ಮಾಡಿ, ಕ್ಯಾಮರಾನ ವಿಜಯಳ ಮೇಲೆ ಫೋಕಸ್ ಮಾಡಿ 'ಕ್ಲಿಕ್' ಎನಿಸಿದ.

ವಿಜಯಳಿಗೆ ಅನುಮಾನವಾಯಿತು. ಅವಳು ಸಂದೇಹದಿಂದ ಗೋಪಿಯ ಕಡೆ ನೋಡಿದಾಗ ತುಂಟ ನಗೆ ಅವನ ಕಣ್ಣುಗಳಲ್ಲಿತ್ತು. ವಿಜಯ ಗಡುಸಾಗಿ ಹೇಳಿದಳು.

"ನಿಮ್ಮ ತುಂಟತನ ನನಗೆ ಬೇಕಾಗಿಲ್ಲ"

ಗೋಪಿಯ ತುಂಟನಗೆ ಮಾಯವಾಯಿತು. ಅವನು ಅವಳ ಗಡುಸು ನೋಡಿ ಗಾಬರಿಯಿಂದ

"ಕ್ಷಮಿಸಿ. ನೀವಿಷ್ಟು ಸಿಟ್ಟುಗೊಳ್ತೀರಿಂತ ನಾನು ತಿಳಿದಿರಲಿಲ್ಲ" ಎಂದ.

"ನೀವು ತೆಗೆದ ಈ ಫೋಟೋನ ನನಗೇ ಕೊಡವ ಹಾಗಿದ್ದರೆ ಕ್ಷಮಿಸುತ್ತೇನೆ."

"ಆಗಲಿ" ಎನುತ್ತಾ ಅವನು ಒಂಟಿಯಾಗಿ ನಿಂತಿದ್ದ ವಿಜಯಳ ಬಳಿಗೆ ಹೋಗಿ ತಗ್ಗಿದ ದನಿಯಲ್ಲಿ

"ನಾವಿಬ್ಬರೇ ಸುತ್ತಾಡಿ ಬರೋಣ ಬರ್ತೀರಾ?" ಎಂದ.

"ನಾನು ಬರೋದಿಲ್ಲ."

"ಸ್ವಲ್ಪ ಹೊತ್ತು ತಿರುಗಾಡಿ ಬರೋಣ. ಅವರೆಲ್ಲ ಹಿಂದಿರುಗಿ ಸಹ ನೋಡದೆ ಮುಂದೆ ಹೋಗುತ್ತಿದ್ದಾರೆ."

"ಊಹೂಂ. ನನಗೆ ಭಯ."

"ನನ್ನನ್ನು ಕಂಡರೆ ನಿಮಗೆ ಭಯವೇ? ನಾನು ನಿಮಗೇನೂ ಮಾಡುವುದಿಲ್ಲ."

"ನಿಮ್ಮನ್ನು ಕಂಡರೆ ಭಯವಿಲ್ಲ. ಮೀರಳನ್ನು ಕಂಡರೆ ಭಯವಿದೆ."

"ಯಾಕೆ ಅವರೇನು ಮಾಡುತ್ತಾರೆ?"

"ಹಾಸ್ಯ ಮಾಡುತ್ತಾಳೆ. ಆ ದಿನ ನಿಮ್ಮೊಡನೆ ಬಂದಿದಾಗ ತುಂಬಾ ಕೀಟಲೆ ಮಾಡಿಬಿಟ್ಟಳು. ಅವಳ ಬಾಯಿಗೆ ನಾನು ಹೆದರುತ್ತೇನೆ."

ವಿಜಯ ಗೋಪಿಯೊಡನೆ ಹೆಜ್ಜೆ ಹಾಕಿದಳು.

"ಏನೆಂದು ಕೀಟಲೆ ಮಾಡಿದರು?"

"ಏನೇನೋ ಹುಚ್ಚು ಪ್ರಶ್ನೆಗಳನ್ನು ಕೇಳುತ್ತಾಳೆ."

"ಏನೆಂದು ನಾನು ಕೇಳಬಹುದೇ?"

ಮೀರ ತನ್ನನ್ನು ಕೇಳಿದುದನ್ನು ತಾನು ಹೇಗೆ ಹೇಳುವುದು? ಅವಳು ಕೇಳಿದಳು—'ಅವನು ನಿನ್ನ ಕೆನ್ನೆಗೆ ಮುತ್ತಿಟ್ಟನೇ' ಎಂದು. ಇದೇ ಮಾತನ್ನು ಹೇಗೆ ಹೇಳುವುದು?

" ಓ ಬಿಡಿ. ಅವಳೊಬ್ಬಳು ಹುಚ್ಚು ಹುಡುಗಿ."

"ಊಹೂಂ. ಅವರೇನೆಂದರೆಂಬುದನ್ನು ನೀವು ನನಗೆ ಹೇಳಲೇ ಬೇಕು."

" ನನ್ನಿಂದಂತೂ ಸಾಧ್ಯವಿಲ್ಲ."

" ನಾನೇ ಊಹಿಸಲಾ ? ನೀವೇನು ಮಾತನಾಡಿದಿರಿ ಎಂದು ಕೇಳಿರಬಹುದು"

" ಅಲ್ಲ."

" ಅಷ್ಟೊಂದು ರಹಸ್ಯವೇನಿದೆ ಎಂದಿರಬಹುದು."

" ಅಲ್ಲ."

" ನಿಮ್ಮನ್ನ ಕರೆದೊಯ್ಯಲು ಅವನಿಗೆಷ್ಟು ಧೈರ್ಯ ಎಂದಿರಬಹುದು."

" ಅಲ್ಲ."

" ಅವರೇನೆಂದರೆಂಬದನ್ನು ನನಗೂ ಹೇಳುವುದಿಲ್ಲವೇ ?"

" ಹೇಳಲೇಬೇಕೆ ?"

" ಹೂಂ."

" ನಾನು ಹೇಳಲಾರೆ. ಬರೆದು ತೋರಿಸುತ್ತೇನೆ."

" ಕಾಗದ, ಪೆನ್ನು ತಂದಿಲ್ಲವಲ್ಲಾ."

" ಇಲ್ಲೇ ನೆಲದ ಮೇಲೆ ಬೆರಳಿನಿಂದ ಬರೆಯುತ್ತೇನೆ. ನಾನು ಪೂರ್ತಿ ಬರೆದು, ಈ ಕಡ ತಿರುಗಬಹುದು ಎಂದು ಹೇಳುವವರೆಗೆ ನೀವು ಬೆನ್ನು ಮಾಡಿಕೊಂಡು ನಿಂತಿರಬೇಕು. ನಾನು ಬರೆದಿದ್ದನ್ನು ಓದಿಯಾದ ಕೂಡಲೇ ಅಳಸಿಬಿಡಬೇಕು. ಇದಕ್ಕೊಪ್ಪುವ ಹಾಗಿದ್ದರೆ ಬರೆಯುತ್ತೇನೆ."

" ಆಗಲಿ."

" ಆ ಕಡೆ ತಿರುಗಿಕೊಳ್ಳಿ."

ಗೋಪೀ ಬೇರೆ ಕಡೆ ತಿರುಗಿಕೊಂಡ. ವಿಜಯ ಮೊಳಕಾಲೂರಿ ಕುಳಿತು, ನೆಲದ ಮೇಲೆ ಸಣ್ಣಗೆ ಬರೆದು

" ಇನ್ನು ತಿರುಗಬಹುದು" ಎಂದು ಹೇಳಿದವಳೇ ಅಲ್ಲಿಂದ ಓಡಿಹೋದಳು. ಗೋಪೀ ಓಡಿಹೋದ ವಿಜಯಳನ್ನು ಮೊದಲು ನೋಡಿದ. ಅನಂತರ ಅರ್ಧ ಬಾಗಿ, ನೆಲದ ಮೇಲೆ ಅವಳು ಇಂಗ್ಲಿಷಿನಲ್ಲಿ ಬರೆದುದನ್ನು ಓದಿಕೊಂಡ.

—ಅವನು ನಿನ್ನ ಕೆನ್ನೆಗೆ ಮುತ್ತಿಟ್ಟನಾ ? ನಿನ್ನ ಕೆನ್ನೆಯೇಕೆ ಇಷ್ಟು ಕೆಂಪಗಿದೆ ?

ವಿಜಯ ಅಲ್ಲಿಯೇ ನಿಂತಿದ್ದರೆ ಗೋಪಿ ನಿಜವಾಗಿಯೂ ಅವಳ ಕೆನ್ನೆಗೆ ಮುತ್ತಿಡುತ್ತಿದ್ದನೋ ಏನೋ ?

ಹಿಂದಿನಿಂದ ಓಡಿ ಬಂದು ಮತ್ತೆ ತಮ್ಮ ಗುಂಪಿಗೇ ಸೇರಿಕೊಂಡ ವಿಜಯಳನ್ನು ನೋಡಿ ಮೀರ ನಕ್ಕು ತನ್ನ ಕೆನ್ನೆ ಮುಟ್ಟಿತೋರಿಸಿ

" ಹೌದಾ ?" ಎಂದಳು.

" ಇಲ್ಲ, ಇಲ್ಲ, ಇಲ್ಲ,."

" ಹಾಗಾದರೆ....ಯಾಕೆ....ಈ ಬಣ್ಣ ?"

" ಗೊತ್ತಿಲ್ಲ."

ಕೇಶವನ್ ವಿಜಯಳನ್ನು ಕೇಳಿದ "ಗೋಪಿ ಎಲ್ಲಿ ?"

" ನನಗೆ ಗೊತ್ತಿಲ್ಲ. ನಾನು ಅವರನ್ನು ನೋಡಲಿಲ್ಲ."

" ನಿಮ್ಮ ಜೊತೆ ಚಿಲುಮೆಯ ಬಳಿ ನಿಂತಿದ್ದರಲ್ಲಾ."

" ಆಗ ನಿಂತಿದ್ದರು. ಆಮೇಲೆ ಎಲ್ಲಿ ಹೋದರೋ ನನಗೆ ಗೊತ್ತಿಲ್ಲ. ಬಾ ಮೀರ, ನಾವು ಹೋಗೋಣ."

ಕೇಶವನ್ ಗೋಪಿಗಾಗಿ ಕಾಯದೆ ಮತ್ತೆ ಅವರೊಡನೆ ಹೊರಟ. ವಿಜಯ ಮೀರಳ ಕೈಯನ್ನು ಬಿಡಲಿಲ್ಲ.

" ನನ್ನ ಕೈ ಯಾಕೆ ಹಿಡಿದುಕೊಂಡಿದೀಯ ? ಬಿಡು" ಎಂದಳು ಮೀರ.

" ಊಹೂಂ. ನಾನು ಬಿಡೋದಿಲ್ಲ."

" ಯಾರಾದರೂ ಬಂದು ಎಳೆದುಕೊಂಡು ಹೋಗ್ತಾರೇಂತ ಹೆದರಿಕೆಯೇನೋ ?"

"ನೀನೇನು ಬೇಕಾದರೂ ಹೇಳಿಕೋ. ನಾನಂತೂ ನಿನ್ನ ಕೈ ಬಿಡುವುದಿಲ್ಲ."

" ಅದಕ್ಕೇ ಮಕ್ಕಳನ್ನು ಕರೆದುಕೊಂಡು ಎಲ್ಲೂ ಹೋಗಬಾರದೂಂತ ಹಿರಿಯರು ಹೇಳುತ್ತಾರೆ" ಮೀರ ವಿಜಯಳನ್ನು ಅಣಕಿಸಿದಳು.

" ನಾನು ಮಗುವಲ್ಲ."

ಎಂಟುಗಂಟೆಗೆ ಸರಿಯಾಗಿ ಊಟ ಪ್ರಾರಂಭವಾಯಿತು. ಊಟದ ಸಮಯದಲ್ಲಿ ಗೋಪಿ ಅವರ ಗುಂಪಿಗೇ ಬಂದು ಸೇರಿಕೊಂಡ.

ಕೇಶವನ್ ಕೇಳಿದ "ಎಲ್ಲಿ ಹೋಗಿದ್ದೆಯೋ ಮಾರಾಯ ?

" ಎಲ್ಲೂ ಇಲ್ಲ."

" ಕಟ್ಟೆ ಏನಾರ ಹಾರಿದೆಯೇನೋಂತ ಮಾಡಿದ್ದೆ ನಾನು."

" ಸಂತೋಷ ಸಮಯದಲ್ಲಿ ಯಾಕೆ ಕೆಟ್ಟ ಮಾತಾಡ್ತೀರಿ ?" ವಿಜಯ ಕೆರಳಿ ಕೇಳಿದಳು.

ಮೀರ, ಕೇಶವನ್ ಅಚ್ಚರಿಯಿಂದ ವಿಜಯಳನ್ನು ನೋಡಿದರು. ಅವನೇನೋ ತಮಾಷೆಯಾಗಿ ಕೇಳಿದರೆ ಅವಳೇಕೆ ಕೋಪಿಸಿಕೊಳ್ಳಬೇಕು ?

ಗೋಪಿ ವಿಜಯಳ ಪಕ್ಕದಲ್ಲೇ ಊಟಕ್ಕೆ ಕುಳಿತಿದ್ದ. ಅವನು ಅವಳ ಪಕ್ಕದಲ್ಲಿ ಕುಳಿತೊಡನೆ ಮೀರ ವಿಜಯಳ ಕಿವಿಯಲ್ಲಿ ಪಿಸುಗುಟ್ಟಿದಳು

"ಎಚ್ಚರಿಕೆಯಾಗಿರು. ನಿನ್ನ ಕೆನ್ನೆ ಅವನಿಗೆ ಬಹಳ ಹತ್ತಿರದಲ್ಲಿದೆ."

ಗೋಪಿ ಊಟಮಾಡುತ್ತಾ, ಆಗಾಗ್ಗೆ ಅವಳ ಕೆನ್ನೆಯ ಕಡೆ ಕಣ್ಣು ಹೊರಳಿಸುತ್ತಿದ್ದ. ಅವನ ತುಟಿಗಳು ಕೆನ್ನೆಯಿಂದ ದೂರವಾಗಿದ್ದರೂ ಕೆನ್ನೆ ಕೆಂಪಾಗಿತ್ತು. ಅವಳ ಬಲಗೈ ಅವನ ಎಡಗೈನ ಬಳಿಯಿದ್ದರೂ, ಗೋಪಿ ಏನೂ ಮಾಡುವ ಹಾಗಿರಲಿಲ್ಲ.

ಮೀರಳಂತೂ ಅವರಿಬ್ಬರನ್ನೂ ಪರೀಕ್ಷೆ ಮಾಡುವವಳಂತೆ ನೋಡುತ್ತಿದ್ದಳು.

"ಸಧ್ಯ, ವಿಜಯಾನ ಸುರಕ್ಷಿತವಾಗಿ ಅವಳ ಮನೆ ಸೇರಿಸಿಬಿಟ್ಟರೆ ಸಾಕು" ಎಂದಳು ಮೀರಾ.

"ಯಾಕೆ ?"

"ಬರೋದು ಹೊತ್ತಾಗಬಹುದು. ನಾವು ವಿಜಯಾನ ಕಳಿಸೋಲ್ಲ ಎಂದರು ಅವರ ತಾಯಿ. ನಾನೇ ಅವರಿಗೆ ಧೈರ್ಯ ಹೇಳಿ ಕರೆದುಕೊಂಡು ಬಂದೆ."

"ನಾನು ಬೇಕಾದರೆ ಅವರನ್ನು ಮನೆಗೆ ಬಿಟ್ಟು ಹೋಗುತ್ತೇನೆ." ಗೋಪಿ ಉದಾರವಾಗಿ ಸಹಾಯ ಮಾಡಲು ಮುಂದೆ ಬಂದ.

ವಿದ್ಯಾರ್ಥಿಗಳು ಕೆ. ಆರ್. ಎಸ್. ಬಿಟ್ಟಾಗ ರಾತ್ರಿ ಹತ್ತು ಗಂಟೆಯಾಗಿತ್ತು. ಹಾಸ್ಟೆಲಿನ ಬಳಿ ಎಲ್ಲರೂ ಬೇರೆಯಾದರು.

"ಮೀರ, ನಾನಿವತ್ತು ಇಲ್ಲಿಯೇ ಮಲಗುತ್ತೇನೆ. ಮನೆಗೆ ಹೋಗೋಲ್ಲ" ಎಂದಳು ವಿಜಯ.

"ಗೋಪೀನಾಥ್ ಕರ್ಕೊಂಡು ಹೋಗುತ್ತಾರೆ. ಹೋಗು."

"ಊಹೂಂ."

"ಅವರಲ್ಲಿ ನಂಬಿಕೆ ಇಲ್ಲವೇ ?"

"ಆತ ಚಿನ್ನದಂತ ಹುಡುಗ."

"ಮತ್ತೆ ಹೋಗಲು ಅಡ್ಡಿಯೇನು ? ಆದರೆ....ಕೆನ್ನೆ....ಜೋಪಾನ."

ವಿಜಯ ಮೀರಳ ಬಳಿಗೆ ಬಂದು ಕಿವಿಯಲ್ಲಿ ಪಿಸುಗುಟ್ಟಿದಳು.

"ಆದರೆ ನಾನೇ ಎಲ್ಲಿ ಮೈಮರೆಯುತ್ತೀನೋ ಎಂಬ ಭಯ. ಇವತ್ತು

ಅಷ್ಟು ಸಮೀಪದಲ್ಲಿ ಊಟಕ್ಕೆ ಕುಳಿತಿದ್ದರೂ ಸಹ ಅಪ್ಪಿತಪ್ಪಿಯಾದರೂ ಅವರ ಕೈ ನನಗೆ ತಗುಲಲಿಲ್ಲ. ನನ್ನ ಒಪ್ಪಿಗೆಯಿಲ್ಲದೆ ಅವರೇನೂ ಮಾಡುವುದಿಲ್ಲ. ಆದರೆ ನನ್ನಲೇ ನನಗೆ ನಂಬಿಕೆಯಿಲ್ಲ. ಈಗ ನಾನೇನು ಮಾಡಲಿ ?"

ಅಷ್ಟು ಹೆದರಿಕೆ ಇದ್ದರೆ ಇಲ್ಲೇ ಮಲಗಿಕೋ."

"ಬೇಡ. ಅವರು ಹಾಸ್ಟಲಿನ ಬಾಗಿಲಿನಲ್ಲಿ ಕಾಯುತ್ತಿದ್ದಾರೆ. ಬರ್ತೀನಿ" ಎಂದವಳೇ ವಿಜಯು ಕಾಂಪೌಂಡಿನಿಂದ ಹೊರಗೆ ಒಡಿದಳು.

ಗೋಪಿ ಅವಳಿಗಾಗಿ ಕಾಯುತ್ತಿದ್ದ.

ಬೀದಿ ನಿರ್ಜನವಾಗಿತ್ತು. ಇಬ್ಬರೂ ಮಾತಿಲ್ಲದೆ ಮೌನವಾಗಿ ನಡೆದರು.

"ಮೀರಾ ಈಗ ಏನೂ ಹಾಸ್ಯಮಾಡಲಿಲ್ಲವಾ ?"

"ಇಲ್ಲ."

"ಅವರು ಹೀಗೆಲ್ಲಾ ಯೋಚಿಸುತ್ತಾರೇಂತ ನಾನು ತಿಳಿದಿರಲಿಲ್ಲ."

"ಪಾಪ! ಒಳ್ಳೆಯ ಹುಡುಗಿ. ನನಗೆ ಸ್ವಂತ ಅಕ್ಕನಿಗಿಂತಲೂ ಹೆಚ್ಚಾಗಿದ್ದಾಳೆ. ನನ್ನ ಕಂಡರೆ ಅವಳಿಗೆ ತುಂಬಾ ಪ್ರೀತಿ."

"ನಿಮ್ಮನ್ನ ಯಾರು ದ್ವೇಷಿಸುತ್ತಾರೆ? ಪುಟ್ಟ ಹುಡುಗಿಯರನ್ನು ಯಾರೂ ದ್ವೇಷಿಸುವುದಿಲ್ಲ."

"ನೋಡಿ ಅಲ್ಲಿ ನೆರಳು....ಯಾರ ನೆರಳು? ನನಗೆ ಹೆದರಿಕೆ...."

"ನಾನು ನಿಮ್ಮೊಡನಿರುವಾಗಲೂ ಹೆದರಿಕೆಯೇ? ಬೇಕಾದರೆ ನನ್ನ ಕೈ ಹಿಡಿದುಕೊಳ್ಳಿ."

ವಿಜಯು ಅವನ ಕೈ ಕಡೆ ನೋಡಿದಳು. ಆ ಕೈ ಹಿಡಿದರೆ ತನ್ನ ಹೃದಯ ಎಷ್ಟು ಹಗುರವಾಗಬಹುದೋ ?

"ಬೇಡ, ಬೇಡ. ಅಂತಹ ಹೆದರಿಕೆ ಏನಿಲ್ಲ."

ಗೋಪಿ ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಂಡ.

"ನೀವು ಅಲ್ಲಿ ನೆಲದ ಮೇಲೆ ಬರೆದೊಡನೆ ಹಾಗೇಕೆ ಓಡಿಹೋದಿರಿ ?"

ವಿಜಯು ಮಾತನಾಡಲಿಲ್ಲ.

ಬೀದಿಯ ದೀಪವೊಂದರ ಕೆಳಗೆ ಬರುತ್ತಲೇ ಗೋಪಿ ತಟ್ಟನೆ ನಿಂತು "ಈ ಬೆಳಕಿನಲ್ಲಿ ನಾನು ನಿಮ್ಮನು ನೋಡಬೇಕು. ತಲೆ ಎತ್ತಿ" ಎಂದ.

ತಲೆ ತಗ್ಗಿಸಿ ನಿಂತಿದ್ದ ವಿಜಯುಳ ಗಲ್ಲ ಹಿಡಿದು ಹೋಗಿ ಅವಳ ಮುಖವನ್ನು ಮೇಲಕ್ಕೆತ್ತಿದ.

ಅವಳ ಸುಳಿಗಲ್ಲ—ಪ್ರಪಂಚದಲ್ಲೇ ಅದಕ್ಕಿಂತಲೂ ಸುಂದರವಾದ ಗಲ್ಲ ಬೇರೊಂದು ಇರಲಾರದು.

" ವಿಜಯ್ ಡಾರ್ಲಿಂಗ್, ನಿನ್ನ ಕೆನ್ನೆಯ ಮೇಲಿರುವ ಕಂಬನಿಯನ್ನು ನನ್ನ ತುಟಿಗಳಿಂದ ಒರೆಸಬೇಕು "

"..............."

" ನಿನ್ನ ತುಟಿಯ ಕಂಪನ ನಿಲ್ಲಿಸಲೇ ?"

ವಿಜಯ ತಲೆ ಅಲುಗಿಸಿ, ತನ್ನ ಗಲ್ಲವನ್ನು ಹಿಡಿದಿದ್ದ ಅವನ ಕೈ ಮೇಲೆ ತನ್ನ ಕೈಯಿರಿಸಿ, ಅವನ ಕೈಯಿಂದ ತನ್ನ ಗಲ್ಲ ಬಿಡಿಸಿಕೊಂಡಳು.

" ನಿನ್ನ ಕೆನ್ನೆ ಕೆಂಪಗಾಗುವುದನ್ನು ನಾನು ನೋಡಬೇಕು."

" ನೋಡಲೇ ಬೇಕೆ ?"

" ನೀನೊಪ್ಪಿಕೊಂಡರೆ "

" ಬೇಡ. ಬೇಡ. ನಾನು ಮೀರಾಗೆ ಮಾತುಕೊಟ್ಟದ್ದೇನೆ."

" ಏನೆಂದು ?"

" ನನ್ನ ಕೆನ್ನೆಯನ್ನು ಜೋಪಾನವಾಗಿ ನೋಡಿಕೊಳ್ಳುತ್ತೀನೆಂದು ಹೇಳಿದ್ದೇನೆ."

" ವಿಜಯ್...."

" ಬೇಡ. ನನ್ನನ್ನು ಮರುಳುಗೊಳಿಬೇಡಿ. ನನ್ನ ಮನಸ್ಸಿನ ಮೇಲೆ ನಾನು ಈ ದಿನ ವಿಜಯ ಸಾಧಿಸಲೇ ಬೇಕು."

" ವಿಜಯಾ...."

" ನಿಮ್ಮ ತೋಳಿನ ಕೈದಿಯಾಗಲು ನಾನೆಷ್ಟು ಹಂಬಲಿಸುತ್ತಿದ್ದೇನೆ ಗೊತ್ತೆ ?"

" ಎಷ್ಟು ?"

" ಈ ಆಕಾಶದಷ್ಟು, ನಕ್ಷತ್ರಗಳಷ್ಟು, ಈ ಕತ್ತಲಿನಷ್ಟು."

" ಆದರೂ ನನ್ನ ತೋಳುಗಳು ಮಾತ್ರ ಪರದೇಶಿಗಳಾಗಿವೆ."

" ಗೋಪಿ, ಗೋಪಿ. ನನ್ನನ್ನು ಇನ್ನು ಪರೀಕ್ಷಿಸಬೇಡಿ. ನೀವು ಇನ್ನೂ ನನ್ನನ್ನು ಗರೀಕ್ಷಿಸಿದರೆ ನಾನು ಖಂಡಿತ ಸೋಲುತ್ತೇನೆ."

" ಈ ಸೋಲಿನಲ್ಲೂ ಗೆಲುವಿದೆ. ಲಲ್ಲಯೇ ?"

" ಮನಸ್ಸಿನ ಸೋಲು, ಪ್ರೇಮದ ಗೆಲುವು."

" ಆದರೂ ನೀನೇ ಇಂದು ಗೆದ್ದಿರುವೆ."

" ನಾನು ಕೆಲ್ಲಬೇಕೆಂದು ನಿರ್ಧರಿಸಿಯೇ ನಿಮ್ಮೊಡನೆ ಹೊರಟೆ. ಮೀರಾಗೆ ಹೇಳಿದ್ದೆ—ನಾನು ಅಷ್ಟೊಂದು ದುರ್ಬಲಳಲ್ಲ ಎಂದು. ನನ್ನ ಮಾತನ್ನು ನಾನೇ ಗೌರವಿಸದಿದ್ದರೆ ಹೇಗೆ ?"

“ ನಿನ್ನ ನಿರ್ಧಾರವನ್ನು ಸೋಲಿಸಿದರೆ ಹೇಗೆ?” ಗೋಪಿ ಅವಳ ಹತ್ತಿರ ಬಂದ.

“ ನಾನು ಸೋತರೆ ನೀವು ಸೋತಂತೆ. ಇಬ್ಬರೂ ಈ ದಿನ ನಮ್ಮ ಮನಸ್ಸನ್ನು ಗೆಲ್ಲೋಣ.”

ಗೋಪಿ ದೂರ ಸರಿದ.

ವಿಜಯಳ ಮನೆ ಹತ್ತಿರ ಬಂತು. ವಿಜಯ ಒಂದು ಗಳಿಗೆ ತಲೆ ಎತ್ತಿ, ಕತ್ತಲಿನಲ್ಲೇ ಅವನ ಮುಖಮುನ್ನು ಕಣ್ಣರಳಿಸಿ ನೋಡಿ

“ ಗುಡ್ ನೈಟ್” ಎಂದಳು.

“ ಗುಡ್‌ನೈಟ್, ಸ್ವೀಟ್ ಡ್ರೀಮ್ಸ್” ಎಂದ ಗೋಪಿ.

ವಿಜಯ ಮೆಟ್ಟಿಲು ಹತ್ತಿ ಬಾಗಿಲನ್ನು ತಟ್ಟಿದಳು. ಹಾಲಿನ ದೀಪ ಹತ್ತಿಕೊಂಡೊಡನೆ ಗೋಪಿ ಅಲ್ಲಿಂದ ಹೊರಟ.

ಮಾರನೆಯ ದಿನ ಮೀರ ಸಿಕ್ಕಿದಾಗ, ಅವಳು ಪ್ರಶ್ನೆಗಳನ್ನು ಕೇಳು ವುದಕ್ಕೆ ಮುಂಚೆಯೇ ವಿಜಯ ಹೇಳಿದಳು.

“ ನಿನ್ನೆ ರಾತ್ರಿ ಏನೂ ಅನಾಹುತವಾಗಲಿಲ್ಲ. ನಿನ್ನ ಎಣಿಕೆ ತಪ್ಪು.”

“ ನಾನು ನಂಬಲಾರೆ. ರಾತ್ರಿ....ನೀವಿಬ್ಬರೇ ಇರುವಾಗ....ಅದರಲ್ಲೂ ಈ ಆಹ್ವಾನಿಸುವ ಮುಖ ಎದುರಿಗಿರುವಾಗ....ನಾನಂತೂ ನಂಬಲಾರೆ.”

“ ನನ್ನಲ್ಲಿ ಅಷ್ಟು ನಂಬಿಕೆ ಇಲ್ಲವೇ ?”

ಮೀರ ವಿಜಯಳ ಕೆನ್ನೆಯನ್ನು ತನ್ನ ಬೆರಳುಗಳಿಂದ ಸವರಿ

“ ಇದ್ದರೂ ಇರಬಹುದು. ಕೆನ್ನೆ ಇನ್ನೂ ಅರಳಲಿಲ್ಲ. ಮೊಗ್ಗಾಗಿಯೇ ಇದೆ” ಎಂದಳು.

“ ನಿನ್ನವಂತೂ ವಿಚಿತ್ರ ಕಲ್ಪನೆಗಳು.”

“ ಅದು ಹೇಗಪ್ಪ ಅವನು ಸುಮ್ಮನಿದ್ದ ? ನಿನ್ನಂತಹ ಹುಡುಗಿ ಒಂಟಿ ಯಾಗಿ ತನ್ನ ಕೈಗೆ ಸಿಕ್ಕಾಗಲೂ ಅದು ಹೇಗೆ ಅವನು ಸುಮ್ಮನಿದ್ದ ? ಕಲ್ಲೆದೆ ಇರಬೇಕು.”

“ ಅವರು ಕೇಳಿದರು. ಆದರೆ ನಾನೇ ಒಪ್ಪಿಕೊಳ್ಳಲಿಲ್ಲ.”

“ ಗುಡ್. ಇಬ್ಬರೂ ಸಾಕಷ್ಟು ದೂರದಲ್ಲಿಯೇ ಇದ್ದಿರಿ ತಾನೇ ? ಸೂಜಿಗಲ್ಲಿಗೆ ಒಂದು ಪರಿಮಿತಿಯ ದೂರದಲ್ಲಿ ಕಬ್ಬಿಣ ಇಟ್ಟರೆ ಏನೂ ಆಗು ವುದಿಲ್ಲ. ಆದರೆ ಕಬ್ಬಿಣವನ್ನು ಪರಿಮಿತಿ ಮೀರಿ ಹತ್ತಿರವಿಟ್ಟರೆ, ಸೂಜಿಗಲ್ಲು ಕಬ್ಬಿಣವನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತದೆ.”

ಅವಳು ಕೊಟ್ಟ ಉಪಮಾನ ಕೇಳಿ ವಿಜಯ ನಕ್ಕಳು.

"ಇಲ್ಲೂ ನಿನ್ನ ಊಹೆ ಸುಳ್ಳು. ಅವರು ಸಾಕಷ್ಟು ಹತ್ತಿರ ಬಂದಿದ್ದರು."

"ಹತ್ತಿರದಲ್ಲಿಯೇ ನಿಂತು ಹೂವನ್ನು ನೋಡಿದ್ದಿರಬೇಕು."

"ಊಹೂಂ. ನನ್ನ ಗಲ್ಲ ಮಾತ್ರ ಪುಣ್ಯ ಮಾಡಿತ್ತು. ಒಂದೇ ಬಾರಿಗೆ ಬಹಳ ಭಾಗ್ಯ ಸಿಕ್ಕುವುದೂ ಅಪಾಯವೇ. ಆದುದರಿಂದ"

"ವಿಜಯಾ, ನಿನ್ನ ವಿದ್ಯೆ ಮುಗಿಯಲು ಇನ್ನೂ ಎರಡೂವರೆ ವರ್ಷಗಳಿವೆ. ಗೋಪಿಯ ವ್ಯಾಸಂಗ ಮುಗಿಯಲು ಒಂದೂವರೆ ವರ್ಷವಿದೆ."

"ನನಗೆ ಆ ವಿಷಯ ತಿಳಿದಿದೆ ಮೀರಾ"

"ಹೀಗೆ ಮೈಮರೆಯಬೇಡ. ನೀವಿಬ್ಬರೂ ಮೊದಲು ವಿದ್ಯೆಯನ್ನು ಪೂರಯಿಸಿ. ನಿಮ್ಮ ಹಾದಿ ಕಲ್ಲುಮುಳ್ಳುಗಳಿಂದ ತುಂಬಿದೆ. ಈಗಲೇ ಅಲ್ಲಿ ಕಾಲಿಟ್ಟು ನೋಯಿಸಿಕೊಳ್ಳಬೇಡಿ. ಮೊದಲು ವಿದ್ಯೆ, ಆಮೇಲೆ ಪ್ರೇಮ."

"ಮುಂದೆ ಕಲ್ಲುಮುಳ್ಳನ್ನು ತುಳಿಯಬೇಕಾಗುವುದಲ್ಲಾ ಎಂದು ಈಗಿನಿಂದ ಹೆದರುತ್ತಿದ್ದೇನೆ. ನಮ್ಮ ತಂದೆಗೆ ಸ್ವಲ್ಪ ಸುಳಿವು ಸಿಕ್ಕಿದರೂ ಸಾಕು—ನನ್ನ ಕೊಂದೇಬಿಡುತ್ತಾರೆ. ಏನು ಮಾಡಲಿ ?"

"ಸಧ್ಯಕ್ಕೆ ಯಾವ ಯೋಚನೆಯೂ ಮಾಡಬೇಡ, ಮೊದಲು ನಿನ್ನ ಕೋರ್ಸ್ ಮುಗಿಯಲಿ. ಅವನೇನೂ ನಿನ್ನ ಪ್ರೀತಿಸುತ್ತೇನೆಂದು ಇನ್ನೂ ಹೇಳಿಲ್ಲವಲ್ಲಾ ?"

"ನಾನೂ ಹೇಳಿಲ್ಲ. ಆದರೆ ಅದನ್ನು ಬಾಯಿಬಿಟ್ಟು ನುಡಿಯಬೇಕೆ ?"

"ಆತ ಬರೀ ಫ್ಲರ್ಟ್ ಇರಬಹುದು. ಏನೋ ಎರಡು ದಿನ ಓಡಾಡಿ ಆಮೇಲೆ ಕೈಬಿಡೋಣಾಂತಿದ್ದರೂ ಇರಬಹುದು. ಗಂಡಸರನ್ನು ಸಂಪೂರ್ಣವಾಗಿ ನಂಬಬೇಡ ವಿಜಯ. ನೀನು ಎಲ್ಲರನ್ನೂ ಬೇಗ ನಂಬಿ ಬಿಡುತ್ತೀಯ."

"ಅವರ ವಿಷಯ ಹಾಗೆ ಮಾತನಾಡಬೇಡ ಮೀರ. ನನಗೆ ತುಂಬ ದುಃಖವಾಗುತ್ತದೆ. ನಿನ್ನೆ ರಾತ್ರಿ ಅವರೆಷ್ಟು ವಿನಯದಿಂದಿದ್ದರು ಗೊತ್ತೇ? ಅವರು ಒಂದು ಮಾತು ಒತ್ತಿ ಹೇಳಿದ್ದರೆ ನಾನು ಆ ಕ್ಷಣದಲ್ಲೇ ಆತ್ಮಸಮರ್ಪಣೆ ಮಾಡಿಬಿಡುತ್ತಿದ್ದೆ."

"ಪ್ರೀತಿಸುವುದು ತಪ್ಪಲ್ಲ. ಆದರೆ ಹೀಗೆ ಮೈಮರೆಯುವುದನ್ನು ನಾನು ಒಪ್ಪುವುದಿಲ್ಲ. ಎಂತಹ ಸಂದರ್ಭದಲ್ಲಿಯೂ ಮನಸ್ಸಿನ ಬಿಗಿ ತಪ್ಪಬಾರದು."

"ನೀನು ಇದುವರೆವಿಗೂ ಯಾರನ್ನೂ ಪ್ರೀತಿಸಿಲ್ಲವೇ ಮೀರಾ? ಪ್ರೇಮದ ಸುಳಿಗೆ ಸಿಕ್ಕುವುದು ಎಷ್ಟು ಭಯಂಕರವೋ ಅಷ್ಟೇ ಸುಂದರ.

ನೀನು ಪ್ರೇಮದ ಸವಿ ಕಂಡಿಲ್ಲವೆಂದು ತಿಳಿದು ನನಗೆ ನಿನ್ನ ಮೇಲೆ ಮರುಕ ಬರುತ್ತಿದೆ."

"ಏಳು ಹುಚ್ಚು ಹುಡುಗಿ. ಆಮೇಲೆ ನನಗೆ ಪ್ರೇಮದ ಪಾಠ ಕಲಿಸುವಿಯಂತೆ. ಈಗ ಸಧ್ಯಕ್ಕೆ ಆಸ್ಪತ್ರೆಗೆ ಹೊರಡೋಣ" ಎನ್ನುತ್ತಾ ಮೀರ ಎದ್ದಳು. ವಿಜಯ ಉತ್ಸಾಹದಿಂದ

"ನಡಿ ಅಲ್ಲಿ ಅವರು ಸಿಕ್ಕರೂ ಸಿಗಬಹುದು" ಎಂದಳು.

* * * *

ಈ ಸಲ ರಜದಲ್ಲಿ ಮೀರ ಹಳ್ಳಿಗೆ ಹೋಗಿದ್ದಾಗ ಶಾಮುವಿನೊಡನೆ ದೊಡ್ಡ ಜಗಳವೇ ಆಗಿಹೋಯಿತು. ಕುಳಿತಲ್ಲಿ ನಿಂತಲ್ಲಿ ಮೀರ ಶಾಮುವನ್ನು ಕಾಡಲು ಮೊದಲುಮಾಡಿದಳು.

"ಇನ್ನೊಂದು ಮದುವೆ ಮಾಡಿಕೊಳ್ಳಿ."

ಅವಳ ಹಿಂಸೆ ತಡೆಯಲಾರದೇ ಶಾಮು ಒಂದು ಸಲ ಕೋಪಗೊಂಡು ಹೇಳಿದ.

"ನೀನು ನನ್ನ ಹೀಗೆ ಹಿಂಸೆ ಮಾಡುವ ಹಾಗಿದ್ದರೆ ರಜದಲ್ಲಿ ಇಲ್ಲಿಗೆ ಬರಲೇಬೇಡ."

ಇದೊಂದು ವಿಚಾರದಲ್ಲಿ ಮೀರ ತನ್ನ ಮನಸ್ಸನ್ನು ಧೃಡಮಾಡಿದ್ದಳು. ಅವಳ ಹಠ, ಧೃಡತೆ, ಮೊಂಡತನವನ್ನು ನೋಡಿ ಬೇಸರಗೊಂಡ ಶಾಮು.

"ನಿನ್ನ ಹಿಂಸೆ ತಡೆಯಲಾರದೆ ನಾನು ಮದುವೆ ಮಾಡಿಕೋಬೇಕು. ಅಷ್ಟೆ" ಎಂದ.

"ನೀವು ಯಾವ ಕಾರಣಕ್ಕಾಗಿ ಮದುವೆ ಮಾಡಿಕೊಂಡರೂ ನನಗೆ ಸಂತೋಷ."

"ಈಗ ಹೀಗೆ ಹೇಳ್ತೀಯ ಮೀರಾ. ನಾನು ಇನ್ನೊಂದು ಮದುವೆ ಮಾಡಿಕೊಂಡ ಮೇಲೆ ನನಗೂ ಸುಖವಿರುವುದಿಲ್ಲ. ನಿನಗೂ ಸುಖವಿರುವುದಿಲ್ಲ. ಆಮೇಲೆ ನೀವಿಬ್ಬರೂ ಜಗಳ ಕಾಯುತ್ತಾ ಕುಳಿತುಕೊಂಡರೆ ನನ್ನ ಗತಿಯೇನು?"

"ನಾವಿಬ್ಬರೂ ಜಗಳ ಕಾಯುವುದಿಲ್ಲ. ಅವಳೇ ಜಗಳ ತೆಗೆದು ಬಂದರೂ ನಾನು ಸುಮ್ಮನಿರುತ್ತೇನೆ."

"ಅದರಲ್ಲೂ ನೀನು ಸುಮ್ಮನಿರುವವಳು" ಶಾಮು ಮೀರಳನ್ನು ಮೂದಲಿಸಿದ.

"ಬೇಕಾದರೆ ನನ್ನ ಪರೀಕ್ಷೆ ಮಾಡಿರಿ" ಮೀರ ಅಂಗಲಾಚಿದಳು.

"ಒಂದು ಪಕ್ಷ ಅವಳು ನಿನ್ನ ಮನೆ ಬಿಟ್ಟು ಹೋಗೂಂತ ಅಂದರೆ?"

"ಹೊರಟು ಹೋಗ್ತೀನಿ. ನನ್ನ ವೈದ್ಯ ವೃತ್ತಿ ನನಗಿದ್ದೇ ಇದೆ."

"ನನ್ನ ಯಾಕೆ ಹಿಂಸೆ ಮಾಡ್ತೀಯಾ ಮೀರಾ?" ಶಾಮು ನೊಂದ ದನಿಯಲ್ಲಿ ಕೇಳಿದ.

"ನಿಜ ಹೇಳಲೇ? ನಾನು ನಿಮ್ಮ ಕೈ ಹಿಡಿದು ತಪ್ಪು ಮಾಡಿದ್ದೇನೆ. ನಾನಲ್ಲದೆ ಬೇರಾವ ಹುಡುಗಿ ನಿಮ್ಮ ಕೈ ಹಿಡಿದಿದ್ದರೂ ನಿಮ್ಮನ್ನು ಸುಖವಾಗಿರಿಸುತ್ತಿದ್ದಳು. ನಾನು ಮಾಡಿದ ತಪ್ಪನ್ನು ಈಗ ಸರಿಮಾಡಿದ ಹೊರತು ನನಗೆ ಆತ್ಮ ತೃಪ್ತಿಯಿಲ್ಲ. ನೀವು ಬೇರೊಂದು ಮದುವೆಯಾಗಿ ಬಿಡಿ. ಆಮೇಲೆ ನಾನು ನಿಮ್ಮಿಂದ ಏನನ್ನೂ ಬಯಸುವುದಿಲ್ಲ."

ಶಾಮು ಮಾತನಾಡಲಿಲ್ಲ.

ತಾನಾದರೂ ಇವಳಿಗಾಗಿ ಏಕೆ ಇಷ್ಟು ಹಂಬಲಿಸಬೇಕು! ಮೀರ ಚೆಲುವೆ. ಆದರೆ ಇವಳಿಗಿಂತ ಚೆಲುವೆಯರು ಸಿಕ್ಕಲಾರರೆ? ಯಾವದೊಂದು ರೀತಿಯಲ್ಲೂ ತನ್ನನ್ನು ಅನುಸರಿಸದೆ, ತನಗೆ ವಿರುದ್ಧವಾಗಿ ದಂಗೆ ಏಳುವ ಈ ಹುಡುಗಿ ತನಗೆ ಅದಾವ ಮಾಟ ಮಾಡಿರುವಳೋ? ಬಹುಶಃ ಅವಳ ದಂಗೆ ಏಳುವ ಸ್ವಭಾವಕ್ಕೇ ತಾನು ಮುಗ್ಧನಾಗಿರಬಹುದು, ಆ ಪುಂಡ ಮನಸ್ಸಿನ ಮೇಲೆ ವಿಜಯ ಸಾಧಿಸುವ ಹಠ ತನಗಿರಬಹುದು. ಅವಳನ್ನು ಪಳಗಿಸಿ ತನ್ನ ಪ್ರೇಮದ ಸರಪಳಿಯಿಂದ ಬಿಗಿದು ಹಾಕುವ ಆಸೆಯಿರಬಹುದು.

ಒಂದು ಬಗೆಯ ಹೋರಾಟ ಶಾಮುವಿನ ಮುಖದ ಮೇಲೆ ಒಡೆದು ಮೂಡಿತು. ಅವನು ಮೀರಳ ಕಡೆ ನೋಡಿದ. ಅವಳು ಕೈಲಿ ದಪ್ಪ ಇಂಗ್ಲಿಷ್ ಪುಸ್ತಕವೊಂದನ್ನು ನೆಪಮಾತ್ರಕ್ಕೆ ಹಿಡಿದು, ಶಾಮುವಿನ ಮುಖವನ್ನೇ ನೋಡುತ್ತಿದ್ದಳು. ಅವನೇನು ಹೇಳುವನೋ ಎಂದು ಮೈಯೆಲ್ಲಾ ಕಿವಿಯಾಗಿತ್ತು.

"ಅದು ಸರಿ. ಆದರೆ ನನಗೆ ಹೆಣ್ಣು ಯಾರು ಕೊಡುತ್ತಾರೆ?"

"ನೀವು ಮೊದಲು ಮದುವೆಯಾಗಲು ಒಪ್ಪಿ. ನಿಮಗೆ ನಾಲ್ಕು ಮದುವೆಗಳನ್ನು ಮಾಡಲು ನಾನು ತಯಾರು."

"ಸಧ್ಯ ಕೈ ಮುಗಿದೆ ದೇವಿ. ಒಂದು ಮದುವೆ ಮಾಡಿಕೊಂಡೇ ಈ ಅನುಭವ! ಇನ್ನು ನಾಲ್ಕು ಮದುವೆ ಮಾಡಿಕೊಂಡರೆ ನೀವು ನಾಲ್ಕು ಜನರೂ ಸೇರಿ ನನ್ನ ನಾಲ್ಕು ತುಂಡಾಗಿ ಮಾಡಿಬಿಡ್ತೀರಿ."

"ಮದುವೆ ಎಂದರೆ ನಾನು ನಿಮ್ಮನ್ನು ಹೆದರಿಕೊಳ್ಳುವ ಹಾಗೆ ಮಾಡಿ

ದೀನಿ. ಆದರೆ ಎಲ್ಲರೂ ನನ್ನಂತಹವರೇ ಇರುತ್ತಾರೆಯೇ ? ಒಳ್ಳೆಯ ಹೆಂಡತಿ ಯರೂ ಇರ್ತಾರೆ."

ಶಾಮು ಮೀರಳೊಡನೆ ಚರ್ಚೆಮಾಡಿ ದಣಿದ. ಮೂರೂವರೆ ವರ್ಷದ ಅವಳ ಸತತ ಹಿಂಸೆಯ ಫಲವಾಗಿ ಶಾಮು ಎರಡನೆ ಮದುವೆಗೆ 'ಹೂಂ' ಎನ್ನಲೇಬೇಕಾಯಿತು.

"ಏನಾದರೂ ಮಾಡಿಕೋ. ನಾನು ನಿನ್ನ ಕೈಗೊಂಬೆಯಾಗಿದ್ದೇನೆ" ಎಂದು ಶಾಮು ಹೇಳಿದಾಗ ಮೀರ ಆಶ್ಚರ್ಯ, ಆನಂದದಿಂದ

"ಒಪ್ಪಿಕೊಂಡಿರಾ ?" ಎಂದಳು.

"ನಿನ್ನ ಹಿಂಸೆ ತಡೆಯಲಾರದೇ 'ಹಾಳಾಗಿ ಹೋಗಲಿ, ನಿನ್ನ ಹಿಂಸೆ ತಪ್ಪಲಿ' ಎಂದು ಒಪ್ಪಿಕೊಂಡಿದ್ದೇನೆ."

ಮೀರ ಕುಳಿತಿದ್ದ ಜಾಗದಿಂದ ಎದ್ದು ಬಂದು ಶಾಮುವಿನ ಕೆನ್ನೆ ತಟ್ಟಿ "ಒಳ್ಳೆಯ ಹುಡುಗ" ಎಂದಳು.

ಶಾಮು ಒರಟಾಗಿ ಅವಳ ಕೈ ತಳ್ಳಿ ಹೇಳಿದ "ಸಾಕು ಈ ನಾಟಕ."

"ನೀವು ಇನ್ನು ಕೋಪಿಸಿಕೊಂಡು ಹೊಡೆದರೂ ನನಗೆ ವ್ಯಥೆಯಿಲ್ಲ."

"ನಿನ್ನ ಹೊಡೆಯುವುದಿರಲಿ. ನಿನ್ನ ಕೈಲಿ ಹೊಡೆಸಿಕೊಳ್ಳದಿದ್ದರೆ ಸಾಕು."

"ನನ್ನಿಂದ ಹೊಡೆಸಿಕೊಂಡೋರಿಗಿಂತ ಹೆಚ್ಚಾಗಿ ಹೇಳ್ತಿದೀರಿ" ಮೀರ ಮುನಿಸಿನಿಂದ ಕೇಳಿದಳು.

"ಕೈನಿಂದ ಹೊಡೆಸಿಕೊಂಡರೇ ಏಟೇ? ನೀನು ಬಾಯಿಂದಲೂ ಹೊಡೆಯಬಲ್ಲೆ. ಮಾತಿನಿಂದಲೂ ಹೊಡೆಯುತ್ತೀಯಾ."

ಶಾಮುವಿನ ಮಾತಿನಲ್ಲಡಗಿದ್ದ ಗೂಡಾರ್ಥ ಮೀರಳನ್ನು ನೋಯಿಸಿತು. ತಾನು ಅವನಿಗೆ ಮರುಮದುವೆಯಾಗುವಂತೆ ಒತ್ತಾಯ ಮಾಡುತ್ತಿರುವುದು ಯಾರ ಸುಖಕ್ಕಾಗಿ ? ತನ್ನಿಂದ ಅವನಿಗೆ ಮನಶ್ಶಾಂತಿಯಾಗಲಿ, ವಂಶದ ಬೆಳ ಕಾಗಲಿ ಸಿಕ್ಕಲಿಲ್ಲ. ಈ ನ್ಯೂನತೆಯನ್ನು ಹೋಗಲಾಡಿಸಲೆಂದೇ ಅವಳು ಅವನಿಗೆ ಮದುವೆಯಾಗಲು ಬಲವಂತ ಮಾಡಿದ್ದಳು.

ಮೀರ ತನ್ನ ಜೀವನದ ಪರಮಗುರಿಯನ್ನು ಸಾಧಿಸಹೊರಟಿದ್ದಳು. ಚಿಕ್ಕಂದಿನಿಂದಲೂ ವೈದ್ಯಳಾಗಬೇಕೆಂದು ಅವಳು ಕಾಣುತ್ತಿದ್ದ ಕನಸು ನನ ಸಾಗ ತೊಡಗಿತ್ತು.

ಆದರೆ ಶಾಮು ?

ವೈದ್ಯವೃತ್ತಿಯಲ್ಲಿ ಅವಳಿಗೆ ತೃಪ್ತಿ, ಶಾಂತಿ, ಸಮಾಧಾನ ಸಿಕ್ಕುವು ದೆಂಬ ಪೂರ್ಣ ಭರವಸೆಯಿತ್ತು.

ಆದರೆ ಶಾಮುವಿಗೋ? ಕತ್ತೆಯಂತೆ ದುಡಿದು, ತಿಂದು, ಹಣ ಶೇಖರಿಸುವುದೇ ಅವನ ಗುರಿಯಾಗಬೇಕೆ?

ತಾನಂತೂ ಒಂದು ದಿನ ಹಳ್ಳಿಯಲ್ಲಿದ್ದರೆ ಒಂದು ವರ್ಷ ನಗರದಲ್ಲಿರುವವಳು. ಅವಳಿಗೆ ವೈದ್ಯಳಾಗಿ ಹಳ್ಳಿಯಲ್ಲಿಯೇ ನೆಲೆಸಿ ಜನಸೇವೆ ಮಾಡುವ ಆಸೆಯಿದ್ದರೂ, ಶಾಮು ಅವಳನ್ನೇ ನೆಚ್ಚುವಂತಿರಲಿಲ್ಲ. ಅವನ ಅಪಾರ ಆಸ್ತಿ ಅನ್ಯರ ಪಾಲಾಗಬೇಕೆ? ಅದು ಶಾಮುವಿನ ಮಗುವಿಗೇ ಏಕೆ ಹೋಗಬಾರದು?

ಶಾಮುವಿನ ಮಗು ತನ್ನ ಮಗುವಾಗುವುದರಲ್ಲಿ ಅನುಮಾನವಿತ್ತು. ಆದರೂ ಅವನ ಹೆಂಡತಿಯಾಗಿ ಬರುವಾಕೆಯೊಡನೆ ತಾನು ಸಹಕರಿಸಿದರೆ, ಸವತಿಯರಾಗದೆ ಅಕ್ಕತಂಗಿಯರಾಗುವುದು ಸಾಧ್ಯವೇ ಇಲ್ಲವೇ? ಶಾಮುವಿನ ಸುಖಕ್ಕಾಗಿ, ಹಿತಕ್ಕಾಗಿ, ಆಸ್ತಿಗಾಗಿ ತಾನು ಅವನಿಗೆ ಮದುವೆಯಾಗಲು ಹೇಳಿದರೆ ತನಗೆ ದೊರೆತ ಮಾತಾದರೂ ಎಂಥದು?

ಮೀರಳಿಗೆ ಅದೇಕೋ ಅಳು ಬಂತು.

ತನ್ನ ವೀಣಾ ಬದುಕಿದ್ದಿದ್ದರೆ?

ಮೀರ ಮೊಳಕಾಲ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ಅವಳು ಅಳುವುದನ್ನು ನೋಡಿ ಶಾಮು ಚಕಿತನಾದ. ಸೋಮಾರಿತನದಿಂದ ಒರಗಿದ್ದ ಶಾಮು ತಟ್ಟನೆ ಎದ್ದು ಬಂದು, ಅವಳ ಭುಜ ಅಲುಗಿಸಿ ಮೃದುವಾಗಿ "ಮೀರಾ" ಎಂದು ಕೂಗಿದ.

"ವೀಣಾ ಇದ್ದಿದ್ದರೆ ನಾನು ನಿಮ್ಮನ್ನು ಹೀಗೆ ಪೀಡಿಸುತ್ತಿರಲಿಲ್ಲ. ಆ ಒಂದು ಬೆಳಕು ಹತ್ತು ದೀಪಗಳನ್ನು ಹೊತ್ತಿಸುತ್ತಿತ್ತು" ಎಂದು ಮೀರ ಬಿಕ್ಕಿದಳು. ವೀಣಳ ಪ್ರಸ್ತಾಪ ಬಂದೊಡನೆ ಶಾಮು ಮತ್ತಷ್ಟು ತಗ್ಗಿದ.

"ಹೋಗಲಿ ಅಳಬೇಡ ಮೀರ. ಕಳೆದು ಹೋದುದನ್ನು ಚಿಂತಿಸಿ ಫಲವಿಲ್ಲ. ನೀನು ಹೇಳಿದ ಹಾಗೆ ಕೇಳ್ತೀನಿಂತ ಹೇಳಿದೆನಲ್ಲಾ...."

"ನಾನು ನಿಮಗೋಸ್ಕರ ಹೇಳಿದರೆ ನೀವು ನನ್ನೇ ತಪ್ಪಿತಸ್ಥಳನ್ನಾಗಿ ಮಾಡ್ತೀರಿ."

"ಹೆಂಗಸರು ಅಳಬೇಕಾದರೆ ಗಂಡಸರ ಎದೆಯ ಮೇಲೆ ತಲೆಯಿಟ್ಟು ಅಳಬೇಕು. ಅದು ನಿನಗೆ ಗೊತ್ತಿಲ್ಲವೇ?" ಶಾಮು ನಗೆಯಾಡಿದ.

"ನಿಮ್ಮದು ಕಲ್ಲೆದೆ. ನನ್ನ ಕಣ್ಣೀರಿಗೆ ಕರಗೋದಿಲ್ಲ."

"ಆಗಲೇ ಕರಗಿ ಹೋಗಿದೀನಿ. ಇನ್ನು ಹೊಸದಾಗಿ ಕರಗೋದೆಲ್ಲಿಂದ ಬಂತು? ನನ್ನ ಮದುವೆ ವಿಷಯದಲ್ಲಿ ಇನ್ನೊಂದು ಮಾತು. ಮುಂದೆ

ಯಾವ ವಿಧವಾದ ತೊಡಕು ಬಂದರೂ ಅದನ್ನು ಸರಿಮಾಡುವ, ಸರಿಹೊಂದಿಸಿ ಕೊಳ್ಳುವ ಜವಾಬ್ದಾರಿ ನಿನ್ನದು. ಆಮೇಲೆ ನನ್ನ ದೂರಬಾರದು."

"ಆಗಲಿ."

"ಇನ್ನೊಂದು ಮಾತು. ನೀನು ತಪ್ಪು ಭಾವಿಸಬೇಡ. ನನಗೆ ಪಟ್ಟಣದ ಹುಡುಗಿ ಬೇಡ. ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದ ಹುಡುಗಿಯಾಗ ಬೇಕು."

ಮೀರಳ ಮನಸ್ಸಿನಲ್ಲಿಯೂ ಹಳ್ಳಿಯ ಹುಡುಗಿಯನ್ನೇ ಶಾಮುವಿಗೆ ತರುವ ಯೋಚನೆಯಿತ್ತು. ಪಟ್ಟಣದ ಹಡುಗಿಯಾದ ತನ್ನನ್ನು ಅವನು ಕಟ್ಟಿಕೊಂಡು ಸುಖ ಪಟ್ಟುದು ಅಷ್ಟರಲ್ಲಿಯೇ ಇತ್ತು. ಹಳ್ಳಿಯ ವಾತಾವರಣಕ್ಕೆ ಒಗ್ಗಿರುವ ಹುಡುಗಿಯನ್ನೇ ತರಲು ಅವಳು ನಿಶ್ಚಯಿಸಿದ್ದಳು. ಶಾಮುವಿನ ಮಾತು ಅವಳ ನಿಶ್ಚಯವನ್ನು ಮತ್ತಷ್ಟು ಧೃಡಪಡಿಸಿತು.

ಕೆನ್ನೆಯ ಮೇಲೆ ಕಂಬನಿ ಇದ್ದಂತೆಯೇ ಮೀರ ಶಾಮುವಿಗೆ ಮುತ್ತಿಟ್ಟು "ಥ್ಯಾಂಕ್ಸ್" ಎಂದಳು.

ತನ್ನನ್ನು ಅಪ್ಪಿಕೊಂಡಿದ್ದ ಕೈಗಳನ್ನು ಕಿತ್ತೆಸೆದು ಶಾಮು "ನನಗೇನೂ ನೀನು ಲಂಚಕೊಡಬೇಕಾಗಿಲ್ಲ" ಎಂದ.

"ಇದು ಲಂಚವಲ್ಲ. ನಮ್ಮಿಬ್ಬರಿಗೂ ರಾಜಿಯಾಯಿತೆಂದು ತೋರಿಸುವ ಕುರುಹು" ಎನ್ನುತ್ತಾ ಮೀರ ಕೆನ್ನೆ ಒರೆಸಿಕೊಂಡಳು.

ವೆಂಕಮ್ಮನವರಿಗೆ ಈ ಸಮಾಚಾರ ತಿಳಿಯುತ್ತಲೇ ಅವರಿಗೆ ದುಃಖ, ಸಂತೋಷ ಎರಡೂ ಒಮ್ಮೆಗೇ ಉಂಟಾದವು. ಮೀರಳಂತಹ ಹುಡುಗಿಯನ್ನು ಅವಲಂಬಿಸುವುದರಲ್ಲಿ ಶಾಮುವಿಗೆ ಯಾವ ಸುಖವೂ ಇಲ್ಲವೆಂಬುದು ಅವರಿಗೆ ತಿಳಿದಿತ್ತು. ಆದುದರಿಂದ ಅವನು ಮತ್ತೊಂದು ಮದುವೆಯಾಗುವುದೇ ಸರಿ ಎಂದು ಅವರಿಗೆ ಸಂತೋಷವಾದರೂ, ಎಲ್ಲ ವಿಧದಲ್ಲಿಯೂ ಸರ್ವಗುಣಸಂಪನ್ನಳಾದ ಮೀರ ಶಾಮುವಿಗೆ ತಕ್ಕ ಹೆಂಡತಿಯಾಗಲಿಲ್ಲವಲ್ಲಾ ಎಂಬ ದುಃಖವೂ ಆಯಿತು. ಮೀರಳಿಗೆ ಅವರು

"ದುಡಕಬೇಡಮ್ಮ. ನಿಧಾನವಾಗಿ ಯೋಚಿಸು, ಆಮೇಲೆ ಪಶ್ಚಾತ್ತಾಪಪಡಬೇಕಾದೀತು" ಎಂದರು.

ಮೀರ ನಕ್ಕು "ನಾನೆಲ್ಲಾ ಆಲೋಚಿಸಿ ತೀರ್ಮಾನಕ್ಕೆ ಬಂದಿದ್ದೇನೆ" ಎಂದಳು.

"ಹಾಗಾದರೆ ಸರಿ."

" ಅವರಿಗೆ ಈ ಬಾರಿ ಹಳ್ಳಿಯ ಹುಡುಗಿಯೇ ಆಗಬೇಕಂತೆ. ನೀವು ಕಂಡ ಹಾಗೆ ಒಳ್ಳೆಯ ಮನತನದ ಹುಡುಗಿ...."

" ಶಾಮುವಿನ ಸೋದರಮಾವ ಶೀನಪ್ಪನ ಮಗಳು ಸರಸಿಯೇ ಇದಾಳಲ್ಲಾ. ಅವಳನ್ನು ಶಾಮುವಿಗೆ ಕೊಡಬೇಕೆಂದು ಅವರು ನಿನ್ನ ಮದುವೆಗಿಂತಲೂ ಮೊದಲು ಪ್ರಯತ್ನಪಟ್ಟು ವಿಫಲರಾದರು. ಶಾಮು ಅದೇಕೋ ಸರಸಿಯನ್ನು ಬೇಡ ಎಂದುಬಿಟ್ಟ. ಅವಳಿಗೆ ಇನ್ನೂ ಮದುವೆ ಆಗಿಲ್ಲ. ಅವಳೂ ಹಳ್ಳಿಯಲ್ಲಿ ಹುಟ್ಟಿ ಬೆಳೆದವಳು. ಬೇಕಾದರೆ ಪ್ರಯತ್ನಪಡಬಹುದು" ಎಂದರು ವೆಂಕಮ್ಮ.

" ನಾನು ಇವರನ್ನು ಕೇಳಿ ಮುಂದೆ ಪ್ರಯತ್ನಪಡುತ್ತೇನೆ. ಅವಳು ನನ್ನ ಮದುವೇಲಿ ಬಂದಿದ್ದಳೂಂತ ಕಾಣುತ್ತೆ. ಹುಡುಗಿ ಸುಮಾರಾಗಿ ಇರಬೇಕಲ್ಲವೆ ?"

" ಚೆನ್ನಾಗಿರುವವರ ಗುಂಪಿಗೆ ಅವಳನ್ನ ಸೇರಿಸೋಕಾಗಲ್ಲ. ಸುಮಾರಾಗಿದಾಳೆ. ಒಳ್ಳೆ ಹುಡುಗಿ. ಒಳ್ಳೆ ಮನತನ."

ರಾತ್ರಿಯೇ ಮೀರ ಶಾಮುವಿನೊಡನೆ ಸರಸಿಯ ವಿಷಯವನ್ನು ಪ್ರಸ್ತಾಪಿಸಿದಳು. ಅವನು ಹಾಸಿಗೆಯ ಮೇಲುರುಳಿ ಆಗ ತಾನೆ ದೀಪವಾರಿಸಿದ್ದ. ಮೀರಳಿಗಿನ್ನೂ ನಿದ್ದೆ ಬಂದಿರಲಿಲ್ಲ. ಅವಳು ಶಾಮುವಿಗೆ

" ನಿದ್ದೆ ಬಂತೇ ?" ಎಂದಳು.

" ಇಲ್ಲ."

" ನಾನೊಂದು ವಿಷಯ ಹೇಳಬೇಕೂಂತ ಇದೀನಿ."

" ಸರಿ. ಅಪ್ಪಣೆಯಾಗಲಿ."

" ನಿಮ್ಮ ಸೋದರಮಾವನ ಮಗಳು ಸರಸಿ ಹೇಗಿದಾಳೆ ?"

" ಇದಾಳೆ—ನಾಲ್ಕು ಜನರಂತೆ."

" ಅವಳಾದರೆ ಪರವಾಗಿಲ್ಲವೇ ? ನೀವು ಒಪ್ಪಿಕೊಂಡರೆ ಮುಂದೆ ನಾನು ಪ್ರಯತ್ನಿಸುತ್ತೇನೆ."

" ಸರಸಿಯೇ ? ಅವಳಲ್ಲಿ ನನಗೆ ಯಾವತ್ತೂ ಮೆಚ್ಚಿಗೆಯಿಲ್ಲ."

" ಮೆಚ್ಚಿ ಮೆಚ್ಚಿ ನನ್ನ ಕೈ ಹಿಡಿದು ನೀವು ಪಡ್ತಿರೋ ಸುಖ ಅಷ್ಟರಲ್ಲಿಯೇ ಇದೆ. ಅವಳನ್ನ ನೀವು ಮದುವೆಯಾದರೆ ನೆಂಟು, ಸ್ನೇಹ ಎಲ್ಲಾ ಉಳಿಯುತ್ತದೆ. ಯೋಚನೆ ಮಾಡಿ ಹೇಳಿ."

" ನನ್ನ ಯೋಚನೆಗೆ ನೀನು ಏನು ಬೆಲೆ ಕೊಡ್ತೀಯಾ ?"

" ನಿಮ್ಮ ವರಸೆ ತೆಗೆದರಲ್ಲಾ. ಏನು ಹೇಳ್ತೀರಿ ?"

“ ನಂಗೆ ನಿದ್ದೆ ಬಂತು.”

“ ನಿಮ್ಮ ಅಭಿಪ್ರಾಯ ಏನು ಹೇಳಿ ” ಮೀರ ಗೋಗರೆದಳು.

ಶಾಮು ನಿದ್ದೆ ಬಂದವನಂತೆ ನಟಿಸಿ ಮಾತನಾಡಲಿಲ್ಲ. ಮೀರ ಎರಡು ನಿಮಿಷ ಕಾದು ಶಾಮುವಿನ ಹಾಸಿಗೆಯ ಮೇಲೆ ಬಂದು ಕುಳಿತು

“ ನಿಮ್ಮ ನಾಟಕ ಸಾಕು. ಯಾವುದೂ ಹೇಳಬಾರದೇ ?” ಎಂದಳು.

ಶಾಮು ಮಾತನಾಡಲಿಲ್ಲ. ಮೀರ ರೇಗಿಕೊಂಡು ಎದ್ದಳು. ಶಾಮು ಅವಳ ಸೆರಗನ್ನು ಬಿಗಿಯಾಗಿ ಹಿಡಿದಿದ್ದ.

“ ಬಿಡಿ. ನಿದ್ದೆ ಬಂದಿದ್ದರೂ ಕೈ ಮಾತ್ರ ಸೆರಗು ಹಿಡಿಯುತ್ತದೆ. ಇದು ಎಂತಹ ನಿದ್ದೆಯಪ್ಪ.”

ಶಾಮು ಸೆರಗನ್ನು ಮಾತ್ರ ಬಿಡಲಿಲ್ಲ.

ಮಾರನೆಯ ದಿನ ಬೆಳಿಗ್ಗೆ ಶಾಮು ತನ್ನ ಅಭಿಪ್ರಾಯವನ್ನು ಮೀರಳಿಗೆ ತಿಳಿಸಿದ.

“ ನೋಡು ಮೀರಾ, ನಿನ್ನ ಮದುವೆಯಾಗೋದಕ್ಕೆ ಮುಂಚೆ ನಾನು ಬಹಳ ಯೋಜನೆಗಳನ್ನು ಹಾಕಿಕೊಂಡಿದ್ದೆ. ಇಂತಹ ಹುಡುಗೀಗೆ ಆಗ ಬೇಕು, ರೂಪದಲ್ಲಿ ರಂಭೆಯೇ ಬರಬೇಕು ಅಂದುಕೊಂಡಿದ್ದೆ. ಈಗ ನನಗೆ ಯಾವ ಯೋಚನೆಯೂ ಇಲ್ಲ. ಇಂತಹ ಹುಡುಗಿಯೇ ಆಗಬೇಕೆಂದೂ ಇಲ್ಲ. ಸರಸಿಯಾದರೂ ಆಯಿತು. ಇಲ್ಲದಿದ್ದರೆ ಯಾರಾದರೂ ಆಯಿತು. ಆ ಹುಡುಗಿಯೇ ಬೇಕು, ಹೀಗೇ ಇರಬೇಕು ಎಂದು ಹೇಳುವ ಕಾಲ ಕಳೆದು ಹೋಯಿತು. ನಿನಗೆ ಸರಸಿ ಸರಿ ಎನಿಸಿದರೆ ನನಗೂ ಸರಿ. ಮುಂದೆ ಹೊಂದಿಕೊಂಡು ಹೋಗಬೇಕಾಗುವವರು ನೀವು. ನೀನು ಒಪ್ಪಿದರೆ ನನಗೂ ಒಪ್ಪಿಗೆ.”

ಶಾಮುವಿನ ಮಾತು ಕೇಳಿ ಮೀರ ಸರಸಿಯನ್ನೇ ವಿಚಾರಿಸುವುದಾಗಿ. ನಿರ್ಧರ ಮಾಡಿದಳು.

* * * *

ಎಂದೂ ಬಾರದಿದ್ದ ಮೀರ ಈಗ ತಮ್ಮಲ್ಲಿಗೆ ಇದ್ದಕ್ಕಿದ್ದಂತೆಯೇ ಬಂದುದನ್ನು ನೋಡಿ ಸರಸಿಯ ತಾಯಿ ಸಾವಿತ್ರಮ್ಮನಿಗೆ ಆಶ್ಚರ್ಯವಾ ಯಿತು. ಮದುವೆಯಾದ ತರುಣದಲ್ಲಿ, ವೀಣ ಹುಟ್ಟುವುದಕ್ಕೆ ಮುಂಚೆ ಮೀರ ಶಾಮುವಿನೊಡನೆ ಅವರ ಹಳ್ಳಿಗೆ ಹೋಗಿದ್ದಳು. ವೀಣ ಹುಟ್ಟಿದ ಮೇಲೆ ಸಾವಿತ್ರಮ್ಮ, ಶೀನಪ್ಪ ಶಾಮುವಿನ ಮನೆಗೆ ಬಂದಿದ್ದರೂ ಸರಸಿ ಬಂದಿರಲಿಲ್ಲ. ಶಾಮುವಿನ ಮದುವೆಯಾದ ಮೇಲೆ ಸರಸಿ ಶಾಮುವಿನ ಮನೆಯ ಕಡೆ

ತಿರುಗಿ ಸಹ ನೋಡಿರಲಿಲ್ಲ. ತನ್ನನ್ನು ಶಾಮುವಿಗೆ ಮದುವೆ ಮಾಡಲು ತಾಯಿ, ತಂದೆ ನಡೆಸಿದ ಪ್ರಯತ್ನ ಅವಳಿಗೆ ತಿಳಿದಿತ್ತು. ಆದರೆ ಶಾಮು ತನ್ನನ್ನು ತಿರಸ್ಕರಿಸಿ ಮೀರಳಿಗೆ ಮರುಳಾಗಿ ಮದುವೆಯಾದಾಗ, ಸರಸಿಗೆ ಶಾಮುವಿಗಿಂತಲೂ ಮೀರಳ ಮೇಲೆ ಹೆಚ್ಚು ಕೋಪ ಬಂದಿತ್ತು.

"ಪಟ್ಟಣದ ಹುಡುಗಿ ನಮ್ಮ ಶಾಮು ಮಾವನಿಗೆ ಮಾಟ ಮಾಡಿದ್ದಾಳೆ. ಅವಳ ಬೆಡಗಿಗೆ ಶಾಮು ಬಲಿಯಾಗಿಬಿಟ್ಟ" ಎಂಬುದೇ ಅವಳ ಸಿದ್ಧಾಂತವಾಗಿತ್ತು. ಶಾಮುವಿನ ಅಪಾರ ಐಶ್ವರ್ಯಕ್ಕೆ ಮೀರ ಒಡತಿಯಾದಾಗ, ಸರಸಿಯ ಒಡಲು ಉರಿದುಹೋಗಿತ್ತು. ವೀಣ ಸತ್ತು, ಮೀರ ಮತ್ತೆ ಓದಲು ಮೊದಲು ಮಾಡಿದಾಗ ಸರಸಿ ವ್ಯಂಗ್ಯ ನಗೆ ಬೀರಿ

"ನಾಯಿಬಾಲ ಎಂದಿದ್ದರೂ ಡೊಂಕು" ಎಂದು ಅಣಕವಾಡಿದಳು.

"ಶಾಮುವಿಗೆ ಹಾಗೆಯೇ ಆಗಬೇಕು" ಎಂದು ಸಹ ಅವಳಿಗೆ ಎನಿಸಿತ್ತು.

ಶಾಮುವಿಗೆ ಮದುವೆಯಾಗಿ ಹಲವಾರು ವರ್ಷಗಳು ಕಳೆದಿದ್ದರೂ, ಸರಸಿಗೆ ಮಾತ್ರ ಮದುವೆಯಾಗಿರಲಿಲ್ಲ. ಸರಸಿ ಮೀರಳಿಗಿಂತ ಮೂರು ನಾಲ್ಕು ವರ್ಷ ಚಿಕ್ಕವಳಾಗಿದ್ದರೂ ಅವಳಿಗೆ ಮದುವೆಯಾಗಿರಲಿಲ್ಲ. ಸರಸಿಯ ಜಾತಕದ ಪ್ರಕಾರ ಅವಳಿಗೆ ಮಾವನಿಲ್ಲದ ಮನೆ ಬೇಕಾಗಿತ್ತು. ಅವಳು ಹುಟ್ಟಿದ ಕೆಟ್ಟಗಳಿಗೆಯಿಂದಾಗಿ ಸರಸಿಯ ಮದುವೆ ಮುಂದುವರಿಯುತ್ತಲೇ ಇತ್ತು. ಸರಸಿ ಅವಳ ತಾಯಿ ತಂದೆಗೆ ದೊಡ್ಡ ಭಾರವಾಗಿದ್ದಳು. ಅವಳ ಮದುವೆ ಹೇಗಾದರೂ ಮುಗಿಸಿದರೆ ಸಾಕೆಂದು ಅವರು ಹಗಲಿರುಳೂ ಪ್ರಯತ್ನಿಸುತ್ತಿದ್ದರು.

ಮೀರ ಬಸ್ಸಿಳಿದು ಶೀನಪ್ಪನ ಮನೆಗೆ ಬಂದಾಗ ಸಂಜೆ ಆರು ಗಂಟೆಯಾಗಿತ್ತು. ಮನೆಯ ಮುಂಭಾಗದಲ್ಲಿ ಯಾರೂ ಇರಲಿಲ್ಲ. ಮೀರ ಒಳಗೆ ಹೋದಳು. ಕೊಟ್ಟಿಗೆಯಲ್ಲಿ ಸಾವಿತ್ರಮ್ಮ ಹಾಲು ಕರೆಯುತ್ತಿದ್ದರು. ಸರಸಿ ಕರುವನ್ನು ಹಿಡಿದು ನಿಂತಿದ್ದಳು.

ಮೀರಳನ್ನು ನೋಡಿ ಸಾವಿತ್ರಮ್ಮ ಆಶ್ಚರ್ಯ, ಆನಂದದಿಂದ

"ಬಾಮ್ಮ. ಶಾಮು ಬರಲಿಲ್ಲವೇ?" ಎಂದರು

"ಅವರು ಬರಲಿಲ್ಲ. ನಾನೊಬ್ಬಳೇ ಬಂದೆ" ಎನ್ನುತ್ತಾ ಮೀರ ಸರಸಿಯ ಕಡೆ ತಿರುಗಿ ಮುಗುಳ್ನಗೆ ಬೀರಿದಳು. ಸರಸಿಯೂ ಬಲವಂತದ ನಗು ನಕ್ಕಳು. ಸರಸಿಯ ಕಣ್ಣುಗಳು ಅಸೂಯೆಯಿಂದ ಮೀರಳ ಉಡಿಗೆ ತೊಡಿಗೆಯನ್ನು ಪರೀಕ್ಷಿಸುತ್ತಿದ್ದವು.

ಮೀರ ಬಿಳಿ ಷಿಫಾನ್ ಸೀರೆಯ ಮೇಲೆ ಪುಟ್ಟ ಹಸಿರು ಎಲೆಗಳಿದ್ದ ಸೀರೆಯನ್ನುಟ್ಟು, ಕಡು ಹಸುರಿನ ಚೋಲಿ ಧರಿಸಿದ್ದಳು. ಬಸ್ಸಿನಲ್ಲಿ.ಆಗ ತಾನೆ ಬಂದಿಳಿದಿದ್ದರಿಂದ ಅವಳ ಗುಂಗುರು ಕೂದಲು ಜಡೆಯಿಂದ ತಪ್ಪಿಸಿ ಕೊಂಡು ಹಾರಾಡುತ್ತಿತ್ತು. ಎಡಗೈಗೆ ರಿಸ್ಟ್‌ವಾಚು, ಬಲಗೈಲಿ ನಾಲ್ಕು ಚಿನ್ನದ ಬಳೆಗಳು, ಕೊರಳಲ್ಲಿ ಚಿನ್ನದಲ್ಲಿ ಸುತ್ತಿದ ಕರಿಮಣಿ, ಕಿವಿಯಲ್ಲಿ ಪುಟ್ಟ ವಜ್ರದ ಬೆಂಡೋಲೆ, ಕಾಲಿನಲ್ಲಿ ನವೀನ ಮಾದರಿಯ ಚಪ್ಪಲಿ, ಕೈಲಿ ಚರ್ಮದ ಸೂಟುಕೇಸು........

ಅವಳನ್ನು ನೋಡಿದಷ್ಟೂ ಸರಸಿಯ ಕಣ್ಣು ಕೆಂಪಗಾಯಿತು.

'ಇವಳೇನು ಮಹಾ ಚೆನ್ನಾಗಿದಾಳೆ' ಎಂದು ನಾಲಿಗೆ ಹೇಳಿದರೂ, ಮನಸ್ಸು 'ಚೆನ್ನಾಗಿದಾಳೆ, ತುಂಬಾ ಚೆನ್ನಾಗಿದಾಳೆ' ಎಂದು ನುಡಿಯುತ್ತಲೇ ಇತ್ತು.

ಸರಸಿ ಒರಟಾದ ನೂಲಿನ ಸೀರೆಯುಟ್ಟಿದ್ದಳು. ಕೈಗಳಲ್ಲಿ ಬಣ್ಣ ತಿರುಗಿದ ಮಾಸಲು ಗಾಜಿನ ಬಳೆಗಳು, ಕೊರಳಲ್ಲಿ ಗಾಜಿನ ಮಣಿಯ ಸರ. ಕಿವಿಯಲ್ಲಿ ಒಂದು ಕೆಂಪಿದ್ದ ಚಿನ್ನದ ತಟ್ಟು ಹಾಕಿದ್ದಳು ಸರಸಿ.

ಮೀರಳ ವೇಷಭೂಷಣಕ್ಕೆ ತನ್ನವನ್ನು ಹೋಲಿಸಿದಾಗ ಸರಸಿಗೆ ನಿರಾಶೆ, ಅಪಮಾನದಿಂದ ಅಳು ಬರುವಂತಾಯಿತು. ತಾಯಿ ಹಾಲು ಕರೆ ದಾಗುತ್ತಲೇ ಸರಸಿ ಕರುವನ್ನು ಕಟ್ಟಿಹಾಕಿ ಒಳಗೆಹೊರಟು ಹೋದಳು. ಸಾವಿತ್ರಮ್ಮ ಸಂಭ್ರಮದಿಂದ ಆಗ ತಾನೆ ಕರೆದ ಹಾಲಿನಲ್ಲಿ ಕಾಫಿ ಮಾಡಿ ಕೊಟ್ಟರು.

"ಶಾಮಣ್ಣ ಯಾಕಮ್ಮ ಬರಲಿಲ್ಲ."

"ನಿಮ್ಮಿಂದ ಒಂದು ಕೆಲಸವಾಗಬೇಕಾಗಿತ್ತು. ಆದ್ದರಿಂದ ನಾನೇ ಬಂದೆ."

"ನನ್ನಿಂದ ಕೆಲಸವೇ !"

"ಹೂಂ. ನೀವು ಆಗಲಿ ಎಂದರೆ ಹೇಳ್ತೀನಿ."

"ಅದೇನು ಹೇಳು."

"ಸರಸೀಗೆ ಎಲ್ಲಾದರೂ ಗಂಡು ಗೊತ್ತಾಗಿದೆಯೇ ?"

ಸಾವಿತ್ರಮ್ಮ ನಿಟ್ಟುಸಿರು ಬಿಟ್ಟು "ಅವಳ ಹಣೇಲಿ ಮದುವೆಯಾಗುವ ಯೋಗ ಬರೆದಿದೆಯೋ ಇಲ್ಲವೋ ಗೊತ್ತಿಲ್ಲಿ. ಅವಳ ಜಾತಕದ ಪ್ರಕಾರ ಅತ್ತೆ ಮಾವ ಇಲ್ಲದ ಮನೆಯಾಗಬೇಕು........"

"ಅತ್ತೆ ಮಾವ ಇಲ್ಲದ ಮನೆ ನಾನು ಹುಡುಕಿ ಕೊಟ್ಟರೆ ನೀವು ಅವ ಳಿಗೆ ಮದುವೆ ಮಾಡ್ತೀರಾ ?"

" ನಾವು ಕಾಣದ ಹಾಗೆ ಯಾರಿದಾರಮ್ಮಾ ?"

" ನೀವು ಕಂಡವರೇ ಇದಾರೆ."

ಸಾವಿತ್ರಮ್ಮನಿಗೆ ಮತ್ತಷ್ಟು ಆಶ್ಚರ್ಯವಾಯಿತು. ಅವರು ಕುತೂಹಲ ದಿಂದ " ಯಾರಿರಬಹುದು ? ನೆಮ್ಮದಿಯಾಗಿದಾರೆಯೇ ?" ಎಂದರು.

ಮೀರ ನಕ್ಕು " ಹೂಂ. ತುಂಬಾ ಅನುಕೂಲವಾಗಿದಾರೆ. ಬಹಳ ಆಸ್ತಿ ಇದೆ. ಆದರೆ ಎರಡನೇ ಮದುವೆ ?" ಎಂದಳು.

" ತುಂಬಾ ವಯಸ್ಸಾಗಿದೆಯೇನು ?"

" ಇಲ್ಲ. ನಿಮ್ಮ ಸರಸಿಯ ವಯಸ್ಸಿಗೆ ಸರಿಯಾಗಿದಾರೆ ಅವರು. ಇನ್ನೊಂದು ವಿಶೇಷ ಏನೊಂದ್ರೆ ಅವರ ಮೊದಲನೆ ಹೆಂಡತಿ ಬದುಕಿದಾರೆ."

"ಹಾಗಾದ್ರೆ ಅವರು ಯಾಕೆ ಇನ್ನೊಂದು ಮದುವೆ ಮಾಡ್ಕೋತಾರೆ?"

" ಮೊದಲನೆ ಹೆಂಡತಿಗೆ ಮಕ್ಕಳಿಲ್ಲ. ಮಕ್ಕಳಾಗುವುದೂ ಇಲ್ಲ. ಅದು ದರಿಂದ ಆಸ್ತಿ ಅನ್ಯಾಯವಾಗಿ ಕಂಡವರ ಪಾಲಾಗಬಾರದೊಂತ ಇನ್ನೊಂದು ಮದುವೆ ಮಾಡಿಕೊಳ್ಳಬೇಕೆಂದಿದಾರೆ."

" ಅವರ ಮೊದಲನೆಯ ಹೆಂಡತಿ ಇದಕ್ಕೆ ಒಪ್ಪಿಕೊಂಡಿದ್ದಾರೆಯೇ ?"

" ಹೂಂ. ಅವರೇ ಗಂಡನಿಗೆ ಬಲವಂತ ಮಾಡಿ ಇನ್ನೊಂದು ಮದುವೆ ಮಾಡಿಸೋಕೆ ಹೊರಟಿದಾರೆ."

" ಯಾರಪ್ಪಾ ಆ ಪುಣ್ಯಾತ್ಮರು. ತಾನು ಬದುಕಿರುವ ಹಾಗೇ ಗಂಡ ನಿಗೆ ಮಕ್ಕಳಾಗಲೀಂತ ಇನ್ನೊಂದು ಮದುವೆ ಮಾಡಿಸೋರು ಯಾರು? ನಾನು ಆಕೇನ ನೋಡಿದೀನೆಯೇ ?"

" ಓಹೋ. ಈಗಲೂ ನೋಡ್ತಿದೀರಿ."

ಸಾವಿತ್ರಮ್ಮ ಚಕಿತರಾಗಿ " ಮೀರಾ !" ಎಂದು ಕೂಗಿಕೊಂಡರು. ಒಂದು ಗಳಿಗೆ ಅವರಿಗೆ ಮಾತನಾಡುವುದಾಗಲಿಲ್ಲ, ಮೀರಳ ಹೃದಯ ಅವ ರಿಗೆ ಅರ್ಥವಾಯಿತು. ಅವರು ಗದ್ಗದ ದನಿಯಿಂದ

"ಈಗಲೇ ಅವಸರ ಏನಮ್ಮ ಮೀರಾ? ನಿನಗೆ ಮಕ್ಕಳಾಗುವ ವಯಸ್ಸು ಆಗಲೇ ಮೀರಿ ಹೋಯಿತೇ ? ಇನ್ನೂ ಚಿಕ್ಕ ವಯಸ್ಸು. ಇವತ್ತಲ್ಲದಿದ್ದರೆ ನಾಳೆ ಮಕ್ಕಳು ಆಗೇ ಆಗುತ್ತವೆ. ದುಡುಕಬೇಡ" ಎಂದರು.

ಊಹೂಂ. ನನಗೆ ಆಗೋದಿಲ್ಲ. ನನಗೆ ಗೊತ್ತು. ನೀವು, ನಿಮ್ಮ ಯಜಮಾನರು, ಸರಸಿ ಎಲ್ಲರೂ ಯೋಚನೆ ಮಾಡಿ ನಾನು ನಾಳೆ ಹೊರಡು ವುದರೊಳಗೆ ಯಾವುದನ್ನೂ ತಿಳಿಸಬೇಕು."

ಸಾವಿತ್ರಮ್ಮನವರು ಮೀರಳ ಸರಳ ಸ್ವಭಾವಕ್ಕೆ ಆಶ್ಚರ್ಯ ವ್ಯಕ್ತಪಡಿಸಿ

"ಮೀರಾ, ನಾವಾಗುವ ಹೊತ್ತಿಗೆ ಸರಿಯಾಯಿತು. ನೀನು ಮೂರನೆ ಯವರೊಬ್ಬರ ಮುಖಾಂತರ ಈ ಸಮಾಚಾರ ತಿಳಿಸೋದು ಬಿಟ್ಟು 'ಹೆಣ್ಣು ಕೊಡಿ' ಎಂಥ ನೀನಾಗಿಯೇ ಬಂದು ಕೇಳಬಹುದೆ?" ಎಂದರು.

"ಹಾಗೆ ಕೇಳಿದರೆ ಏನು ತಪ್ಪು?"

"ತಪ್ಪೇನಿಲ್ಲ. ಆದರೆ ಮೊದಲಿನಿಂದಲೂ ರೂಢಿ ಬಂದಿಲ್ಲ."

"ರೂಢಿ ಯಾರಿಗೆ ಬೇಕಾಗಿದೆ. ನಮ್ಮ ಕೆಲಸ ಆಗೋದು ಮುಖ್ಯ. ಈಗ ನಿಮ್ಮ ಅಭಿಪ್ರಾಯ ಏನು?"

"ಸರಸಿ ಶಾಮನ ಹೆಂಡತಿಯಾಗಲೀಂತ ನನಗೆ ಮೊದಲಿನಿಂದಲೂ ಆಸೆ ಇತ್ತು. ನಾನು ಹೇಳೋದೇನಿದೆ? ಬಡವನ ಕಾಲಿಗೆ ಕಲ್ಪವಲ್ಲಿ ತೊಡರಿ ಹಾಕಿಕೊಂಡ ಹಾಗಾಗಿದೆ."

"ಸರಸಿ ಏನಂತಾಳೋ?"

"ರಾಣಿ ಆಗ್ತೀಯಾ ಎಂದರೆ ಯಾವ ಹುಡುಗಿ ತಾನೆ ಬೇಡಾಂತಾಳೆ. ಅವಳು ದಮ್ಮಯ್ಯಾಂತ ಒಪ್ಪಿಕೊಳ್ಳುತಾಳೆ. ಮುಂದೆ ನೀವಿಬ್ಬರೂ ಸರಿ ಹೊಂದಿಸಿಕೊಂಡು ಅಕ್ಕ-ತಂಗಿಯರ ಹಾಗಿದ್ದರೆ ನನಗೂ ಸಂತೋಷ."

"ಸರಿಹೊಂದಿಕೊಂಡು ಹೋಗುವ ವಿಚಾರ ನಮಗೆ ಬಿಟ್ಟುಬಿಡಿ. ಸರಸಿ ಎಲ್ಲಿ? ಅವಳಿಗೆ ನಾನೇ ಈ ವಿಷಯ ಹೇಳ್ತೀನಿ."

"ಸರಸೀ....ಸರಸೀ...."

ಬಾಗಿಲ ಹಿಂದೆಯೇ ನಿಂತು ತಾಯಿ, ಮೀರಳ ಮಾತು ಕೇಳಿಸಿಕೊಳ್ಳು ತ್ತಿದ್ದ ಸರಸಿ ತಾಯಿ ಕೂಗಿದುದನ್ನು ಕೇಳಿ ಕೊಟ್ಟಿಗೆಗೆ ಓಡಿಹೋದಳು. ಅವಳ ಹೃದಯ ಸಂತೋಷದಿಂದ ಬಿರಿದುಹೊಗುತ್ತಿತ್ತು.

ಇನ್ನು ಮೇಲೆ ತಾನು ಶಾಮುವಿನ ಹೆಂಡತಿ! ಶಾಮುವಿನಂತಹ ಚೆಲುವ ತನ್ನ ಪತಿ! ಎಲ್ಲಕ್ಕಿಂತಲೂ ಮಿಗಿಲಾಗೆ ಅವನ ಐಶ್ವರ್ಯಕ್ಕೆಲ್ಲಾ ಇನ್ನು ಮುಂದೆ ತಾನು, ತನ್ನ ಮಕ್ಕಳು ಉತ್ತರಾಧಿಕಾರಿಗಳು!

ಮೀರ ತನ್ನನ್ನರಸಿ ಕೊಟ್ಟಿಗೆಗೆ ಬರುವಳೆಂಬುದು ಸರಸಿಗೆ ತಿಳಿದಿತ್ತು. ಆದುದರಿಂದ ಅವಳು ಏನೂ ಕಾಣದವಳಂತೆ ಹಸುವಿಗೆ ಹುಲ್ಲು ಹಾಕ ತೊಡಗಿದಳು.

"ಸರಸೀ" ಮೀರ ಕೊಟ್ಟಿಗೆಯ ಬಾಗಿಲಿನಲ್ಲಿ ನಿಂತಳು.

ಅವಳ ನಿಷ್ಕಪಟ ಮುಖ, ತುಂಬು ಗಾಂಭೀರ್ಯ, ಠೀವಿ ಸರಸಿಗೆ ತುಂಬಾ ಮೆಚ್ಚುಕೆಯಾದವು. ಆದರೆ ಈ ಮುಖವೇ ಅಲ್ಲವೇ ತಾನು ಮೊದಲಿ ನಿಂದಲೂ ಬಯಸುತ್ತಿದ್ದ ಶಾಮುವನ್ನು ತನ್ನಿಂದ ಸೆಳೆದುಕೊಂಡದ್ದು?

"ನಮ್ಮ ಹಳ್ಳಿಗೆ ಬರ್‍ತೀಯಾ ಸರಸೀ ?"

"ಬಂದರೆ ಏನು ಕೊಡ್ತೀರಿ ?" ಸರಸಿ ಪ್ರಶ್ನಿಸಿದಳು.

"ನಿನ್ನ ಶಾಮು ಮಾವನನ್ನು ನಿನಗೇ ಕೊಡ್ತೀನಿ" ಎಂದು ನಕ್ಕಳು ಮೀರಾ.

ಅವಳ ನಗುವಿನಲ್ಲಿ ಸ್ವಲ್ಪವಾದರೂ ಮತ್ಸರವಿರಲಿಲ್ಲ. ಎಳೆಯ ಮಗುವಿನ ತಿಳಿನಗೆ ಅವಳ ನಗು. ತನ್ನ ಗಂಡನನ್ನು ಮತ್ತೊಬ್ಬಳಿಗೆ ಒಪ್ಪಿಸುವ ಈ ಹೆಣ್ಣಿನ ಮನಸ್ಸು ಸರಸಿಗೆ ಅರ್ಥವಾಗಲಿಲ್ಲ.

ಶಾಮು ಮಾವ—ಅವನ ವಿಸ್ತಾರವಾದ ಎದೆ, ಉಕ್ಕಿನಂತಹ ತೋಳುಗಳು, ಆರೋಗ್ಯದಿಂದ ಕೆಂಪುಗೂಡಿದ ಚೆಲುವಾದ ಮುಖ, ಅವನ ಜಮೀನುಗಳು....

ಮುಗುಳ್ನಗೆಯಿಂದ ಸರಸಿ ಮೀರಳ ಕಡೆ ನೋಡಿ ತಲೆ ಅಲುಗಿಸಿದಳು.

* * * *

ಮೀರ ಹಳ್ಳಿಗೆ ಹಿಂತಿರುಗಿ ಬಂದಾಗ ಪತ್ರವೊಂದು ಅವಳ ಬರವನ್ನೇ ಎದಿರು ನೋಡುತ್ತಾ ಮೇಜಿನ ಮೇಲೆ ಮಲಗಿತ್ತು. ಶಾಮು ಮನೆಯಲ್ಲಿರಲಿಲ್ಲ. ಮೀರ ಪತ್ರದ ಮೇಲೆ ಬರೆದಿದ್ದ ಅಕ್ಷರವನ್ನು ಕೂಡಲೇ ಗುರುತಿಸಿದಳು. ವಿಜಯಳ ಅಕ್ಷರವೆಂದು ತಿಳಿದ ಕೂಡಲೇ ಮೀರ ಆತುರದಿಂದ ಪತ್ರ ಒಡೆದಳು.

"ಮೀರ,

ನಾನು ನಿನಗೆ ಯಾವತ್ತೂ ಕಾಗದ ಬರೆದಿರಲಿಲ್ಲ. ಆದರೆ ಈಗ ನನಗೆ ಏನು ಮಾಡುವುದಕ್ಕೂ ತೋರದಾಗಿದೆ. ಆದುದರಿಂದ ನಿನಗೆ ಈ ಕಾಗದ ಬರೆಯುತ್ತಿದ್ದೇನೆ. ನನ್ನ ಭಾವುಕತೆ ನಿನಗೆ ಹಿಡಿಸುವುದಿಲ್ಲವೆಂದು ನನಗೆ ಗೊತ್ತು. ನಾನಾದರೂ ಏನು ಮಾಡಲಿ ? ದೇವರು ನನ್ನ ಹೃದಯವನ್ನು ಕಲ್ಲಾಗಿ ಮಾಡಿದ್ದರೆ ಚೆನ್ನಾಗಿತ್ತು.

ಕಾಲೇಜಿಗೆ ರಜ ಬಂದಾಗಿನಿಂದ ನಾನು ಗೋಪಿಯನ್ನು ನೋಡಿರಲಿಲ್ಲ. ಅವರನ್ನು ನೋಡುವ, ಮಾತನಾಡಿಸುವ ಆಸೆ ದಿನದಿನಕ್ಕೆ ಉತ್ಕಟವಾಗಿ ಬೆಳೆಯಿತು. ಆದಿ ಅಂತ್ಯವಿಲ್ಲದ ಹೆಮ್ಮರವಾಯಿತು ನನ್ನಾಸೆ.

ಒಂದು ದಿನ ಬೆಳಗ್ಗೆ ಗೆಳತಿಯೊಬ್ಬಳ ಮನೆಗೆ ಹೊರಡಲು ನಾನು ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದೆ. ಆಗ ನನ್ನ ಕಿರಿಯ ತಂಗಿ ಉಷಾ ರೂಮಿಗೆ ಬಂದು "ಅಕ್ಕ ಯಾರೋ ಬಂದಿದಾರೆ. ಡ್ರಾಯಿಂಗ್ ರೂಮಿನಲ್ಲಿ ಕೂರಿಸಿದೀನಿ" ಎಂದಳು.

" ಯಾರದು ? ಹೆಂಗಸರೇ ?"

" ಅಲ್ಲ. ಯಾರೋ ನಿನ್ನ ಕ್ಲಾಸಂತೆ. ಉದ್ದವಾಗಿ ಜೆಂಡಾಗಿದಾರೆ" ಎಂದಳು ಆ ತುಂಟಿ. ಅವಳ ಕೆನ್ನೆಗೆ ಒಂದೇಟು ಕೊಟ್ಟು ಡ್ರಾಯಿಂಗ್ ರೂಮಿನೊಳಗೆ ಓಡಿಹೋದೆ.

ಅಲ್ಲಿ ಕುರ್ಚಿಯ ಮೇಲೆ ಗೋಪಿ ಕುಳಿತಿದ್ದರು. ನನ್ನನ್ನು ನೋಡು ತ್ತಲೇ ಎದ್ದು " ನಮಸ್ಕಾರ " ಎಂದರು.

ನನ್ನ ತಂದೆ ಮನೆಯಲ್ಲಿರಲಿಲ್ಲ. ಅವರು ಬೆಳಿಗ್ಗೆ ಎಂಟು ಗಂಟೆಗೇ ಕೆಲಸಕ್ಕೆ ಹೊರಟುಹೋಗಿದ್ದರು. ಹನ್ನೆರಡು ಗಂಟೆಯವರೆವಿಗೆ ಅವರು ಬರುವುದಿಲ್ಲವೆಂಬುದು ನನಗೆ ತಿಳಿದಿತ್ತು.

" ಉಷಾ, ಓವಲ್ಟೀನ್ ಮಾಡಿಸಿಕೊಂಡು ಬಾಮ್ಮ" ಎಂದು ತಂಗಿಗೆ ಕೂಗಿ ಹೇಳಿ, ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತೆ.

" ನಾನೇನು ಈಗ ನಿನ್ನ ಹತ್ತಿರ ಬರಲಿಲ್ಲ. ಅಲ್ವೇ ?"

" ಯಾಕೆ ?" ನಾನು ಆಶ್ಚರ್ಯದಿಂದ ಕೇಳಿದೆ.

ಅವರು ಮಾತನಾಡದೇ ತಮ್ಮ ಕೆನ್ನೆಯನ್ನು ಮುಟ್ಟಿ ತೋರಿಸಿದರು.

" ನನ್ನ ಆಸೆ ನಿಮಗೆ ಹೇಗೆ ತಿಳಿಯಿತು ?" ನಾನು ಕೇಳಿದೆ.

" ಇಬ್ಬರ ಆಸೆಯೂ ಒಂದೇ ಆದ್ದರಿಂದ ತಿಳಿಯಿತು."

" ಅಬ್ಬ ! ನಿಮಗಿಲ್ಲಿ ಬರೋಕೆ ಎಷ್ಟು ಧೈರ್ಯ. ಯಾವೋನೋ ಪುಂಡ ಬಂದು ನನ್ನ ಸತಾಯಿಸುತ್ತಿದಾನೇಂತ ಅಮ್ಮನಿಗೆ ಹೇಳಿ ನಿಮ್ಮನ್ನ ಹೊರಕ್ಕೆ ದಬ್ಬಿಸುತ್ತೇನೆ."

" ಹಾಗೇ ಆಗಲಿ. ನಾನು ಸಿದ್ಧ " ಎಂದರು ಅವರು, ನನ್ನ ಹವಳದ ಸರ ನೋಡುತ್ತಾ.

" ನೀವು ಸುಮ್ಮನೆ ನನ್ನ ಸರ ಯಾಕೆ ನೋಡುತ್ತೀರಿ ? ನಾನೂ ಗಮನಿಸಿದೀನಿ—ನೀವು ಯಾವಾಗ್ಲೂ ನನ್ನ ಸರಾನೇ ನೋಡುತ್ತಿರುತ್ತೀರಿ ಯಾಕೆ ?"

" ನಾನೇ ಆ ಸರ ಆಗಿದ್ದಿದ್ದರೇಂತ........"

ಉಷಾ ಓವಲ್ಟೀನ್ ತಂದಿರಿಸಿ ಹೋದಳು. ನಾನು ಕಪ್ಪನ್ನು ಅವರ ಮುಂದಿಟ್ಟು " ತಗೊಳ್ಳಿ " ಎಂದೆ. ಅವರು ಕುಡಿದು ಬಟ್ಟಲನ್ನು ಕೆಳಗಿರಿಸಿ

" ನಾನಿನ್ನು ಬರ್ತೀನಿ " ಎಂದರು.

" ನೀವು ಬಂದಿದ್ದು ಯಾಕೆ ?"

" ನಿನ್ನ ನೋಡಬೇಕೆನಿಸಿತು ಬಂದೆ."

" ಇಲ್ಲಿಗೆ ಬಂದರೆ ನಮ್ಮ ಮನೇಲಿ ನಮ್ಮ ತಂದೆ ಏನಾದರೂ ಅನ್ನ ಬಹುದು ಎನಿಸಲಿಲ್ಲವೇ ?"

" ಹೂಂ. ಆದರೆ ಎಲ್ಲಕ್ಕಿಂತಲೂ ನಿನ್ನ ನೋಡುವ ಆಸೆ ಬಲವಾಗಿತ್ತು. ನಿಮ್ಮ ತಂದೆ ಬಹಳ ಹಳೆಯ ಕಾಲದವರ ತರಹವೇನು ?"

" ಸುಮಾರಾಗಿ ಹಳೆಯ ಕಾಲದವರು. ನಾನು ನಿಮ್ಮೊಡನೆ ಮಾತು ಕತೆ ಆಡ್ತೀನೆಂದು ತಿಳಿದರೆ ನನ್ನ ಸಿಗಿದುಬಿಡ್ತಾರೆ."

" ನನ್ನ ಜೊತೆ ಬರೀ ಮಾತುಕತೆಯೇ? ಇನ್ನೇನೂ ಇಲ್ಲವೇ?"

" ಇನ್ನೇನೂ ಇಲ್ಲ."

" ವಿಜಯ್, ನೀನ್ನೊಬ್ಬ ಸುಂದರ ಸುಳ್ಳುಗಾತಿ."

"ಹಾಗೆಲ್ಲಾ ಮಾತಾಡಬೇಡಿ. ನನಗೆ ತುಂಬಾ ಕಷ್ಟ ಆಗತ್ತೆ."

" ಕಷ್ಟ ಯಾಕೆ ?"

ನಾನು ನನ್ನ ಕೊರಳಿನಲ್ಲಿದ್ದ ಹವಳದ ಸರವನ್ನು ತೋರಿಸಿ

" ಈ ಸರಕ್ಕೆ ಬದಲು ನಿಮ್ಮ ತೋಳ ಹಾರ...." ಎನ್ನುವಷ್ಟರಲ್ಲಿ ಅವರು ಎದ್ದು ನಿಂತು

" ನಿನ್ನಾಸೆಯನ್ನು ಪೂರಯಿಸಿ ಬಿಡುತ್ತೇನೆ" ಎನ್ನುತ್ತಾ ಹತ್ತಿರ ಬಂದರು.

ಅಷ್ಟರಲ್ಲಿ ಉಷಾ ಒಳಗೆ ಬಂದು, ಅವರು ಕುಡಿದಿರಿಸಿದ್ದ ಬಟ್ಟಲನ್ನು ಎತ್ತಿಕೊಂಡು ಮತ್ತೆ ಹೊರಗೆ ಹೋದಳು.

" ನಿಮ್ಮ ಸಾಹಸ ಈಗ ಬೇಡ" ಎಂದೆ ನಾನು.

" ಮತ್ತೆ ಯಾವಾಗ?"

" ದೈವಕೃಪೆ ಒದಗಿ ಬಂದಾಗ."

ಅವರು ಒಂದು ಗಳಿಗೆ ಯೋಚಿಸುತ್ತಾ ನಿಂತು ಅನಂತರ " ಬರ್ತೀನಿ, ಆದರೆ ನಿನ್ನ ನೋಡಬೇಕೆನಿಸಿದಾಗ ಯಾರ ಹೆದರಿಕೆಯೂ ನನ್ನನ್ನು ಹಿಡಿದು ನಿಲ್ಲಿಸಲಾರದು" ಎಂದು ಹೇಳಿ ಹೊರಟುಹೋದರು.

ಅವರಿಗೆ 'ಬರಬೇಡಿ, ನಮ್ಮ ತಂದೆ ಬೆಂಕಿಯಂಥ ಮನುಷ್ಯರು' ಎಂದು ನಾನು ಹೇಗೆ ಹೇಳಲಿ ಮೀರಾ? ನನ್ನ ಕಾಲ ಮೇಲೆ ನಿಲ್ಲಲು ಇನ್ನೂ ಎರಡು ವರ್ಷಗಳಿವೆ. ಅವರೂ ಒಂದು ವರ್ಷ ವಿದ್ಯಾರ್ಥಿಯಾಗಿರಬೇಕು. ನನ್ನ ಸರ್ವಸ್ವಕ್ಕೆ 'ಬರಬೇಡಿ' ಎಂದು ಹೇಗೆ ಹೇಳಲಿ? ನಮ್ಮ ತಂದೆ ಇರುವಾಗ ಅವರು ಬಂದರೆ ದೊಡ್ಡ ಹಗರಣವೇ ನಡೆದು ಹೋಗುತ್ತದೆ. ಈಗಲೇ ಬಿರು

ಗಾಳಿ ಎಬ್ಬಿಸಲು ನನಗಾಸೆಯಿಲ್ಲ. ನಮ್ಮ ತಾಯಿ ಅವರು ಹೋದ ಮೇಲೆ ಅನುಮಾನದಿಂದ ಎರಡು ಮೂರು ಬಾರಿ ಅವರ ವಿಷಯವಾಗಿ ಕೇಳಿದರು. ಅವರು ಬರಲಿ ಎಂದು ನನಗೆ ಎಷ್ಟು ಆಸೆಯಿದೆಯೋ ಅಷ್ಟೇ ಹೆದರಿಕೆಯಿದೆ. ನೀನಾದರೂ ನನಗೆ ಮಾರ್ಗ ತೋರಿಸಲಾರೆಯಾ ?

ನಿನ್ನ

ವಿಜಯ.

ವಿಜಯಳ ಪತ್ರ ಮುಗಿಸಿ ಮೀರ ತನಗೆ ತಾನೇ ಹೇಳಿಕೊಂಡಳು

" ಗೋಪಿಯೊಬ್ಬ ಹುಚ್ಚು ಹುಡುಗ. ಯಾವ ಗಳಿಗೇಲಿ ನಾನು ಅವರಿಬ್ಬರಿಗೂ ಪರಿಚಯ ಮಾಡಿಸಿದೆನೋ "

ಕೂಡಲೇ ಅವಳು ವಿಜಯಳಿಗೆ ಪತ್ರ ಬರೆದಳು.

" ವಿಜಯ,

ಗೋಪಿಯಿಂದ ತಪ್ಪಿಸಿಕೊಳ್ಳಲು ನಿನಗೊಂದು ಮಾರ್ಗವಿದೆ. ಕಾಲೇಜು ಬಾಗಿಲು ತೆಗೆಯುವ ತನಕ ಪೂನಾಕ್ಕೆ ಹೋಗಿಬಿಡು. ಅವನು ನಿನಗಾಗಿ ಪೂನಾಗೆ ಬರಲಾರ. ಬಂದರೂ ನಿನ್ನ ವಿಳಾಸ ಅವನಿಗೆ ಹೇಗೆ ತಿಳಿಯ ಬೇಕು ? ಈಗಲೇ ಅಸಮಾಧಾನದ ಹೊಗೆ ಎಬ್ಬಿಸುವುದು ಜಾಣತನ ಅಲ್ಲ. ನಿಮ್ಮಿಬ್ಬರ ಕೋರ್ಸ್ ಮುಗಿಯುವವರೆಗೆ ಯಾವ ವಿಚಾರಕ್ಕೂ ಎಡೆಬೇಡ. ನಿನ್ನ ಕೆನ್ನೆ, ತುಟಿ ಸುರಕ್ಷಿತವಾಗಿವೆಯೆಂದು ನಂಬಿದ್ದೇನೆ. ನಿನ್ನ ಮುಂದಿನ ಪತ್ರ ಪೂನಾದಿಂದ ನಿರೀಕ್ಷಿಸಬಹುದೇ ?

ಮೀರ."

ಕಾಗದ ಬರೆದು ಮುಗಿಸಿ ಮೀರ ಅದನ್ನು ಬೋರನ ಕೈಲಿ ಪೋಸ್ಟಿಗೆ ಹಾಕಿಸಿ ನಿಶ್ಚಿಂತಳಾದಳು. ಸಂಜೆ ಶಾಮು ಮನೆಗೆ ಬಂದಾಗ ಮೀರ ತಾನು ತಂದಿದ್ದ ಶುಭ ಸಮಾಚಾರವನ್ನು ಶಾಮುವಿಗೆ ತಿಳಿಸಿದಳು. ಅವಳು ಹೇಳಿದುದನ್ನು ಕೇಳಿ ಶಾಮು ನಿರ್ವಿಕಾರಚಿತ್ತನಾಗಿ ನುಡಿದ.

" ಸರಿ. ನೀರಿನೊಳಗೆ ಬಿದ್ದಾಯಿತು. ಇನ್ನು ಮುಳುಗುವುದೂ, ತೇಲುವುದೂ ಅವರವರ ಬಲವನ್ನವಲಂಬಿಸಿದೆ."

" ಏನೋ ಆಗಬಾರದ್ದು ಆಗಿಹೋಗಿದೆ ಎನ್ನುವ ಹಾಗೆ ಆಡ್ತೀರಲ್ಲಾ " ಎಂದು ಮೀರ ಗದರಿಸಿದಳು.

* * * *

ಶಾಮುವಿನ ಮದುವೆ ನಿರಾಡಂಬರವಾಗಿ, ಸರಳವಾಗಿ ನಡೆಯಿತು. ಎರಡನೆಯ ಬಾರಿ ಕಂಕಣ ಧರಿಸಿ ಮದುವಣಿಗನಾಗಿದ್ದ ಶಾಮು

ಮದುವೆಯಲ್ಲಿ ಯಾವ ಉತ್ಸಾಹವನ್ನೂ ತೋರಿಸಲಿಲ್ಲ. ಈ ಮದುವೆ ತನ್ನ ಸೋಲು, ಎಂದು ನುಡಿಯುತ್ತಿತ್ತು ಅವನ ಮನಸ್ಸು. ಪುರೋಹಿತರು ಹೇಳಿದಂತೆ ಶಾಮು ಯಾಂತ್ರಿಕವಾಗಿ ತನ್ನ ಕೆಲಸಗಳನ್ನು ಮುಗಿಸಿದ.

ಶಾಮುವಿನ ಔದಾಸೀನ್ಯ ಸರಸಿಯನ್ನು ಕೆರಳಿಸಿತ್ತು. ಶಾಮುವಿಗದು ಎರಡನೆಯ ಮದುವೆಯಾದರೂ, ಸರಿಸಿಗದು ಮೊದಲನೆಯ ಮದುವೆ ಎಂಬುದನ್ನು ಶಾಮು ಮರೆತಂತಿತ್ತು. ಕೈಹಿಡಿದು 'ಸಪ್ತಪದಿ' ನಡೆಯುವಾಗ, ತಾಳಿ ಕಟ್ಟುವಾಗ, ಕುಂಕುಮ, ಗಂಧ ಬಳಿಯುವಾಗ ಶಾಮು ಒಂದು ಬಾರಿಯಾದರೂ ಮುಖದಲ್ಲಿ ಉಲ್ಲಾಸ ತೋರಿಸಲಿಲ್ಲ. ತನ್ನಲ್ಲಿರುವ ಉತ್ಸಾಹ, ಹುಮ್ಮಸ್ಸು ಅವನಲ್ಲಿಲ್ಲವೆಂದು ತಿಳಿದು ಸರಸಿಯ ಆಸೆಗಳೆಲ್ಲಾ ಮಂಕಾದವು.

ಮೀರಳನ್ನು ಮದುವೆಯಾಗುವಾಗ ಅವನಿಗೆ ಅದೆಷ್ಟು ಉತ್ಸಾಹವಿತ್ತು. 'ಮೀರ' ಎಂಬ ನುಡಿ ಕಿವಿಗೆ ಬಿದ್ದರೆ ಸಾಕು ಶಾಮುವಿನ ಮುಖ ಹಸಿರು ಹುಲ್ಲು ಕಂಡ ಕರುವಿನಂತಾಗಿಬಿಡುತ್ತಿತ್ತು. ಅವಳ ಮದುವೆಯಲ್ಲಿ ತನ್ನ ತಾಯಿಯೇ ಶಾಮುವಿನ ತಾಯಿಯ ಒಡವೆಗಳಿಂದ ಮೀರಳನ್ನು ಅಲಂಕರಿಸಿದ್ದರು. ಆ ಒಡವೆಗಳೆಲ್ಲಾ ಏನಾದವೋ? ಅವುಗಳಲ್ಲಿ ತನಗೆ ಏನೇನೂ ಪಾಲಿಲ್ಲವೇ?

ಧಾರೆಗೆ ಮುಂಚೆ ಮೀರಳೇ ಸರಸಿಯ ಬಳಿಗೆ ಬಂದು, ಅವಳ ಕೈಗಳಿಗೆ ಒಂದು ಜೊತೆ ಚಿನ್ನದ ಬಳೆ, ಕೊರಳಿಗೆ ಎರಡೆಳೆಯ ಚೈನು ಹಾಕಿ ಹೋಗಿದ್ದಳು.

"ಉಳಿದ ಒಡವೆಗಳೆಲ್ಲಾ ಏನಾದವು?" ಎಂದು ಕೇಳುವ ಆತುರವಾಯಿತು ಸರಸಿಗೆ. ಅವಳು ಕಷ್ಟಪಟ್ಟು ತನ್ನ ನಾಲಿಗೆಯನ್ನು ಬಿಗಿಹಿಡಿದಳು.

ಧಾರೆ ಮುಗಿಯಿತು. ತನ್ನ ಮದುವೆ ಆಗುವಾಗಲೂ ಶಾಮುವಿನ ಕಣ್ಣುಗಳು ಎದುರಿಗೆ ಕುಳಿತಿದ್ದ ಸರಸಿಯ ಮೇಲಿರಲಿಲ್ಲ. ಮದುವೆಯ ಚಪ್ಪರದಲ್ಲಿ ಉತ್ಸಾಹದ ಸೋಗು ಹಾಕಿ, ತುಟಿಗಳಿಗೆ ನಗುವಿನ ಬಣ್ಣ ಮೆತ್ತಿಕೊಂಡು ಓಡಾಡುತ್ತಿದ್ದ ಮೀರಳನ್ನು ಅವನ ಕಣ್ಣುಗಳು ಅನುಸರಿಸುತ್ತಿದ್ದವು. ಸರಸಿ ಒಂದೆರಡು ಬಾರಿ ಶಾಮುವಿನ ಕಡೆ ಓರೆನೋಟ ಬೀರಿದಾಗ ಅವನು ಮೀರಳನ್ನು ನೋಡುತ್ತಿರುವುದನ್ನರಿತು ಕುಪಿತಳಾದಳು.

ಮೀರಳಿಗೆ ತನ್ನ ಮದುವೆಯಲ್ಲಿ ನಿಜವಾಗಿಯೂ ಉತ್ಸಾಹ ಇದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಶಾಮು ಅವಳನ್ನೇ ನೋಡುತ್ತಿದ್ದ.

ಶಾಮುವಿನ ಮರುಮದುವೆ ತನ್ನ ಸೋಲು ಎಂಬುದು ಮೀರಳಿಗೂ ತಿಳಿದಿತ್ತು. ಮೇಲೆ ಅವಳೇ ಗೆದ್ದಿರುವಂತೆ ತೋರುತ್ತಿದ್ದರೂ, ಅಂತರಂಗದಲ್ಲಿ

ಅವಳೇ ಸೋತಿದ್ದಳು. ವಿಧಿಯಿಲ್ಲದೇ ಮೀರ ತನ್ನ ಸೋಲನ್ನು ಸ್ವಾಗತಿಸಿದ್ದಳು. ಶಾಮು ಸರಸಿಯ ಕೊರಳಿಗೆ ತಾಳಿ ಕಟ್ಟುವಾಗ ಅವಳ ಮನಸ್ಸು ಒಂದೇ ಒಂದು ಕ್ಷಣ ಚುರಕ್ಕೆಂದಿತು.

ರಾತ್ರಿಮಲಗುವ ಮನೆಯನ್ನು ಮೀರ ತಾನೇ ಶೃಂಗರಿಸಿದ್ದಳು. ಮೀರ, ಶಾಮು ಮಲಗುತ್ತಿದ್ದ ರೂಮು ಇಂದು ವಧೂವರರ ಶಯ್ಯಾಗೃಹವಾಗಿತ್ತು. ಮೀರಳ ಕೈವಾಡದಿಂದ ಹಾಸಿಗೆ ಹೂವಿನ ಹಾಸಿಗೆಯಾಗಿತ್ತು. ಮೀರ ಸರಸಿಯನ್ನು ತಾನೇ ಕರೆದುಕೊಂಡು ಬಂದು ಶಾಮುವಿಗೊಪ್ಪಿಸಿದಳು.

"ನಮ್ಮ ಹುಡುಗೀನ ನಿಮಗೊಪ್ಪಿಸಿದ್ದೀವಿ" ಎಂದವಳು ನಕ್ಕು ಹೇಳುವಾಗ ಶಾಮು ಮೀರಳ ಮುಖವನ್ನೇ ನೋಡುತ್ತಿದ್ದ. ಸರಸಿ ಅಲ್ಲಿರದಿದ್ದರೆ ಶಾಮು ಮೀರಳನ್ನೇ ಹೂವಿನ ಹಾಸಿಗೆಯ ಬಳಿಗೆ ಎಳೆದುಕೊಂಡು ಹೋಗುತ್ತಿದ್ದ. ಅವನ ಅಂತರಂಗ ಕಣ್ಣುಗಳಲ್ಲಿ ಸ್ಪಷ್ಟವಾಗಿ ಮೂಡಿತ್ತು. ಇನ್ನೊಂದು ಗಳಿಗೆ ತಾನಲ್ಲಿ ನಿಂತರೂ ಈ ವಕ್ರಗಂಡ ತನ್ನನ್ನೇ ರೂಮಿಗೆಳೆದುಕೊಂಡು ಹೋಗಬಹುದೆನಿಸಿತು ಮೀರಳಿಗೆ. ಮೀರ ಅಲ್ಲಿಂದ ಜಾಗ್ರತೆಯಾಗಿ ಬೇರೊಂದು ಕೊಠಡಿಗೆ ಹೋಗಿ ಕುಳಿತಳು.

ಕಾರಣವಿಲ್ಲದೇ ಅವಳ ಮನಸ್ಸು ವ್ಯಗ್ರಗೊಂಡಿತ್ತು. ತಾನು ಶಾಮುವನ್ನು ಪ್ರೀತಿಸುವುದಿಲ್ಲ, ಆದುದರಿಂದ ಅವರು ಬೇರೊಂದು ಮದುವೆಯಾದರೂ ಅವರಿಂದ ತನಗೇನೂ ಹಾನಿಯಾಗಲಾರದು ಎಂದವಳು ಭಾವಿಸಿದ್ದಳು. ಶಾಮು ಹತ್ತು ಮದುವೆಯಾದರೂ ತನ್ನ ಮನಸ್ಸು ಅಣುಮಾತ್ರವೂ ಚಲಿಸುವುದಿಲ್ಲವೆಂದು ಮೀರ ಭಾವಿಸಿದ್ದಳು. ಆದರೆ ಈ ದಿನ ತನ್ನ ಮನಸ್ಸೇಕೆ ಖಿನ್ನವಾಗಬೇಕು?

ಮೀರ ಲಾಂದ್ರವನ್ನು ದೊಡ್ಡದು ಮಾಡಿ ಬೀರುವಿನಿಂದ "ಅನಾಟಮಿ"ಯನ್ನೆಳೆದುಕೊಂಡಳು. ಅವಳ ಮನಸ್ಸಿನ ಅಸ್ಥಿರತೆ ಮಾಯವಾಗಿ, ಮೀರ 'ಅನಾಟಮಿ'ಯಲ್ಲಿ ಸಂಪೂರ್ಣ ಮಗ್ನಳಾದಳು.

ಬೆಳಿಗ್ಗೆ ಆರು ಗಂಟೆಗೆ ಶಾಮು ಬಂದು ಅವಳ ಕೈಯಿಂದ ಪುಸ್ತಕ ಕಸಿದುಕೊಂಡಾಗ, ಮೀರ ಬೆಚ್ಚಿ ಶಾಮುವಿನ ಕಡೆ ನೋಡಿದಳು. ಬಲವಂತದ ನಗುವಿನಿಂದ ಅವಳ ತುಟಿಗಳು ಅರಳಿದವು.

"ರಾತ್ರಿಯೆಲ್ಲಾ ಮಲಗಲೇ ಇಲ್ಲವೇನು?"

"ಯಾಕೋ ನಿದ್ದೆ ಬರಲಿಲ್ಲ. ಓದುತ್ತಾ ಕಳಿತುಬಿಟ್ಟೆ. ಸರಸಿ ಎಲ್ಲಿ?"

"ಇನ್ನೂ ನಿದ್ದೆ ಮಾಡ್ತಿದಾಳೆ. ನನಗೆ ಬೇಗ ಎಚ್ಚರವಾಗಿ ಹೋಯಿತು."

"ರಾತ್ರಿಯೆಲ್ಲಾ ಜಾಗರಣೆ ಮಾಡ್ಲಿಲ್ಲತಾನೇ ?" ಮೀರ ಕೊಂಕು ನಗೆ ಬೀರಿದಳು.

"ನಾನೇನೂ ಹೊಸ ಮದುವಣಿಗ ಅಲ್ಲವಲ್ಲ. ನೀನು ಯಾಕೆ ನಿದ್ದೆ ಮಾಡಲಿಲ್ಲ ಹೇಳು."

"ನನಗೆ ನಿದ್ದೆ ಬರಲಿಲ್ಲ. ಸರಸಿ ಎಂತಹ ಹುಡುಗಿ ?"

"ಒಳ್ಳೆಯ ಹುಡುಗಿ. ನಾನು ಹೇಳಿದ ಹಾಗೆ ಕೇಳ್ತಾಳೆ. ನಿನ್ನ ಹಾಗೆ ಅವಳು ಹಠಮಾರಿಯಲ್ಲ, ಮೊಂಡಿಯಲ್ಲ, ಹೆಡ್ಡಿಯಲ್ಲ, ಮೂರ್ಖಳಲ್ಲ...."

ಮೀರಳಿಗೆ ಅದುಮಿ ಹಿಡಿದಿದ್ದ ಅಳು ಉಕ್ಕಿ ಬಂತು. ಅವಳ ಕಣ್ಣುಗಳಲ್ಲಿ ಗಂಗೆ, ಯಮುನೆ ಅವತರಿಸಿದರು. ಶಾಮು ಮೀರಳನ್ನು ಕೀಟಲೆ ಮಾಡಲು ಯತ್ನಿಸಿದ್ದ. ಆದರೆ ತನ್ನ ಕೀಟಲೆ ಅವಳನ್ನು ಅಳಿಸುತ್ತದೆ ಎಂದವನು ತಿಳಿದಿರಲಿಲ್ಲ. ಮೀರ ಅಳಲು ಮೊದಲುಮಾಡುತ್ತಲೇ, ಶಾಮು ರೂಮಿನ ಬಾಗಿಲನ್ನು ಹಾಕಿ ಅವಳ ಬಳಿಗೆ ಬಂದು

"ಮೀರಾ, ನೀನೇ ಗೆದ್ದಿರುವೆ. ಆದರೂ ಯಾಕೆ ಅಳುತ್ತೀಯ ?" ಎಂದ.

"ಊಹೂ. ಸೋತಿರುವವಳು ನಾನೇ. ನಿಮ್ಮನ್ನು ಅಗ್ಗವಾಗಿ ಮಾರಿಬಿಟ್ಟೆ."

"ನನ್ನ ಬೆಲೆ ಎಷ್ಟು ಗೊತ್ತೆ ? ಒಂದೇ ಒಂದು ಸಿಹಿ ಮುತ್ತು."

"ಸರಸಿ ನಿಮಗೆ ಸಾಕಷ್ಟು ಕೊಡಲಿಲ್ಲವೇನೋ ?" ಮೀರ ಕಂಬನಿ ಒರೆಸಿಕೊಂಡು ಕೇಳಿದಳು.

ಶಾಮು ಮೀರಳ ಹಾಸಿಗೆಯನ್ನು ಹಾಸಿ, ಲಾಂದ್ರವನ್ನು ಊದಿ ಆರಿಸಿ

"ಮೀರಾ, ಈಗ ನಿದ್ದೆ ಮಾಡು. ನಾನೇನೂ ನಿನ್ನ ದ್ವೇಷಿಸುವುದಿಲ್ಲ. ಅದು ನಿನಗೆ ತಿಳಿದಿದೆ ತಾನೇ ?" ಎಂದ.

ಮೀರ ಹಾಸಿಗೆಯ ಮೇಲೆ ಮಲಗಿ "ಊಂ" ಎಂದಳು.

"ಹನ್ನೆರಡು ಗಂಟೆಯವರೆವಿಗೆ ಮಿಸುಕಾಡಬಾರದು" ಎನ್ನುತ್ತಾ ಶಾಮು ಕುರ್ಚಿಯ ಮೇಲೆ ಕುಳಿತ.

"ನೀವು ?"

"ನಿನಗೆ ನಿದ್ದೆ ಬರುವವರೆಗೆ ನಾನಿಲ್ಲೇ ಇರ್‍ತೀನಿ. ಆಮೇಲೆ ನಾನ

ಎದ್ದು ಹೋದರೆ ನೀನು ಪುಸ್ತಕ ಹಿಡಿಯುತ್ತೀಯೇನೋ ?" ಎಂದ ಶಾಮು.

ಐದು ನಿಮಿಷಗಳಲ್ಲಿ ಮೀರಳಿಗೆ ನಿದ್ದೆ ಬಂತು. ಶಾಮು ಅವಳನ್ನೇ ನೋಡುತ್ತಾ ಕುಳಿತಿದ್ದ. ಅವನ ಮುಖ ಅನೇಕ ಭಾವನೆಗಳ ರಣರಂಗ ವಾಗಿತ್ತು.

ಮೀರ ನಿದ್ರಿಸಿದ ಮೇಲೆ ರೂಮಿನ ಬಾಗಿಲನ್ನು ಮೆಲ್ಲನೆ ಮುಂದಕ್ಕೆ ಳೆದುಕೊಂಡು ಶಾಮು ಹೊರಗೆ ಬಂದ. ಸರಸಿ ಶಾಮು ಬರುವುದನ್ನೇ ನೋಡುತ್ತಾ ಹಾಲಿನಲ್ಲಿ ಕುಳಿತಿದ್ದಳು.

ಹೊಸ ಹೆಂಡತಿ ಬಂದಿರುವಾಗಲೂ ಇವರು ಮೊದಲ ಹೆಂಡತಿಯನ್ನು ಒಂದು ದಿನದ ಮಟ್ಟಿಗಾದರೂ ಬಿಡಲಾರರೇ ? ಸರಸಿಯ ಕಣ್ಣುಗಳಲ್ಲಿ ಅಸಮಾಧಾನವಿತ್ತು. ತನ್ನ ಬಾಹುಬಂಧನವನ್ನು ಮೆಲ್ಲನೆ ಅವರು ಬಿಡಿಸಿ ಕೊಂಡಾಗಲೇ ತನಗೆ ಎಚ್ಚರವಾಗಿತ್ತು. ದಾಂಪತ್ಯ ಜೀವನದಲ್ಲಿ ಮೀರ ಸೋತು ತನಗೆ ಶರಣಾಗತಳಾಗಿದ್ದಾಳೆ ಎಂದು ತನ್ನ ಭಾವನೆ. ಆದರೆ ಈಗ ತನಗೆ ತೋರತೊಡಗಿತ್ತು—ಅವಳು ಸೋತಿಲ್ಲ, ತನ್ನ ಪ್ರತಿಸ್ಪರ್ಧಿ ಎಂದು. ಈ ಗಳಿಗೆಗೂ, ಇನ್ನೊಂದು ಗಳಿಗೆಗೂ ಪತಿಯ ಒಲವು ಅವಳ ಕಡೆಗೇ ಹರಿಯುತ್ತಿದೆ. ಹಾಗಾದರೆ ಈ ಮನೆಯಲ್ಲಿ ತನ್ನ ಸ್ಥಾನವಾದರೂ ಏನು ?

ಶಾಮು ಸರಸಿಯ ಮುಖ ನೋಡಿ ನಸುನಕ್ಕು "ಆಗಲೇ ಎಚ್ಚರವಾಗಿ ಹೋಯಿತೇ ?" ಎಂದ.

ಸರಸಿ ತನ್ನ ಅಸಮಾಧಾನ ಅವನಿಗೆ ತಿಳಿಯಬಾರದೆಂದು ಬೇರೆ ಕಡೆ ತಿರುಗಿ "ಹೂಂ" ಎಂದಳು.

ಅದೇದಿನ ಮಧ್ಯಾಹ್ನದ ಬಸ್ಸಿಗೆ ಸರಸಿಯ ತಾಯಿ, ತಂದೆ ತಮ್ಮ ಹಳ್ಳಿಗೆ ಹೊರಟುಹೋದರು. ಅವರು ಬಸ್ಸಿಗೆ ಹೊರಟು ನಿಂತಾಗಲೂ ಮೀರಳಿಗೆ ಎಚ್ಚರವಿರಲಿಲ್ಲ. ರಾತ್ರಿಯೆಲ್ಲಾ ನಿದ್ದೆ ಮಾಡದಿದ್ದರಿಂದ ಮೀರ ಗಾಢನಿದ್ರೆಯಲ್ಲಿದ್ದಳು.

ತನ್ನ ತಾಯಿ, ತಂದೆ ಹೊರಟು ನಿಂತಾಗ ಸರಸಿ ಮುಚ್ಚಿದ ಬಾಗಿಲಿನ ಕಡೆ ನೋಡಿ

"ಎಲ್ಲಾ ಬರಿ ಬೂಟಾಟ. ನಮ್ಮ ತಾಯಿ, ತಂದೆಯನ್ನು ಕಳಿಸಿ ಕೊಡೋಕೆ ಎಚ್ಚರವಾಗದಷ್ಟು ನಿದ್ದೆಯೇ ? ಅಹಂಕಾರ" ಎಂದು ಮನಸ್ಸಿ ನಲ್ಲಿಯೇ ಹೇಳಿಕೊಂಡಳು.

ಸಾವಿತ್ರಮ್ಮ ಶಾಮುವಿಗೆ "ಬರ್ತೀವಿ ಶಾಮಣ್ಣ ಇನ್ನು ಸರಸಿಯ ಸುಖ, ದುಃಖ ನಿಮಗೇ ಸೇರಿದ್ದು. ಅವಳು ದುಡುಕಿದರೆ ನೀನು, ಮೀರ

ಕ್ಷಮಿಸಬೇಕು. ಮೀರಾ ಎಲ್ಲಿ? ಅವಳಿಗೆ ಹೇಳಿ ಹೋಗಬೇಕು..."

"ಮೀರ ನಿದ್ದೆ ಮಾಡ್ತಿದಾಳೆ. ನಾನೇ ಅವಳಿಗೆ ಹೇಳುತ್ತೇನೆ."

"ಹುಷಾರಾಗಿದಾಳೆ ತಾನೆ?"

"ಹೂಂ. ಏನೋ ಮದುವೆ ಗದ್ದಲದಲ್ಲಿ ಎರಡು ದಿನ ಚೆನ್ನಾಗಿ ನಿದ್ದೆ ಬರಲಿಲ್ಲವಂತೆ. ಪರವಾಗಿಲ್ಲ, ನಿಮ್ಮ ಪರವಾಗಿ ನಾನೇ ಅವಳಿಗೆ ಹೇಳುತ್ತೇನೆ."

ಸರಸಿಗೆ ಗಂಡನ ಮೇಲೂ ಕೋಪ ಬಂತು.

ಹೋಗಿ ಮೀರಳನ್ನು ಎಬ್ಬಿಸಬಾರದೆ? ಅವಳ ನಿದ್ದೆ ಅಷ್ಟೊಂದು ಅಮೂಲ್ಯವೇ?

ಸಾವಿತ್ರಮ್ಮ, ಶೀನಪ್ಪ ಹೊರಟುಹೋದರು. ಸರಸಿಗೆ ಒಂದೇ ಕಡೆ ಕುಳಿತು ಬೇಸರವಾಯಿತು. ತಾಯಿಯ ಮನೆಯಲ್ಲಿದ್ದಂತೆ ಇಲ್ಲಿ ಅವಳಿಗೆ ಮನೆಗೆಲಸಗಳಿರಲಿಲ್ಲ. ಪ್ರತಿಯೊಂದು ಕೆಲಸವನ್ನೂ ಇತರರು ಮಾಡು ತ್ತಿದ್ದರು.

ಸರಸಿ ರೂಮಿಗೆ ಹೋಗಿ ಕಿಟಕಿಯಿಂದ ಹೊರಗೆ ನೋಡುತ್ತಾ ಕುಳಿತಳು. ಶಾಮು ಅತ್ತೆ, ಮಾವನನ್ನು ಕಳುಹಿಸಿ ಒಳಗೆ ಬಂದ. ಗಂಡ ಒಳಗೆ ಬಂದೊಡನೆ ಸರಸಿ ಎದ್ದು ನಿಂತಳು. ಶಾಮು ಅವಳ ಪಕ್ಕದಲ್ಲಿ ಕುಳಿತು ಹೇಳಿದ.

"ಸರಸೀ, ನಾನು ನಿನಗೊಂದು ಮಾತು ಹೇಳಬೇಕೆಂದಿದ್ದೇನೆ. ಮೀರಳ ಮನಸ್ಸು ನೋಯಿಸದಂತೆ ನೀನು ಎಚ್ಚರವಾಗಿರು."

"ನಾನೇನೂ ಈಗ ಅವರನ್ನು ನೋಯಿಸಲಿಲ್ಲವಲ್ಲಾ."

"ನಾನು ಈಗಿನ ಮಾತು ಹೇಳಲಿಲ್ಲ. ಮೀರ ಬಹಳ ನೊಂದಿದ್ದಾಳೆ. ಮೇಲೆ ನಗುತ್ತಿದ್ದರೂ ಅವಳು ಜಾನೀನ ಕಳೆದುಕೊಂಡಾಗಿನಿಂದಲೂ ಸುಖ ವಾಗಿಲ್ಲ. ನೀವಿಬ್ಬರೂ ಅನ್ಯೋನ್ಯವಾಗಿರಬೇಕೆಂದು ನನ್ನಾಸೆ."

"ನಾನೇನೂ ಜಗಳಗಂಟಿಯಲ್ಲ."

"ಏನೇ ಹುಡುಗಿ ಈಗಲೇ ನನ್ನ ಕೈಲಿ ಜಗಳಕ್ಕೆ ಶುರುಮಾಡಿಬಿಟ್ಟೆ" ಎನ್ನುತ್ತಾ ಶಾಮು ಸರಸಿಯ ಕೆನ್ನೆಗೆ ಮೃದುವಾಗಿ ಹೊಡೆದು ಹೊರಗೆ ಬಂದ.

ಮೀರ ಅದೇ ತಾನೇ ತನ್ನ ನಿದ್ದೆಯನ್ನು ಮುಗಿಸಿ ಎದ್ದಿದ್ದಳು.

"ಅವರೆಲ್ಲಾ ಹೊರಟುಹೋದರೇನು?"

"ಹೂಂ. ನಾನೇ ನಿನ್ನ ಎಬ್ಬಿಸುವುದು ಬೇಡ ಎಂದೆ."

"ಛೇ, ಅವರೇನು ತಿಳಿದುಕೊಂಡರೋ? ನನ್ನ ಎಬ್ಬಿಸಿದ್ದರೆ ಪ್ರಪಂಚ ಮುಳುಗಿ ಹೋಗುತ್ತಿರಲಿಲ್ಲ."

" ಮೊದಲು ಊಟ ಮುಗಿಸಿ ಬಾ. ನಮ್ಮದಾಯಿತು."

'ನಮ್ಮದು' ಎನ್ನುವ ಪದ ಮೀರಳಿಗೆ ವಿಚಿತ್ರವಾಗಿ ತೋರಿತು. ಹೃದಯದಲ್ಲಿ ಏನೋ ಒಂದು ಬಗೆಯ ಸಂಕಟವಾಯಿತು. ಆದರೂ ಕೊರಳು ಕೊಂಕಿಸಿ ಮೀರ ಕೇಳಿದಳು.

" ನಮ್ಮದು ಎಂದರೇ ?"

" ನಾನು, ಸರಸಿ. ನೀನು ಈಗ ನಡಿ. ನಾನೂ ಬರುತ್ತೇನೆ."

" ನನ್ನ ಜೊತೆ ಒಂದು ಸಲ ಊಟ ಮಾಡ್ತೀರೇನು?"

" ಇಲ್ಲ. ಸುಮ್ಮನೆ ನೋಡುತ್ತಾ ಇರುತ್ತೇನೆ. ನೀನು ಸರಿಯಾಗಿ ಊಟ ಮಾಡ್ತೀಯೋ ಇಲ್ಲವೋಂತ."

" ನಾನೇನು ಅನ್ನ ಸತ್ಯಾಗ್ರಹ ಹೂಡಿರುವ ಕೈದಿಯಲ್ಲ" ಎನ್ನುತ್ತ ಮೀರ ಒಳಗೆ ಹೋದಳು.

ಮೀರ ಊಟ ಮುಗಿಸಿ ಬರುತ್ತಲೇ ಶಾಮು ಅವಳ ಕೈಗೆ ಪತ್ರ ವೊಂದನ್ನು ಕೊಟ್ಟ. ಮೀರ ಆತುರದಿಂದ ಕಾಗದ ಒಡೆದಳು.

" ಮೀರ,

ನಿನ್ನ ಮಾತಿನಂತೆ ಗೋಪಿಗೆ ಹೆದರಿ ಪುಣೆಗೆ ಓಡಿಬಂದಿದ್ದೇನೆ. ಆದರೆ ಅವರ ನೆನಪು ನನ್ನ ಬೆನ್ನಟ್ಟಿ ಬಂದಿದೆ. ಇಲ್ಲಿಗೆ ಬಂದಕೂಡಲೇ ವಾಪಸ್ಸು ಮೈಸೂರಿಗೆ ಹೊರಟು ಹೋಗೋಣವೆನಿಸಿತು. ನಾನು ಊರಲ್ಲಿಲ್ಲದಿರುವು ದನ್ನು ತಿಳಿದು ಅವರಿಗೆಷ್ಟು ನಿರಾಶೆಯಾಗುವುದೋ ? ಗೋಪಿಯಿಲ್ಲದ ಊರು ನನಗೆ ತುಂಬಾ ಶೂನ್ಯವಾಗಿ ತೋರುತ್ತಿದೆ. ನಾನು ಎಂದಿಗೆ ಊರಿಗೆ ಬರುತ್ತೇನೆಯೋ ? ಸಧ್ಯ ಕಾಲೇಜು ಬಾಗಿಲು ತೆಗೆದುಬಿಟ್ಟರೆ ಸಾಕು. ಮೀರಾ, ನೀನು ಯಾರನ್ನಾದರೂ ಪ್ರೀತಿಸಿದ್ದೇ ಆದರೆ ನನ್ನ ಕಷ್ಟ ನಿನಗೆ ಗೊತ್ತಾಗುತ್ತದೆ.

ವಿಜಯ."

ಕಾಗದ ಓದಿ ಮೀರಳಿಗೆ ಸಂತಾಪವಾಯಿತು. ವಿಜಯಳ ಹೃದಯ ವನ್ನು ಸೂರೆಗೊಂಡ ಗೋಪಿಯ ಮೇಲೆ ಅವಳಿಗೆ ಕೋಪ ಬಂತು. ಅವನಿಂದ ಅವಳಿಗೆಷ್ಟು ಹಿಂಸೆ ಎಂದು ನುಡಿಯಿತು ಮನಸ್ಸು. ಮೀರ ಕೂಡಲೇ ಕಾಗದ ಪೆನ್ನು ಹಿಡಿದು ಬರೆದಳು

" ವಿಜಯಾ,

ನೀನು ಯಾರನ್ನೂ ಪ್ರೀತಿಸಿಲ್ಲವೇ ಎಂದು ನನ್ನನ್ನು ಕೇಳಿರುವೆ. ಇದುವರೆಗೂ ನಾನು ಯಾರನ್ನೂ ಪ್ರೀತಿಸಿಲ್ಲ ಎಂದೇ ಭಾವಿಸಿದ್ದೆ. ನನ್ನ

ಮಿತಿಮೀರಿದ ಅಭಿಮಾನ, ಪ್ರತಿಷ್ಠೆ, ಹೆಮ್ಮೆ, ಅಹಂಕಾರದ ತುಳಿತಕ್ಕೆ ನನ್ನ ಹೃದಯದಲ್ಲಿದ್ದ ಪ್ರೇಮ ತಲೆಬಾಗಿಸಿತ್ತು. ನಾನು ಯಾರನ್ನೂ ಪ್ರೀತಿಸುವುದಿಲ್ಲ ಎಂದು ತಿಳಿದಿದ್ದೆ. ಆದರೆ ಈಗೀಗ ಅರಿವಾಗುತ್ತಿದೆ–ನಾನೂ ಪ್ರೀತಿಸುತ್ತೇನೆ ಎಂದು. ಆದರೆ ಯಾರನ್ನು ಎಂಬ ಪ್ರಶ್ನೆ ಹಾಕಬೇಡ. ಹಾಕಿದರೂ ನಿನಗೆ ಉತ್ತರ ಸಿಗುವುದಿಲ್ಲ. ನಿನ್ನ ಗೋಪಿಯನ್ನೇನೂ ಪ್ರೀತಿಸುವುದಿಲ್ಲ. ಧೈರ್ಯವಾಗಿರು.

ಮೀರಾ."

* * * *

ಕಾಲೇಜು ಮತ್ತೆ ಪ್ರಾರಂಭವಾದ ದಿನ ವಿಜಯ ಮೀರಳನ್ನು ನೋಡಿ ಗಾಬರಿಯಾಗಿ

" ಯಾಕೆ ಬಹಳ ಇಳಿದು ಹೋಗಿದೀಯ?" ಎಂದಳು.

" ನನ್ನ ವಿಷಯ ಇರಲಿ, ನೀನು ಯಾವಾಗ ಪುಣೆಯಿಂದ ಬಂದೆ?"

" ನಿನ್ನೆ ರಾತ್ರಿ."

" ಗೋಪಿ ನಿಮ್ಮ ಮನೆಗೆ ಪುನಹ ಹೋಗಿದ್ದನಂತೇನು?"

" ಹೂಂ. ಉಷಾ ಹೇಳಿದಳು 'ನೀನಿಲ್ಲದಾಗ ಆವತ್ತು ಬಂದಿದ್ದರಲ್ಲಾ ಅವರು ನಿನ್ನ ಕೇಳಿಕೊಂಡು ಬಂದಿದ್ದರು. ನಾನು ನೀನು ಪುಣೆಗೆ ಹೋದೆ ಎಂದು ಹೇಳಿದೆ' ಅಂತ."

" ಅವನು ಸಿಕ್ಕಿದರೆ ಚೆನ್ನಾಗಿ ದಬಾಯಿಸಿಬಿಡ್ತೀನಿ—ಮನೆಗೆ ಯಾಕೆ ಹೋಗಿದ್ದೇಂತ."

" ನನ್ನಾಣೆಯಿದೆ. ಇವತ್ತು ಅವರನ್ನು ನೋಡುವವರೆಗೆ ನನಗೆ ಸಮಾಧಾನವಿಲ್ಲ. ಈ ಪ್ರವಾಹಕ್ಕೆ ಅಣೆಕಟ್ಟು ಹಾಕಲು ಸಾಧ್ಯವಿಲ್ಲ ಮೀರಾ."

ಮೀರ ಅಕ್ಕರೆಯಿಂದ "ನೀನು, ನಿನ್ನ ಗೋಪಿ ಎಲ್ಲಾದರೂ ಹಾಳಾಗಿ ಹೋಗಿ" ಎಂದು ಬೈದಳು.

ಆಸ್ಪತ್ರೆಯ ಕಾಂಪೌಂಡಿಗೆ ಕಾಲಿಡುತ್ತಿದ್ದಂತೆ ವಿಜಯಳಿಗೆ ಗೋಪಿಯ ಭೇಟಿಯಾಯಿತು. ಗೋಪಿ ಕಂದು ಬಣ್ಣದ ಫ್ಲಾನಲ್ ಶರಾಯಿ ಹಾಕಿ, ಅದೇ ಬಣ್ಣದ ಕೋಟು ತೊಟ್ಟು, ಕೊರಳಿಗೆ ಸ್ಟೆತಾಸ್ಕೋಪಿನ ಹಾರ ಹಾಕಿಕೊಂಡು ನಿಂತಿದ್ದ. ವಿಜಯಳನ್ನು ಕಂಡರೂ ಕಾಣದವನಂತೆ ತಿರುಗಿ, ಮೀರಳಿಗೆ ಮಾತ್ರ ಪರಿಚಯದ ನಗೆ ಬೀರಿ, ಗೋಪಿ ತನ್ನ ಸಹಪಾಠಿ ಕಾಂತಳೊಡನೆ ಮಾತನಾಡತೊಡಗಿದ.

" ಏನು ಮಾಡಲೇ ಮೀರಾ, ಗೋಪಿ ಕೋಪಿಸಿಕೊಂಡಿದ್ದಾರೆ."

" ನೀನೂ ಸುಮ್ಮನಿದ್ದು ಬಿಡು."

"ಅವರು ಕಾಂತಾ ಕೈಲಿ ನಗ್ತಾ ಮಾತಾಡ್ತಿದಾರೆ. ನಾನು ಹೇಗೆ ಸುಮ್ಮನಿರಲಿ."

" ಇಷ್ಟೊಂದು ಹೊಟ್ಟೆಕಿಚ್ಚಿರಬಾರದು ಹೆಂಗಸರಿಗೆ."

" ಈಗ ಅವರನ್ನ ಹೇಗೆ ಸಮಾಧಾನ ಮಾಡಲಿ?"

" ಹಾಗಿದ್ದರೆ ಹೋಗಿ ಕ್ಷಮಾಪಣೆ ಕೇಳಿಕೋ."

" ಹೇಗೆ ಕೇಳಲಿ?"

ಮೀರ ದಡವಡನೆ ಗೋಪಿಯ ಬಳಿಗೆ ಹೋಗಿ "ಈಗ ನೀವು ಯಾವ ವಾರ್ಡಿಗೆ ಹೋಗುವಿರಿ?" ಎಂದಳು.

" ಕಾಂತರಾಜ ವಾರ್ಡಿಗೆ."

" ನಾನು ಚೆಲುವಾಂಬಾ ಆಸ್ಪತ್ರೆಗೆ ಹೋಗಬೇಕು. ನಮ್ಮಗಳ ಪೈಕಿ ಈ ದಿನ ಕಾಂತರಾಜಾ ವಾರ್ಡಿಗೆ ಯಾರೂ ಇಲ್ಲ. ವಿಜಯ ಒಬ್ಬಂಟಿಗಳಾಗಿದ್ದಾಳೆ. ದಯವಿಟ್ಟು ಅವಳೊಡನೆ....

ಗೋಪಿ ವಿಜಯಳ ಕಡೆ ನೋಡಿದ. ಅವಳ ಮಗುವಿನಂತಹ ಮುಖ ನೋಡಿದ ಕೂಡಲೇ ಗೋಪಿಯ ಮನಸ್ಸು ಪ್ರಸನ್ನಗೊಂಡಿತು. ವಿಜಯ ಅಳುಕುತ್ತಾ ಗೋಪಿಯೊಡನೆ ಹೊರಟಳು. ವಾರ್ಡಿನಲ್ಲಿದ್ದ ರೋಗಿಗಳ ರೋಗಗಳ ಇತಿಹಾಸ, ಲಕ್ಷಣ, ಟೆಂಪರೇಚರು, ಕೊಡುವ ಆಹಾರ ಎಲ್ಲವನ್ನೂ ತನಿಖೆ ಮಾಡಿದ್ದಾಯಿತು. ವಾರ್ಡಿನಿಂದ ಹೊರಗೆ ಬರುವವರೆಗೆ ಇಬ್ಬರೂ ಒಂದು ಮಾತನಾಡಲಿಲ್ಲ. ಹೊರಗೆ ಬರುತ್ತಲೇ ಗೋಪಿ ಬಿಗುವಾಗಿ ಹೇಳಿದ.

" ನಾನಿನ್ನು ಹೊರಡಲೇ?"

ಅವನ ಬಿಗು ನೋಡಿ ವಿಜಯಳಿಗೆ ಅಳು ಬಂತು. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು

" ಹೋಗಿ ಬೇಕಾದರೆ."

" ಬೇಕಾದರೆ ಹೋಗಬಹುದು. ಬೇಡದಿದ್ದರೆ?"

" ನಿಮ್ಮಿಷ್ಟ."

" ನಾನೇಕೆ ಇರಲಿ? ನನ್ನಿಂದ ತಪ್ಪಿಸಿಕೊಳ್ಳೋದಕ್ಕೆ ಜನ ಪೂನವರೆಗೆ ಓಡಿಹೋಗ್ತಾರೆ....ವಿಜಯ್ ಡಾರ್ಲಿಂಗ್, ಓ ನೀನಿಲ್ಲಿ ಅತ್ತರೆ ನಾನೇನೂ ಮಾಡುವ ಹಾಗಿಲ್ಲ. ಹೀಗೇ ದೂರ ನಿಂತು ಸುಮ್ಮನೆ ನೋಡಬೇಕಾಗುತ್ತದೆ. ಎಲ್ಲಿ ಕರ್‌ಚೀಫ್ ತಗೋ."

" ನನಗೇನೂ ಬೇಕಾಗಿಲ್ಲ."

" ಹಾಗಾದರೆ ನಾನೇ ಕಣ್ಣೀರು ಒರೆಸುತ್ತೇನೆ" ಎನ್ನುತ್ತಾ ಗೋಪಿ ಮುಂದಾದ. ವಿಜಯ ಹಿಂದೆ ಸರಿದು "ಸಧ್ಯ ಸುಮ್ಮನಿರಿ" ಎಂದಳು.

" ಹೇಗಿರಲಿ" ಎನ್ನುತ್ತಾ ಅವನು ಅವಳ ಸರದ ಕಡೆ ನೋಡಿದ.

ವಿಜಯ ನಕ್ಕುಬಿಟ್ಟಳು. "ನಿಮಗೆ ನನ್ನ ಸರದ ಮೇಲೆ ಕಣ್ಣು. ನಾಳೆಯಿಂದ ನಾನದನ್ನು ತೆಗೆದುಬಿಡುತ್ತೇನೆ."

" ಹಾಗೆ ಮಾತ್ರ ಮಾಡಬೇಡ."

" ನನ್ನ ಮೇಲಿನ ಕೋಪ ಹೋಯಿತೇ ?"

" ಇಲ್ಲ. ಇಷ್ಟು ಸುಲಭವಾಗಿ ಕೋಪ ಹೋಗೋದಿಲ್ಲ."

" ಹಾಂ, ಏನಾಗಬೇಕೋ ಕೋಪ ಹೋಗೋಕೆ ?"

" ಹೇಳಿ ಏನು ಪ್ರಯೋಜನ ? ನನಗದು ಸಿಕ್ಕುವುದಿಲ್ಲ."

" ದೂರದಿಂದಲೇ ಕೊಡುವಂತಹದಾದರೆ ಕೊಡುತ್ತೇನೆ."

ಗೋಪಿ ನಕ್ಕು "ಕಿಲಾಡಿ" ಎಂದ.

" ಆ ದಿನ ನೀವು ನಮ್ಮ ಮನೆಗೆ ಬಂದಾಗ ನನಗೆಷ್ಟು ದಿಗಿಲಾಯಿತು ಗೊತ್ತೇ ?"

" ನಾನೇನು ಮಾಡಲಿ? ನಿನ್ನ ನೋಡಿ ಬಹಳ ದಿನಗಳಾಗಿದ್ದವು. ನಿನ್ನನ್ನು ಒಂದು ಕ್ಷಣವೂ ನೋಡದಿರಲು ನನಗಾಗಲಿಲ್ಲ. ಆಮೇಲೆ ನನ್ನ ಧೈರ್ಯ ನೋಡಿ ನನಗೇ ಆಶ್ಚರ್ಯವಾಯಿತು."

" ಈ ವರ್ಷವೇನೋ ಪರವಾಗಿಲ್ಲ. ಹೌಸ್ ಸರ್ಜನ್ ಕೆಲಸ ಮುಗಿದು, ನೀವು ಬೇರೆ ಎಲ್ಲಾದರೂ ಕೆಲಸಕ್ಕೆ ಹೋದಾಗ ಏನು ಮಾಡ್ತೀರಿ ?"

" ನನ್ನ ಹುಡುಗೀನೂ ಕರ್ಕೊಂಡು ಹೋಗ್ತೀನಿ, ಅವಳ್ನ ಇಲ್ಲೇ ಬಿಟ್ಟು ಹೋಗೋದಿಲ್ಲ."

" ನಾನು ನಿಮ್ಮ ಜೊತೆ ಬರೋದಿಲ್ಲಾ"

" ನೀನೇ ಏನು ನನ್ನ ಹುಡುಗಿ ?"

ಅವನ ಮಾತು ಕೇಳಿ ವಿಜಯಳ ಮುಖ ಕೆಂಪಾಗಿಹೋಯಿತು.

" ನನ್ನ ಜೊತೆ ಬರೋಲ್ಲವೇ ನೀನು ?" ಗೋಪಿ ಕೇಳಿದ.

" ನಿಮ್ಮ ಜೊತೆ ಎಲ್ಲಿಗೆ ಬೇಕಾದರೂ ಬರುತ್ತೇನೆ."

" ನಮ್ಮಿಬ್ಬರ ಕೋರ್ಸ್ ಮುಗಿದುಬಿಟ್ಟರೆ ಸಾಕು. ಆಮೇಲೆ ಈ ಜಗತ್ತೇ ನಮ್ಮದು."

" ನಾನಿನ್ನು ಹೊರಡುತ್ತೇನೆ." ಎಂದು ವಿಜಯ ಫುಟ್‌ಪಾತಿನ ಮೇಲೆ ನಿಂತಳು.

"ಹೊರಡು. ನಿನ್ನ ಕಟ್ಟಿಹಾಕಿರುವವರು ಯಾರು?"

"ನೀವೇ" ಎಂದು ನಕ್ಕು ಹೊರಟಳು ವಿಜಯಾ.

ಮತ್ತೆ ಏನನ್ನೋ ಯೋಚಿಸಿ, ಮುಂದಿಟ್ಟ ಹೆಜ್ಜೆಯನ್ನು ಹಿಂದಿಟ್ಟು ವಿಜಯ ಕೇಳಿದಳು "ಒಂದು ಮಾತು."

ಗೋಪಿ ನಿಂತಲ್ಲಿಯೇ ನಿಂತಿದ್ದ.

"ಆ ದಿನ ನೀವು ನನ್ನ ಕೈ ಮೊದಲ ಬಾರಿಗೆ ನೋಡಿದಾಗ ಏನೋ ಒಂದು ವಿಷಯ ಹೇಳಿದ್ದಿರಿ....

"ಯಾವ ವಿಷಯ?"

"ನೀನು ಈ ಕಾಲೇಜಿನಲ್ಲಿರುವ ವಿದ್ಯಾರ್ಥಿಯೊಬ್ಬನನ್ನು ಮದುವೆ ಮಾಡಿಕೊಳ್ಳುತ್ತೀಯಾ ಎಂದು ಹೇಳಿದ್ದಿರಿ. ಹಾಗೆ ನಿಜವಾಗಿಯೂ ಹೇಳಿದ್ದಿರೋ ಅಥವಾ ತಮಾಷೆ ಮಾಡಿದ್ದಿರೋ?"

ಗೋಪಿ ನಗುತ್ತಾ ಹೇಳಿದ "ನಿನ್ನ ಕೀಟಲೆ ಮಾಡೋಕೆ ಹಾಗೆ ಹೇಳಿದ್ದೆ. ಆದರೆ ಅದು ನಿಜವಾಗತ್ತೆ ಅಂತ ನನಗೇ ತಿಳಿದಿರಲಿಲ್ಲ."

"ನೀವು ಹೇಳಿದ್ದು ನಿಜವಾಯಿತು ಎಂದು ಈಗ ಹೇಳಿದವರು ಯಾರು? ನಿಮ್ಮ ಮಾತನ್ನು ಸುಳ್ಳು ಮಾಡೋಕ್ಕೋಸ್ಕರವಾದರೂ...."

"ಊಂ....ಅಷ್ಟೊಂದು ಧೈರ್ಯ ನಿನಗಿದೆಯೆ?"

"ಯಾಕಿರಬಾರದೂಂತೀನಿ."

"ನಿನ್ನ 'ಕಿಡ್ನಾಪ್' ಮಾಡಿಕೊಂಡು ಹೋಗಿ........" ಎಂದು ಗೋಪಿ ವಿವರಿಸುವಷ್ಟರಲ್ಲಿ ವಿಜಯ ನಕ್ಕು "ಅಷ್ಟೊಂದು ಸಾಹಸ ಮಾಡಬೇಡಿ ಮಹರಾಯರೇ" ಎಂದಳು.

"ಯಾಕೆ?"

"ನಿಮ್ಮ ಜೊತೆ 'ಎಲೋಪ್' ಮಾಡೋಕೆ ನಾನು ತಯಾರು."

ತಾವು ನಿಂತಿರುವುದು ನಡುರಸ್ತೆಯಲ್ಲಿ ಎಂದು ನೆನೆದು ಗೋಪಿ ದೀರ್ಘವಾಗಿ ಉಸಿರೆಳೆದು

"ಹೂಂ. ಹೋಗು. ನೀನು ನನ್ನೆದುರಿಗೆ ಇದ್ದಷ್ಟೂ ಕಣ್ಣುರಿ ನನಗೆ" ಎಂದ.

"ಒಳ್ಳೇ ಮಾತಾಡ್ತೀರಿ. ನಿಮ್ಮ ಕಣ್ಣಿಗೆ ತಂಪು ಮಾಡಲೆಂದೇ ಬೆಳಿಗ್ಗೆ ಒಂದು ಗಂಟೆ ಕನ್ನಡಿ ಮುಂದೆ ಕುಳಿತಿದ್ದೆ. ನಿಮ್ಮನ್ನು ಕೇಳಿದರೆ ಕಣ್ಣುರಿ ನನಗೆ ಎಂದು ಹೇಳ್ತೀರಿ."

"ಕಣ್ಣಿಗೆ ಕಾಣ್ತಿರೋದು ಕೈಗೆ ಸಿಕ್ಕೋಲ್ಲವಲ್ಲಾಂತ ಅಷ್ಟೆ."

ವಿಜಯ ಕೊರಳು ಕೊಂಕಿಸಿ "ನನ್ನನ್ನು ಅಶರೀರಳೊಂತ ತಿಳ್ಕೊಂಡ್ಬಿದೀರಾ ?" ಎಂದಳು.

"ಯಾರಿಗೆ ಗೊತ್ತು ? ನೀನು ಅಶರೀರಳೋ ಅಲ್ಲವೋ ಅನ್ನೋದನ್ನ ಪರೀಕ್ಷೆ ಮಾಡೋಕೆ ಸಹ ನನಗೆ ಬಿಟ್ಟಿಲ್ಲ."

"ನಿಮ್ಮ ಮಾತು ಕೇಳುತ್ತಾ ನಿಂತರೆ ಮುಗಿದೇ ಹೋಯಿತು." ಎನ್ನುತ್ತಾ ವಿಜಯ ಮತ್ತೆ ಮುಂದೆ ಹೆಜ್ಜೆಯಿಟ್ಟಳು.

* * * *

ರಜೆಯಲ್ಲಿ ಹಳ್ಳಿಗೆ ಹೋಗಲೋ ಬೇಡವೋ ಎಂದು ಮೀರ ಯೋಚಿಸುತ್ತಿದ್ದಳು. ಈ ಬಾರಿ ಹಳ್ಳಿಗೆ ಹೋಗಲು ಅವಳು ಮೊದಲಿನಂತೆ ಆತುರಳಾಗಿರಲಿಲ್ಲ. 'ಹೇಗಿದ್ದರೂ ಸರಸಿಯಿದ್ದಾಳೆ' ಎನ್ನುವ ಸಮಾಧಾನ ಮತ್ತು ಔದಾಸೀನ್ಯ ಒಂದು ಕಡೆಯಾದರೆ ಶಾಮು, ಸರಸಿಯರ ಜೀವನವಾಹಿನಿಗಳ ಸಂಗಮ ಹೇಗಿದೆಯೇ ನೋಡಬೇಕೆನ್ನುವ ಕುತೂಹಲ ಮತ್ತೊಂದು ಕಡೆ.

ಮೀರಳ ಮನಸ್ಸು ಹೊಯ್ದಾಡುತ್ತಿರುವಾಗಲೇ ಶಾಮುವಿನಿಂದ ಕಾಗದ ಬಂತು. ಕಾಗದದಲ್ಲಿ ಶಾಮು ಮೀರಳಿಗೆ ಹಳ್ಳಿಗೆ ಬರುವಂತೆ ನಿರ್ಬಂಧ ಮಾಡಿ ಬರೆದಿದ್ದ.

ಸರಸಿ ಇಲ್ಲದೇ ಇದ್ದಾಗಲೂ ಶಾಮು ಅವಳನ್ನು ಅಷ್ಟೊಂದು ಬಲವಂತ ಮಾಡಿ ಕರೆದಿರಲಿಲ್ಲ.

ಪ್ರಾಕ್ಟಿಕಲ್ ಪರೀಕ್ಷೆ ಸಹ ಮುಗಿದಿತ್ತು. ಹಳ್ಳಿಗೆ ಹಿಂತಿರುಗುವ ಹಿಂದಿನ ಸಂಜೆ ಮೀರ, ಗೋಪಿ, ವಿಜಯ ವಾಕಿಂಗಿಗೆ ಹೊರಟರು. ಮೀರ, ವಿಜಯ ಇಬ್ಬರೇ ವಾಕಿಂಗಿಗೆ ಹೊರಡಬೇಕೆಂದು ನಿಶ್ಚಯಿಸಿದ್ದರು. ಆಮೇಲೆ ಮನಸ್ಸನ್ನು ಬದಲಾಯಿಸಿ, ಮೀರ ಗೋಪಿಯನ್ನು ತಮ್ಮೊಡನೆ ಬರುವಂತೆ ಆಹ್ವಾನಿಸಿದ್ದಳು. ಗೋಪಿಯನ್ನು ಕರೆಯಬೇಕೇ ಬೇಡವೇ ಎಂದು ಮೀರ ಯೋಚಿಸುತ್ತಿದ್ದಾಗ ವಿಜಯ

"ಅವರು ಬಂದರೆ ನಾನು ಬರೋದಿಲ್ಲ" ಎಂದಳು.

"ಬಿಡು. ನಾನು, ಗೋಪಿ ಇಬ್ಬರೇ ಹೋಗ್ತೀವಿ."

"ಗೋಪಿ ಬೇಡ ಮೀರ."

"ನಾನು ಬಂದರೆ ನಿಮಗಡ್ಡಿ ಏನೋ ?"

"ಅವರು ಬೇಡವೇ ಬೇಡ. ನಾವಿಬ್ಬರೇ ಹೋಗೋಣ."

"ಗೋಪಿ ನನ್ನ ಮಿತ್ರ. ಅವನನ್ನು ನಾನು ಕರೆದರೆ ತಪ್ಪಿಲ್ಲ" ಎಂದಿದ್ದಳು ಮೀರ.

ಸಂಜೆ ಮೂವರೂ ಉದ್ದಕ್ಕೆ ದಾರಿ ಸಾಗಿಸಿದ್ದರು. ಮೀರ ಗೋಪಿ ಮಾತನಾಡುತ್ತಿದ್ದರು. ವಿಜಯ ಮಾತ್ರ ಮೌನವಾಗಿ ತಲೆ ತಗ್ಗಿಸಿ, ಗೋಪಿ ಹೆಜ್ಜೆ ಹಾಕುವುದನ್ನೇ ನೋಡುತ್ತಾ ಬರುತ್ತಿದ್ದಳು.

ಊರಿಂದ ಬಹುದೂರ ಬಂದ ಮೇಲೆ ಅವರು ಮರಗಳ ಕೆಳಗೆ ಕುಳಿತುಕೊಂಡರು.

"ನಾಳೆನೇ ಊರಿಗೆ ಹೋಗ್ತೀರೇನು ನೀವು?" ಗೋಪಿ ಕೇಳಿದ.

"ಹೂಂ. ನೀವು ಈ ರಜದಲ್ಲಿ ಎಲ್ಲೂ ಹೋಗೋಲ್ಲವೇ?"

"ಇಲ್ಲ. ಮಿಸ್ ವಿಜಯ ಪರಾಂಜಪೆ ಹೋದ ಸಲದ ಹಾಗೆ ಪೂನಾಗೆ ಹೋಗಬಹುದೂಂತ ಕಾಣತ್ತೆ" ಗೋಪಿಯ ದನಿಯಲ್ಲಿ ಚೇಷ್ಟೆಯಿತ್ತು.

ಹುಲ್ಲು ಕಡ್ಡಿ ಅಗಿಯುತ್ತಿದ ವಿಜಯ ಮಾತನಾಡದೇ ಒಂದು ಕ್ಷಣ ಕುಳಿತಿದ್ದು, ನಂತರ ಹೇಳಿದಳು

"ನೀವು ಇದ್ದಕ್ಕಿದ್ದ ಹಾಗೆ ಮನೆಗೆ ಥಾಳಿ ಇಟ್ಟರೆ ನಾನು ತಾನೇ ಏನು ಮಾಡಲಿ? ಒಂದು ಕಡೆಯಿಂದ ನೀವು, ಮತ್ತೊಂದು ಕಡೆಯಿಂದ ಅಪ್ಪ ನನ್ನ ಮುತ್ತಿಗೆ ಹಾಕಿದರೆ ಗತಿಯೇನು? ಇಂತಹ ಸಮಯದಲ್ಲಿ ಪಲಾಯನ ಮಾಡುವುದೇ ಸರಿಯಾದುದು."

"ಈ ಸಲ ಮಾತ್ರ ಹಾಗೆ ಮಾಡಬೇಡಿ ಗೋಪೀನಾಥ್. ಹೋದ ಸಲ ಪೂನಾಗೆ ಹೋಗುವ ಸಲಹೆ ಕೊಟ್ಟಿದ್ದು ನಾನು. ನಿಮ್ಮಿಬ್ಬರ ಕೋರ್ಸ್ ಮುಗಿಯುವವರೆಗೆ ಯಾವ ಗಲಾಟೇನೂ ಎಬ್ಬಿಸಬೇಡಿ."

"ಆಮೇಲಾದರೂ ಮನೆ ರಣರಂಗವಾಗುತ್ತದೇನೋ" ಗೋಪಿ ಅನುಮಾನಿಸುತ್ತಾ ಹೇಳಿದ.

"ನಿಮ್ಮ ಮನೆಯವರು ಬಹಳ ಹಳೆಯ ಕಾಲದವರೇನೋ?" ಮೀರ ಕೇಳಿದಳು.

"ಹೂಂ. ಅವರಲ್ಲೂ ಮರಾಟಿ ಹುಡುಗೀನ ನಾನು ಮದುವೆ ಮಾಡ್ಕೋತೀನೀಂದ್ರೆ ಅವರು ಖಂಡಿತ ಒಪ್ಪೋದಿಲ್ಲ. ನನಗದು ಗೊತ್ತು. ನನ್ನ ವಿದ್ಯಾಭ್ಯಾಸವೇನೋ ಮುಗಿಯಿತು. ಒಂದು ಸರಿಯಾದ ಕೆಲಸ ಸಿಗುವವರೆಗೆ ಇಲ್ಲೇ ಹೌಸ್ ಸರ್ಜನ್ ಆಗಿರುತ್ತೇನೆ. ವಿಜಯಾನೂ ಇಲ್ಲೇ ಇರ್ತಾಳೆ ಅನ್ನೋದೊಂದು ಸಮಾಧಾನವಾದರೂ ನನಗಿರುತ್ತದೆ."

"ನೀನು ಏನು ಹೇಳ್ತೀಯ ವಿಜಯ?" ಮೀರ ಕೇಳಿದಳು.

"ಗೋಪಿ ಹೇಗೆ ಹೇಳಿದರೆ ಹಾಗೆ. ನಾನು ಓದುವುದು ಬೇಡಾಂತ ಅವರು ಹೇಳಿದರೆ ಈಗಲೂ ಓದು ನಿಲ್ಲಿಸಲು ನಾನು ತಯಾರು."

" ಈಗ ಓದು ನಿಲ್ಲಿಸಿದರೆ ನಾಲ್ಕೈದು ವರ್ಷ ಓದಿದ್ದೂ ದಂಡ."

" ಈಗ ವ್ಯಾಸಂಗ ನಿಲ್ಲಿಸೋದು ಸರಿಯಲ್ಲ ವಿಜಯ್. ನೀನು ವಿದ್ಯೆ ಪೂರ್ಣಗೊಳಿಸಬೇಕೂಂತ ನನ್ನಾಸೆ. ಆಮೇಲೆ ಇಬ್ಬರೂ ವೈದ್ಯರಾಗಿ ದುಡಿಯೋಣ."

" ನನಗೇಕೋ ಏನೂ ಬೇಡವಾಗಿದೆ " ಎಂದಳು ವಿಜಯ.

" ಗೋಪಿಯೊಬ್ಬನನ್ನು ಬಿಟ್ಟು " ಎಂದು ಮೀರ ಕೆಣಕಿದಳು.

" ಕೆರಿಯರ್ ಗರ್ಲ್‌ನ ಕೈಯಲ್ಲಿ ನಿನ್ನದು ಎಂದು ನಾನು ಅವತ್ತೇ ಹೇಳಿದ್ದೆ. ನಾಲ್ಕೇಟು ಬಿಗಿದಾದರೂ ನಿನ್ನ ಓದಿಸುತ್ತೇನೆ. ನಾನು ಬಿಡುವುದಿಲ್ಲ."

" ಮಾತಿನಲ್ಲಾದರೂ ಹೊಡೆಯುತ್ತೇನೆ ಎಂದಿರಲ್ಲಾ ನನಗೆ ಅದೇ ಸಂತೋಷ. ನಿಮ್ಮ ಅತೀ ಮುದ್ದಿನಿಂದಾಗಿ ವಿಜಯಳಿಗಂತೂ ರೆಕ್ಕೆ ಪುಕ್ಕ ಕೂಡ ಬಂದಿದೆ."

" ಮುದ್ದೆಲ್ಲಿಂದ ಬರಬೇಕು " ಎನ್ನುತ್ತಾ ಗೋಪಿ ವಿಜಯಳ ಕಡೆ ನೋಡಿದ. ಆ ಗಳಿಗೆಗೆ ಅವರಿಬ್ಬರೂ ಮೀರ ಅಲ್ಲಿರುವುದನ್ನೇ ಮರೆತಿದ್ದರು.

" ಈ ಸಲ ಮಾತ್ರ ಹೋದ ಸಲದ ಹಾಗೆ ಮಾಡಬೇಡಿ " ಮೀರ ಹೇಳಿದಳು.

" ಏನೆಂದಿರಿ ?" ಎಂದ ಗೋಪಿ ಮೀರಳ ಕಡೆ ತಿರುಗಿ.

" ಹೋದ ಸಲದ ಹಾಗೆ ಅವಳಿಗೆ ಭೇಟಿ ಕೊಡಬೇಡಿ. ಅವರ ತಂದೆ ತಪ್ಪು ತಿಳಿದುಕೊಳ್ಳುತ್ತಾರೆ."

" ಕಾಲೇಜು ಬಾಗಿಲು ತೆಗೆಯುವವರೆಗೆ ನನ್ನ ಗತಿ ?"

" ನಿಮಗೂ, ಕಾಲೇಜಿಗೂ ಈ ವರ್ಷ ಸಂಬಂಧ ಮುಗಿಯಿತು."

" ಹೌಸ್ ಸರ್ಜನ್ ಆಗಿರುವಾಗ ವಿಜಯಾನ ನೋಡಲು ಏನಡ್ಡಿ ? ಅವಳಿಗೆ ಕಾಲೇಜು ತೆಗೆಯುವವರೆಗೆ...."

" ಪೋಸ್ಟ್‌ಮ್ಯಾನ್ ಇರೋದು ಯಾಕೆ ?"

ವಿಜಯಾನೇ ಪರಿಹಾರ ಸೂಚಿಸಿದಳು.

" ಒಂದೇ ಊರಿನಲ್ಲಿದ್ದುಕೊಂಡು ಕಾಗದ ಬರೆಯೋದೆ ?" ಮೀರ ಕೇಳಿದಳು.

" ಒಂದೇ ಕಾಲೇಜಿನಲ್ಲಿ ಓದಿಕೊಂಡು ಕಾಗದ ಬರೆಯೋದಿಲ್ಲವೇ " ಎನ್ನುತ್ತಾ ಗೋಪಿ ಅರ್ಥಗರ್ಭಿತವಾಗಿ ನಕ್ಕ.

ಅಲ್ಲಲ್ಲಿ ನಕ್ಷತ್ರಗಳು ಮಿನುಗುವುದನ್ನು ನೋಡಿ ಮೀರ ಎದ್ದಳು.

ಗೋಪಿ ಅವಳನ್ನು ಹಾಸ್ಟೆಲಿನಲ್ಲಿ ಬಿಟ್ಟು ವಿಜಯಳೊಡನೆ ಹೊರಟ.

"ಸುರಕ್ಷಿತವಾಗಿ ವಿಜಯಳನ್ನು ತಲುಪಿಸಬೇಕು" ಮೀರ ಹೇಳಿದಳು.

"ಈ ಮಾತನ್ನು ನನಗೆ ಹೇಳಬೇಕು ನೀವು. ವಿಜಯ್ ಜೊತೆ ನಾನಿರುವಾಗ ನನಗೆ ಅಪಾಯವೇ ಹೊರತು ಅವಳಿಗೇನಿಲ್ಲ" ಎನ್ನುತ್ತಾ ಗೋಪಿ ನಕ್ಕ.

"ನಾನೇನೂ ನಿಮ್ಮನ್ನು ತಿಂದುಬಿಡುವುದಿಲ್ಲ."

"ಹೊರಡಿ. ಹೊತ್ತಾಯಿತು" ಎಂದು ಮೀರಳೇ ಅವರಿಬ್ಬರಿಗೂ ಸೂಚನೆಯಿತ್ತಳು.

* * * *

ಮೀರಳನ್ನು ಎದುರುಗೊಳ್ಳಲು ಶಾಮುವೇ ಸ್ಟೇಷನ್ನಿಗೆ ಬಂದಿದ್ದ. —ಇನ್ನೊಬ್ಬಳು ಬಂದಿದ್ದರೂ ತನ್ನನ್ನು ಕಡೆಗಾಣಿಸಿಲ್ಲ ಎಂದು ತೋರಿಸಿ ಕೊಳ್ಳಲು ಬಂದಿದ್ದಾರೋ ಏನೋ ?

ಗಾಡಿಯಲ್ಲಿ ಕುಳಿತ ಕೂಡಲೇ ಶಾಮು ಕೇಳಿದ "ಪರೀಕ್ಷೇಲಿ ಹೇಗೆ ಮಾಡಿದೀಯಾ ?"

"ಚೆನ್ನಾಗಿ ಮಾಡಿದೀನಿ. ಸರಸಿ ಹೇಗಿದಾಳೆ ?"

"ನೀನೇ ನೋಡ್ತೀಯಲ್ಲಾ ಹೇಳು."

ಮನೆ ತಲುಪುವವರೆಗೆ ಶಾಮು ಮೀರಳ ಪರೀಕ್ಷೆಯ ವಿಚಾರವನ್ನೇ ಕೇಳುತ್ತಿದ್ದ. ಗಾಡಿ ಮನೆಯನ್ನು ತಲುಪಿದಾಗ ಸರಸಿ ಮನೆಯ ಮುಂಬಾಗಿಲಿನಲ್ಲಿ ನಿಂತಿದ್ದಳು. ಮೀರ ಸರಸಿ ನಿಂತಿರುವುದನ್ನು ದೂರದಿಂದಲೇ ನೋಡಿದಳು.

ಮನಸ್ಸಿಗುಂಟಾದ ನೆಮ್ಮದಿಯಿಂದ, ಸಂತೋಷದಿಂದ ಸರಸಿ ಮೈ ತುಂಬಿಕೊಂಡಿದ್ದಳು. ಮೊದಲಿನ ಸಾದುಗಪ್ಪು ಬಣ್ಣ ಈಗ ನಸುಕೆಂಪು ಬಣ್ಣಕ್ಕೆ ತಿರುಗಿದ್ದಿತು. ಶಾಮುವಿನ ಕೈ ಹಿಡಿದ ಮೇಲೆ, ಮೀರಳ ಉಡಿಗೆ ತೊಡಿಗೆಗಳನ್ನು ಅವಳೂ ಅನುಕರಿಸಲು ಪ್ರಯತ್ನಿಸಿದ್ದುದರಿಂದ ಅವಳ ಉಡುಪೂ ಬಹಳ ಸುಧಾರಿಸಿತ್ತು. ಸರಸಿಗೆ ದೊರೆತಿದ್ದ ತೃಪ್ತಿ, ಶಾಂತಿ, ಸಮಾಧಾನದಿಂದ ಅವಳ ಮೊಗದ ಮೇಲೆ ಅಪೂರ್ವ ಕಳೆಯಿತ್ತು.

"ಹೇಗಿದಾಳೆ ಸರಸಿ ?" ಶಾಮು ಮೀರಳನ್ನು ಕೇಳಿದ.

"ತುಂಬಾ ಚೆನ್ನಾಗಿ ಆಗಿದಾಳೆ. ಅವಳು ಇಷ್ಟರ ಮಟ್ಟಿಗಾಗಬಹುದು ಎಂದು ನಾನು ಎಣಿಸಿರಲಿಲ್ಲ."

ಮೀರಳಿಗೆ ಮನೆ ತುಂಬಾ ಬದಲಾಯಿಸಿರುವಂತೆ ತೋರಿತು. ತಾನು

ಕೆಲವು ಕಾಲ ಅಲ್ಲಿ ಉಳಿದಿರಲು ಬಂದಿರುವ ಅತಿಥಿ ಎಂದು ಮನಸ್ಸಿಗೆ ಭಾಸ ವಾಯಿತು. ವೆಂಕಮ್ಮನವರು ಹಿಂದಿನ ಮಮತೆಯಿಂದಲೇ

"ಬಾಮ್ಮ. ನೀನು ಬಂದದ್ದು ಮನೆ ಎಷ್ಟೋ ತುಂಬಿದ ಹಾಗಾಯಿತು" ಎಂದು ಸ್ವಾಗತಿಸಿದರು.

ಊಟ ಮುಗಿದ ಮೇಲೆ ಮೀರ ತನ್ನ ರೂಮಿಗೆ ಬಂದಳು. ಹಿಂದೆ ಅವಳದಾಗಿದ್ದ ರೂಮು ಈಗ ಶಾಮು, ಸರಸಿಯರದಾಗಿತ್ತು. ಮಂಚದ ಮೇಲೆ ತನ್ನ ಹಾಸಿಗೆಯನ್ನು ಬಿಡಿಸುತ್ತಿದ್ದಾಗ ವೆಂಕಮ್ಮನವರು ಬಂದು ಕೇಳಿದರು.

"ಮಧ್ಯಾಹ್ನದ ತಿಂಡಿಗೇನು ಮಾಡಲಿ ?"

ಮೀರ ನಸುನಕ್ಕು "ಇಷ್ಟುದಿನ ನಾನೇ ಇದ್ದೇನೇಸೋ ತಿಂಡಿ ಏನು ಮಾಡಲೀಂತ ಹೇಳೋಕೆ ?" ಎಂದಳು.

"ಇಷ್ಟು ದಿನದ ಮಾತಿರಲಿ. ಮನೆ ಯಜಮಾನಿ ನೀನು ಏನು ಹೇಳಿದರೆ ಅದು ಮಾಡ್ತೀನಿ."

"ಬಾಳೆಕಾಯಿ ಇದ್ದರೆ ಬೋಂಡ ಮಾಡಿ."

ವೆಂಕಮ್ಮನವರು ಹಿಂತಿರುಗಿ ಹೊರಟುಹೋದರು. ಮೀರ ಹಾಸಿಗೆ ಉರುಳಿಸಿ ಕೈಲಿ 'ಮೂಲಾನ್ ರೂಜ್' ಹಿಡಿದು ಹಾಸಿಗೆಯೊರಗಿದಳು.

ಬಾಗಿಲಿನ ಮೇಲೆ ಯಾರೋ ಬೆರಳುಗಳಿಂದ ಸದ್ದು ಮಾಡಿದಂತಾಯಿತು.

"ಯಾರು ?" ಎನ್ನುತ್ತಾ ಮೀರ ಎದ್ದು ಅಗುಳಿಯನ್ನು ತೆಗೆದಳು. ಶಾಮು ಒಳಗೆ ಬಂದ.

"ಊಟವಾದ ಕೂಡಲೇ ಮಲಗುವ ಪದ್ಧತಿ ಬಿಟ್ಟುಬಿಟ್ಟರೇನು ?"

"ಇಲ್ಲ."

"ಮಲಗೋದಿಲ್ಲವೇ ?"

"ಮಲಗೋಣಾಂತಾನೇ ಇಲ್ಲಿಗೆ ಬಂದಿದ್ದು."

"ಓ !" ಎಂದಳು ಮೀರ. ಮುಂದೇನೋ ಹೇಳಲು ಹೋಗಿ ಅವಳು ನಾಲಿಗೆ ಬಿಗಿ ಹಿಡಿದಳು.

ಅವಳ ಆಶ್ಚರ್ಯವನ್ನು ಗಮನಿಸಿದವನಂತೆ ಶಾಮು ತಾನೇ ಮುಂದಾಗಿ ಹೋಗಿ ಅವಳ ಹಾಸಿಗೆಯ ಮೇಲೆ ಉರುಳಿಕೊಂಡ.

"ಸರಸಿ ಏನು ಮಾಡ್ತಿದ್ದಾಳೆ ?"

"ಏನು ಮಾಡ್ತಿದಾಳೋ ನಾನು ನೋಡಲಿಲ್ಲ" ಎಂದ ಶಾಮು.

ಮೀರ ಕುರ್ಚಿಯ ಮೇಲೆ ಕುಳಿತು ಪುಸ್ತಕವನ್ನು ಮುಂದುವರಿಸಿದಳು. ಶಾಮು ಕಣ್ಣುಮುಚ್ಚಿಕೊಂಡು ನಿದ್ರಿಸಲು ಯತ್ನಿಸಿದ.

ತಾನು ಊರಿಗೆ ಬಂಧ ಕೂಡಲೇ ಸರಸಿಯನ್ನು ಅವಳ ಪಾಡಿಗೆ ಬಿಟ್ಟು, ತನ್ನ ಹಿಂದೆ ಶಾಮು ಓಡಿಬಂದರೆ ಅವಳಾದರೂ ಏನು ಭಾವಿಸುತ್ತಾಳೋ? ಶಾಮು ಮಾಡಿದ್ದು ಖಂಡಿತ ಸರಿಯಲ್ಲ.

ಮೀರ ಎದ್ದು ಶಾಮುವಿನ ಬಳಿಗೆ ಹೋಗಿ "ನನಗೆ ನಿದ್ದೆ ಬರುತ್ತಿದೆ" ಎಂದಳು.

"ನೀನು ಮಲಗಲು ನನ್ನಡ್ಡಿಯೇನೂ ಇಲ್ಲ."

"ನೀವಿಲ್ಲಿದ್ದರೆ ನನಗೆ ನಿದ್ದೆ ಬರೋದಿಲ್ಲ. ನೀವು....ನಿಮ್ಮ ರೂಮಿಗೇ ಹೋಗ್ತೀರಾ?"

"ಇದೇ ನನ್ನ ರೂಮು" ಶಾಮು ಮೊಂಡನಾಗಿ ಹೇಳಿದ.

"ನೀವು ಈ ಕ್ಷಣ ಹೊರಕ್ಕೆ ಹೋಗದಿದ್ದರೆ ನಿಮ್ಮನ್ನು ನನ್ನ ರೂಮಿನಿಂದಾಚೆ ತಳ್ಳಿಬಿಡುತ್ತೇನೆ" ಮೀರ ಮುನಿಸಿನಿಂದ ಹೇಳಿದಳು.

"ತಳ್ಳು ನೋಡೋಣ."

ಮೀರ ಶಾಮುವಿನ ತೋಳು ಹಿಡಿದು ಎಳೆದಳು. ಶಾಮು ನಗುತ್ತಾ ಬಲಗೈಯಿಂದ ಅವಳನ್ನು ಹತ್ತಿರಕ್ಕೆಳೆದುಕೊಂಡು

"ಸಾಧ್ಯವಾದರೆ ಬಲವಿದ್ದರೆ ಬಿಡಿಸಿಕೋ" ಎಂದ.

ಸರಸಿಗೂ ಮೀರಳಿಗೂ ಎಷ್ಟು ಅಂತರ! ಶಾಮು ಹಾಕಿದ ಗೆರೆಯನ್ನು ಸರಸಿ ದಾಟುತ್ತಿರಲಿಲ್ಲ. ಅತ್ಯಂತ ನಮ್ರಳಾಗಿ, ವಿಧೇಯಳಾಗಿ ಶಾಮು ಹೇಳಿದ ಕೆಲಸವನ್ನು ಕೂಡಲೇ ಸರಸಿ ಮಾಡುತ್ತಿದ್ದಳು. ಸರಸಿಗೆ ಸ್ವಂತ ಅಭಿಪ್ರಾಯ, ಸಲಹೆಗಳಿವೆಯೇ ಎಂದು ಶಾಮು ಆಗಾಗ್ಗೆ ಯೋಚಿಸುತ್ತಿದ್ದ. ಶಾಮುವಿನ ಅಪೇಕ್ಷೆ, ಆಸೆಗಳು ಅವಳ ಆಸೆ, ಅಪೇಕ್ಷೆಗಳಾಗಿದ್ದವು. ಅವಳ ಯಾಂತ್ರಿಕ ಚಲನವಲನಗಳು. ಹೇಳಿದಂತೆ ಕೇಳುವ ಸ್ವಭಾವ ಕೆಲವು ಸಲ ಶಾಮುವಿಗೆ ಬೇಸರವನ್ನುಂಟುಮಾಡಿದ್ದವು.

"ಸರಸೀ, ನಿನಗೆ ಇದು ಇಷ್ಟವೇ?"

"ಹೂಂ."

"ಅಲ್ಲಿಗೆ ಹೋಗೋದು ಬೇಡ."

"ಆಗಲಿ."

"ಈ ಸೀರೆ ಚೆನ್ನಾಗಿದೆಯಲ್ಲವೇ?"

"ಹೌದು."

ಸರಸಿ ತಾನು ಹೇಳುವುದಕ್ಕೆಲ್ಲಾ ಮೂಕ ಬಸವನಂತೆ ತಲೆದೂಗಿದಾಗ, ಶಾಮುವಿನ ಮನಸ್ಸು ಮೀರಳನ್ನು ನೆನೆಯುತ್ತಿತ್ತು. ಶಾಮುವಿನ, ತನ್ನ ಅಭಿಪ್ರಾಯಗಳು ಭಿನ್ನವಾದಾಗ ಮೀರ ಶಾಮುವಿನೊಡನೆ ಜಗಳವಾಡಿ ಚರ್ಚೆಮಾಡುತ್ತಿದ್ದಳು. ಮೀರಳೊಡನೆ ಜಗಳವಾಡಿ ಅವಳನ್ನು ರೇಗಿಸುವುದೆಂದರೆ ಶಾಮುವಿಗೆ ಬಹಳ ಪ್ರಿಯವಾದ ಕೆಲಸ. ಅವಳ ಪ್ರತಿಭಟನೆ ಹೆಚ್ಚಿದಷ್ಟೂ ಶಾಮುವಿನ ಮನಸ್ಸಿಗೆ ಅಪಾರ ಆನಂದವಾಗುತ್ತಿತ್ತು. ಮೀರ ಸಿಟ್ಟನಿಂದ ಉನ್ಮತ್ತಳಾದಾಗ ಅವಳನ್ನು ಕೈವಶಮಾಡಿಕೊಂಡು, ಅವಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುತ್ತಿದ್ದ. ಕೆಲವು ಬಾರಿ ಅವಳು ರೇಗಿದಷ್ಟೂ ತಾನು ದೈನ್ಯವಾಗಿ ಅವಳ ಒಲವನ್ನ ಪಡೆಯುತ್ತಿದ್ದ. ಪ್ರೇಮ ಕದನದಲ್ಲಿ ಶಾಮು ಸೋತರೂ ಸುಖಿ, ಗೆದ್ದರೂ ಸುಖಿ.

ಸರಸಿಯೊಡನೆ ಯುದ್ಧದ ಪ್ರಶ್ನೆಯೇ ಇರಲಿಲ್ಲ. ಸರಸಿ ಸಂಪೂರ್ಣ ಶರಣಾಗತಳು. ಪ್ರತಿಯೊಂದು ಕೆಲಸದಲ್ಲಿಯೂ ಸರಸಿ ಶಾಮುವಿನ ಅಡಿಯಾಳು. ಮೀರ ತೆರೆಯ ಮೇಲೆ ತೆರೆಯನ್ನು ಉತ್ಪನ್ನಮಾಡುವ ಸಮುದ್ರವಾದರೆ, ಸರಸಿ ಶಾಂತವಾಗಿ ಹರಿಯುವ ನದಿ. ಶಾಮುವಿನದು ಸಾಹಸ ಪ್ರಕೃತಿ. ಬಿರುಗಾಳಿಯಲ್ಲಿ ಭೋರ್ಗರೆಯುತ್ತಿರುವ ಸಮುದ್ರದೊಳಗೆ ಧುಮುಕಿ ತೆರೆಗಳನ್ನು ಸೀಳಿ, ಅವುಗಳ ಮೇಲೆ ತನ್ನ ವಿಜಯ ಪತಾಕೆ ಹಾರಿಸುವುದರಲ್ಲಿ ಅವನಿಗೆ ಹೆಚ್ಚು ಆನಂದ. ಶಾಂತವಾಗಿರುವ ನದಿಯಲ್ಲಿ ಈಜುವುದೆಂದರೆ ಅದರಲ್ಲಿ ಅವನಿಗೆ ಯಾವ ವಿಧವಾದ ರೋಮಾಂಚನವೂ ಇರಲಿಲ್ಲ.

ಈ ಬಾರಿಯೂ ಹಾಗೆಯೇ ಆಯಿತು. ಶಾಮುವಿನ ತೋಳಿನಲ್ಲಿ ಸೋತು ಒರಗಿದವಳು ಮೀರ. ಅವಳ ಮೇಲೆ ವಿಜಯ ಸಾಧಿಸಿದಾಗ ಶಾಮುವಿಗೆ ಎಲ್ಲಿಲ್ಲದ ತೃಪ್ತಿ.

ತನ್ನ ಕಣ್ಣು ತಪ್ಪಿಸಿ ಹೊರಗೆ ಹೋದ ತಾಯಿ ಮನೆಗೆ ಬಂದ ಕೂಡಲೇ ಮಗು ಎಡಬಿಡದೆ ತಾಯಿಯನ್ನು ಹಿಂಬಾಲಿಸಿ ಅವಳೊಡನೆಯೇ ಇರುವಂತೆ, ಶಾಮು ಮೀರಳೊಡನೆ ಕಾಲ ಕಳೆಯುತ್ತಿದ್ದ. ತಾನು ಒಂದು ಗಳಿಗೆ ಕಾಣದಿದ್ದರೆ 'ಮೀರಾ' ಎಂದು ಕೂಗಿ ಗಲಾಟೆ ಮಾಡಿ ಬಿಡುತ್ತಿದ್ದ. ಒಂದು ದಿನ ಇದರ ವಿಷಯವಾಗಿಯೇ ಅವರಿಬ್ಬರೂ ಚರ್ಚೆ ನಡೆಯಿತು.

ಆ ದಿನ ಊಟವಾದ ಕೂಡಲೇ ಶಾಮುವಿನ ಕಣ್ಣು ತಪ್ಪಿಸಿ ಮೀರ ಜೋಯಿಸರ ಮನೆಗೆ ಹರಟೆ ಹೊಡೆಯಲು ಹೋಗಿದ್ದಳು. ಊಟವಾದ ಮೇಲೆ ಸರಸಿಯೇ ಎಲೆ ಅಡಿಕೆ ತಂದುಕೊಟ್ಟಳು.

"ಮೀರ ಎಲ್ಲಿ? ಕಾಣೋದೇ ಇಲ್ಲವಲ್ಲಾ?" ಎಂದ ಶಾಮು.

ಸರಸಿಗೆ ಅವನ ಮಾತು ಕೆನ್ನೆಗೆ ಹೊಡೆದಂತಾಯಿತು. ಅವಳು ಸಿಟ್ಟು, ಮತ್ಸರವನ್ನು ನುಂಗಿಕೊಂಡು

"ಎಲ್ಲೋ ಹೋಗಿರಬೇಕು. ನಾನು ನೋಡಲಿಲ್ಲ" ಎಂದಳು.

ಶಾಮು ಸುಮ್ಮನಾದ. ಸರಸಿಯೇ ಕೇಳಿದಳು.

"ಎಲೆ ಅಡಿಕೆ ಮಡಿಸಿ ಕೊಡಲೇನು?"

"ಏನೂ ಬೇಡ ಬಿಡು."

ಸರಸಿಗೆ ಎಲೆ ಅಡಿಕೆ ಮಡಿಸಿಕೊಡುವ ಪ್ರಕರಣ ಇಷ್ಟವಿಲ್ಲದಿದ್ದರೆ ಶಾಮು ಅವಳಿಗೆ ಒತ್ತಾಯ ಮಾಡುತ್ತಿದ್ದನೋ ಏನೋ?

ಗಂಡನ ಮಾತು ಕೇಳಿ ಸರಸಿಗೆ ತಡೆಯಲಾರದಷ್ಟು ಕೋಪ ಬಂತು. ಪ್ರತಿಯೊಂದು ಕೆಲಸದಲ್ಲೂ, ವಿಷಯದಲ್ಲೂ, ಶಾಮುವಿಗೆ ತನ್ನನ್ನು ಕಂಡರೆ ತಾತ್ಸಾರವೇಕೆ? ರಜಕ್ಕೆ ಮೀರ ಬಂದಾಗಿನಿಂದ ಶಾಮು ಹಗಲಿರುಳೂ ಅವಳ ಬಳಿಯೇ ಕಾಲ ಕಳೆಯುತ್ತಿದ್ದ. ಮೀರ ಊರಿನಲ್ಲಿ ಇಲ್ಲದಾಗ ಮಾತ್ರ ತಾನು ಬೇಕು. ಅವಳು ಹಳ್ಳಿಗೆ ಬಂದಾಗ ಮಾತ್ರ ತನ್ನನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಇದಾವ ನ್ಯಾಯ? ತನ್ನನ್ನು ಅವಮಾನಿಸಲೆಂದೇ ಶಾಮು, ಮೀರ ಈ ಮನೆಗೆ ಕರೆತಂದಿರಬೇಕು. ತನಗೆ ಅಪ್ಪನ ಮನೆಯಲ್ಲಿ ತಿನ್ನಲು ಹಿಟ್ಟಿರಲಿಲ್ಲವೇ?

"ನಾನು ಮಡಿಸಿಕೊಟ್ಟರೆ ನಿಮಗೆ ಸೇರುವುದಿಲ್ಲವೇನೋ?" ಅವಳ ಮಾತಿನಲ್ಲಿ ವ್ಯಂಗ್ಯವಿತ್ತು.

ಶಾಮು ಕತ್ತೆತ್ತಿ ಸರಸಿಯನ್ನು ನೋಡಿದ. ಸರಸಿ ಅವನನ್ನು ಮೊದಲ ನೆಯ ಬಾರಿ ಎದುರಿಸಿದ್ದಳು. ಅವಳ ಮುಖದಲ್ಲಿ ಮತ್ಸರ ಮನೆಮಾಡಿತ್ತು. ಶಾಮುವಿಗೆ ಅವಳನ್ನು ಮತ್ತಷ್ಟು ರೇಗಿಸಬೇಕೆನಿಸಿತು.

"ಹೌದು. ನೀನು ಮಡಿಸಿಕೊಟ್ಟರೆ ನನಗೆ ಸೇರೋದಿಲ್ಲ."

"ಮೀರಾ ಮಡಿಸಿಕೊಟ್ಟರೆ?"

"ಅದರ ರುಚಿಯೇ ಬೇರೆ."

"ವರ್ಷವೆಲ್ಲಾ ಅವರೇ ಇರುತ್ತಾರೇನೋ?"

"ಇಲ್ಲ. ಆದುದರಿಂದ ಅವಳು ಬಂದಾಗಲೇ ಅವಳಿಂದ ಆದಷ್ಟು ಸೇವೆ ಮಾಡಿಸಿಕೊಳ್ಳೋಣಾಂತ...." ಶಾಮು ನಗುತ್ತಲೇ ಇದ್ದ.

"ಅವರಿಲ್ಲದೇ ಇದ್ದಾಗ ಮಾತ್ರ ನಾನು ಬೇಕು. ಈ ಸಂಭ್ರಮಕ್ಕೆ ನನ್ನ ಯಾಕೆ ಮದುವೆ ಮಾಡಿಕೋಬೇಕಾಗಿತ್ತೋ" ಎನ್ನುತ್ತಾ ಸರಸಿ ಹೊರಟು ಹೋದಳು. ಮೀರ ಬಂದಾಗಿನಿಂದ ತನಗೆ, ಅವಳಿಗೆ ಅವನು

ತೋರುತ್ತಿದ್ದ ವಿಶ್ವಾಸ, ಸ್ನೇಹ ಕಂಡು ರೋಸಿಹೋದ ಮನಸ್ಸು ನುಡಿದ ಮಾತದು. ಈ ಮನೆಯಲ್ಲಿ ತಾನು ಎಲ್ಲರಿಗಿಂತಲೂ ನಿಕೃಷ್ಟ ಎಂಬ ಭಾವನೆ ಎಲ್ಲರಿಗೂ.

ವೆಂಕಮ್ಮನವರು ಹೇಳಿದ್ದರು "ನೀನು ಮನೆ ಯಜಮಾನಿ. ನೀನು ಏನು ಹೇಳಿದರೆ ನಾನು ಅದನ್ನು ಮಾಡ್ತೀನಿ" ಎಂದು. ಹಾಗೆ ಅವರು ಹೇಳಿದ್ದು ತನಗಲ್ಲ, ಮೀರಾಗೆ. ಮನೆಯ ಆಳು ಕಾಳುಗಳಿಗೆಲ್ಲಾ ಮೀರ "ಅಮ್ಮಾವರು." ಆದರೆ ತಾನು ಕೇವಲ "ಸರಸವ್ವ" ಮಾತ್ರ. ಶಾಮುವಿನ ತುಟಿಯ ಮೇಲಿನಿಂದ ಮೀರ ಹೆಸರು ಮರೆಯಾಗುತ್ತಲೇ ಇರಲಿಲ್ಲ. ಎಲ್ಲ ವಿಷಯಗಳಲ್ಲೂ ಅವಳಿಗೆ ಪ್ರಥಮಸ್ಥಾನ. ಮನೆಯಲ್ಲಿ ಎಲ್ಲರೂ ಅವಳನ್ನು ಮೆಚ್ಚಿಸಲು, ಅವಳಿಂದ ಒಂದು ಒಳ್ಳೆಯ ಮಾತನ್ನು ಕೇಳಲು ಪ್ರಯತ್ನಿಸುತ್ತಿದ್ದರು. ಆದರೂ ಅವಳು ಸ್ವಲ್ಪವಾದರೂ ಕೃತಜ್ಞತೆ ತೋರಿಸುತ್ತಿದ್ದಳೇ? ಊಹೂಂ. ಅವಳಿಗೆ ಕೃತಜ್ಞತೆ ಇರಲಿಲ್ಲ. ತಾನು ರಾಣಿ, ಇತರರೆಲ್ಲಾ ತನ್ನ ಸಂತೋಷ, ಸುಖಕ್ಕಾಗಿ ದುಡಿಯುತ್ತಿರುವ ಆಳುಗಳು ಎನ್ನುವಂತೆ ಠೀವಿಯಿಂದ ಇರುತ್ತಿದ್ದಳು. ಇಷ್ಟು ದಿನ ತಾನು ಹೇಗೋ ಸಹಿಸಿದ್ದಾಯಿತು. ಇನ್ನು ಮುಂದೆ ಸಹಿಸುವುದು ತನ್ನಿಂದಂತೂ ಸಾಧ್ಯವೇ ಇರಲಿಲ್ಲ.

ಸರಸಿಗೆ ಅಳು ಬರಲಿಲ್ಲ. ಅದರ ಬದಲು ಏನೋ ಒಂದು ಬಗೆಯ ಧೃಢ ನಿಶ್ಚಯತೆ ಅವಳ ಮುಖದ ಮೇಲೆ ಒಡೆದು ಮೂಡಿತ್ತು.

ಮೀರ ಮೈಸೂರಿನಲ್ಲಿ ಕಾಲೇಜಿನಲ್ಲಿ ಓದುವಾಗ ತಾವೆಲ್ಲರೂ ಅಲ್ಲಿ ಎಷ್ಟು ಸಂತೋಷ, ಶಾಂತಿಯಿಂದಿದ್ದರು? ಅವಳು ರಜೆಯಲ್ಲಿ ಊರಿಗೆ ಬಂದೊಡನೆ ತನ್ನ ಮನಸ್ಸಿನ ಶಾಂತಿ ದೂರವಾಗಿತ್ತು. ಸಧ್ಯ ಈ ರಜ ಎಂದಿಗೆ ಕಳೆಯುವುದೋ?

ಜೋಯಿಸರ ಮನೆಯಿಂದ ಮೀರ ಬಂದಾಗ ಮನೆಯಲ್ಲಿ ಅವಳು ನಿರೀಕ್ಷಿಸಿದ್ದ ವಾತಾವರಣ ಇರಲಿಲ್ಲ.

ಶಾಮು ಉಯ್ಯಾಲೆಯ ಮೇಲೆ ಕುಳಿತು ಎಲೆ ಅಡಿಕೆ ಹಾಕಿಕೊಳ್ಳುತ್ತಿದ್ದ. ಸರಸಿ ತನ್ನ ರೂಮಿನ ಬಾಗಿಲನ್ನು ಹಾಕಿಕೊಂಡು ಮಲಗಿದ್ದಳು. ಮೀರ ಬರುತ್ತಲೇ ಶಾಮು ಕೇಳಿದ

"ಎಲ್ಲಿಗೆ ಹೋಗಿದ್ದೆ ಮೀರಾ?"

"ಜೋಯಿಸರ ಮನೆಗೆ ಹೋಗಿದ್ದೆ. ಒಂದು ಗಳಿಗೆ ಎಲ್ಲಾದರೂ ಹೋದರೆ ಮುದುಕ ಗಂಡನಂತೆ ಇದೇನು ಇಷ್ಟು ತನಿಖೆ ಮಾಡ್ತೀರಾ? ಸಧ್ಯ ನನಗೆ ನಿಮ್ಮಿಬ್ಬರ ಕಾಟವೇ ಸಾಕಾಗಿದೆ."

"ಈ ಬಿಸಿಲಿನಲ್ಲಿ ಯಾಕೆ ಹೋದೆ?"

"ನಿಮ್ಮ ಮುಂದೆ ಕುಳಿತುಕೊಂಡು ಲಲ್ಲೆ ಹೊಡೀಬೇಕೇನೋ? ಸರಿಸಿ ಇದ್ದಳಲ್ಲಾ ಆ ಕೆಲಸಕ್ಕೆ" ಎನ್ನುತ್ತಾ ಮೀರ ಹೊರಟಳು.

"ಸರಸಿ ಬರಲೇ ಇಲ್ಲ."

"ಎಲ್ಲಿ ಅವಳು?" ಮೀರ ಕೇಳಿದಳು.

"ಮಲಗಿರಬೇಕು. ಇಲ್ಲಿ ಒಂದು ಮಾತು ಕೇಳು...."

ಮೀರ ತನ್ನ ರೂಮಿಗೆ ಹೋಗಿ ರಪ್ಪನೆ ಬಾಗಿಲನ್ನು ಹಾಕಿಕೊಂಡಳು. ಹಿಂದಿ ಗೀತೆಯೊಂದನ್ನು ಮೀರ ಗುಣುಗುಣಿಸುತ್ತಿರುವುದು ಶಾಮುವಿಗೆ ಕೇಳಿಸಿತು.

ಮಾರನೆಯ ದಿನದಿಂದ ಸರಸಿ ತನ್ನ ಅಸಮಾಧಾನವನ್ನು ಸ್ಪಷ್ಟವಾಗಿ ವ್ಯಕ್ತಪಡಿಸತೊಡಗಿದಳು. ಶಾಮುವಿನಿಂದ ಹಿಡಿದು ಮನೆಯ ಆಳುಗಳ ವರೆವಿಗೂ ಎಲ್ಲರೂ ತನ್ನನ್ನು ಮೀರಳಿಗಿಂತ ಕಡೆಯಾಗಿ ಕಾಣುತ್ತಿರುವುದು ಅವಳ ಮನಸ್ಸಿಗೆ ಹಿಡಿಸದಾಗಿತ್ತು. ತನ್ನ ಮದುವೆಯಾದ ಹೊಸದರಲ್ಲಿ ಈ ಬಗೆಯ ವ್ಯತ್ಯಾಸವನ್ನು ಅವಳು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಂಡಿರ ಲಿಲ್ಲ. ಸಾಲದುದಕ್ಕೆ ಮದುವೆಯಾದ ಸ್ವಲ್ಪ ದಿನಗಳಿಗೇ ಮೀರ ಮೈಸೂರಿಗೆ ಹೊರಟುಹೋಗಿದ್ದುದರಿಂದ, ಅವಳು ಈ ಅಂತರವನ್ನು ಗುರುತಿಸಿರಲಿಲ್ಲ. ಮೀರ ಮತ್ತೆ ಹಳ್ಳಿಗೆ ಬಂದ ಮೇಲೆ ಅವಳು ಈ ವ್ಯತ್ಯಾಸವನ್ನು ಗುರುತಿಸಿ ಕುಪಿತಳಾಗಿದ್ದಳು. ಅದುವರೆವಿಗೂ ಮೀರಳೊಡನೆ ಸ್ನೇಹ, ವಿಶ್ವಾಸದಿಂದಿದ್ದ ಸರಸಿ ಈಗ ಅವಳನ್ನು ಕಂಡರೆ ಮುಖ ತಿರುಗಿಸುತ್ತಿದ್ದಳು. ಸಾಲದುದಕ್ಕೆ ಶಾಮು ತನ್ನನ್ನು ಮೊದಲು ತಿರಸ್ಕರಿಸಿ ಮೀರಳ ಕೈ ಹಿಡಿದಾಗಲೇ ಅವಳಿಗೆ ಮೀರಳಲ್ಲಿ ಅಸೂಯೆ ಉಂಟಾಗಿತ್ತು. ಶಾಮು ತನ್ನನ್ನೇ ಮೊದಲು ಮದುವೆ ಯಾಗಿದ್ದಿದ್ದರೆ ತಾನು ಈ ಮನೆಯ ಏಕೈಕ ಒಡತಿಯಾಗಬಹುದಿತ್ತು. ಶಾಮುವಿನ ಹೃದಯಸಾಮ್ರಾಜ್ಯದ ಏಕಮಾತ್ರ ಸಾಮ್ರಾಜ್ಞಿಯಾಗಿರ ಬಹುದಿತ್ತು.

ಸರಸಿಯ ಸ್ವಭಾವದಲ್ಲುಂಟಾದ ವ್ಯತ್ಯಾಸವನ್ನು ಮೊದಲು ಗಮನಿಸಿ ದವಳು ಮೀರ.

ಒಂದು ದಿನ ಅಡುಗೆಯಾಗುತ್ತಲೇ ವೆಂಕಮ್ಮನವರು ಎಲ್ಲರನ್ನೂ ಊಟಕ್ಕೆ ಎಬ್ಬಿಸಿದರು. ಶಾಮು, ಮೀರ ಒಳಗೆ ಬಂದರೂ ಸರಸಿ ಮಾತ್ರ ಬರಲಿಲ್ಲ. ಮೀರ ಅವಳನ್ನು ಪುನಃ ಬಂದು ಕರೆದಾಗ

"ನನಗೆ ಹಸಿವಿಲ್ಲ. ನೀವು ಊಟ ಮಾಡಿಬಿಡಿ. ನಾನು ನಿಧಾನವಾಗಿ ಮಾಡುತ್ತೇನೆ" ಎಂದಳು ಸರಸಿ.

“ ಸೇರಿದಷ್ಟೇ ಮಾಡುವಿಯಂತೆ.”

“ ಬೇಡ. ನನಗೆ ಈಗ ಖಂಡಿತ ಬೇಡ.”

ಮೀರ ನಿರುಪಾಯಳಾಗಿ ಒಳಗೆ ಹೋಗಿ ಶಾಮುವಿಗೆ

“ ಅವಳಿಗೆ ಈಗ ಸೇರೋದಿಲ್ಲವಂತೆ ” ಎಂದಳು.

“ ಅವಳಿಗೆ ಹೇಗೆ ಬೇಕೋ ಹಾಗೆ ಮಾಡಲಿ ” ಎಂದ ಶಾಮು.

“ ನೀವೇ ಹೋಗಿ ಕರೆಯಿರಿ. ಆಗ ಬಂದರೂ ಬರಬಹುದು.”

“ ಹಾಗೇ ಅಕ್ಷತೆ ಬಟ್ಟಲನ್ನೂ ತಗೊಂಡು ಹೋಗಲೇನು ?” ಎಂದು ಶಾಮು ನಗೆಯಾಡಿದ.

“ಶಾಮುವೇ ಬಂದು ತನ್ನನ್ನು ಕರೆಯಬಹುದೆಂದು ಸರಸಿ ನಿರೀಕ್ಷಿಸಿದ್ದಳು. ಆದರೆ ಅವಳ ನಿರೀಕ್ಷೆ ವ್ಯರ್ಥವಾಯಿತು. ಹಿಂದೊಮ್ಮೆ ಮೀರ “ ಈಗಲೇ ಹಸಿವಿಲ್ಲ ” ಎಂದಾಗ ಶಾಮು “ ಎಲ್ಲರೂ ಒಟ್ಟಿಗೆ ಕುಳಿತುಕೊಳ್ಳೋಣ ” ಎಂದಿರಲಿಲ್ಲವೇ ?”

ಮೀರಳಿಗಿರುವ ಕಿರೀಟವಾದರೂ ಏನು ?

ಸರಸಿಗೆ ಏನಾದರೂ ನೆಪ ಹೇಳಿ ಊಟ ತಿಂಡಿಗೆ ಕೂರುವುದನ್ನು ತಪ್ಪಿಸಿಕೊಳ್ಳುತ್ತಿದ್ದಳು.

ಒಂದು ಘಟನೆಯಿಂದ ಸರಸಿಯ ಮನಸ್ಸು ಒಡೆದು ಹೋಯಿತು. ನಡೆದ ಪ್ರಸಂಗವಾದರೋ ಬಹಳ ಸಣ್ಣದು.

ಒಂದು ದಿನ ಸರಸಿ ದೇವಸ್ಥಾನದಿಂದ ಮನೆಗೆ ಬರುವಾಗ ಬೋರ ಕಾಂಪೌಂಡಿನಲ್ಲಿದ್ದ ‘ನಿಶಾರಾಣಿ’ಯ ಪೊದೆಯನ್ನು ಬುಡದ ಸಮೇತ ಕತ್ತರಿಸಿ ಹಾಕುತ್ತಿದ್ದ. ಬೋರನ ಅಧಿಕಪ್ರಸಂಗತನ ಕಂಡು ಸರಸಿ ಕೆರಳಿದಳು.

ಸರಸಿ ನಿಶಾರಾಣಿಯ ಹೂವಿನ ವಾಸನೆಯೆಂದರೆ ಬಹಳ ಪ್ರೀತಿ. ಆದುದರಿಂದಲೇ ಅವಳು ತವರು ಮನೆಯಿಂದ ಗಂಡನ ಮನೆಗೆ ಬರುವಾಗ ತಮ್ಮ ಹಳ್ಳಿಯಲ್ಲಿದ್ದ ಪೊದೆಯನ್ನು ತರಿಸಿ ಕಾಂಪೌಂಡಿನಲ್ಲಿ ಹಾಕಿಸಿದ್ದಳು. ರಾತ್ರಿಯ ಹೊತ್ತು ಗಾಳಿ ಬೀಸಿದಾಗಲೆಲ್ಲಾ ಹೂವಿನ ಉಗ್ರವಾಸನೆ ಅವಳ ಕೊಠಡಿಗೆ ಹರಿದು ಬರುತ್ತಿತ್ತು.

ಮೀರ ಹುಲುಸಾಗಿ ಬೆಳೆದಿದ್ದ ಪೊದೆಯನ್ನು ನೋಡಿ ಬೋರನಿಗೆ

“ ಬೋರಾ, ಅದನ್ನ ಕತ್ತರಿಸಿ ಹಾಕಿಬಿಡೋ. ಇಲ್ಲದಿದ್ದರೆ ಹಾವುಗಳು ಅದರ ವಾಸನೆಗೆ ಬಂದುಬಿಡುತ್ತವೆ ” ಎಂದಳು.

ಬೋರ ಅಮ್ಮನವರ ಅಪ್ಪಣೆಯನ್ನು ಪರಿಪಾಲಿಸುತ್ತಿದ್ದ.

ಸರಸಿ ಕಣ್ಣು ಕೆಂಪು ಮಾಡಿಕೊಂಡು ಗದರುವ ದನಿಯಲ್ಲಿ

" ಯಾಕೋ ಪೊದೇನ ಕೀಳ್ತಿದೀಯಾ ? ಬುದ್ಧಿ ಸರಿಯಾಗಿದೆಯೋ ಇಲ್ಲವೋ " ಎಂದು ಕೂಗಿದಳು.

" ಅಮ್ಮನವರು ಕತ್ತರ್ರಿಸಿ ಆಕ್ಬಿಡೂಂತ ಅಂದ್ರು ಸರಸವ್ವ."

" ನಾನು ಹೇಳಿರಲಿಲ್ಲವೇನೋ ಕತ್ತರಿಸಬೇಡಾಂತ."

" ದೊಡ್ಡಮ್ಮಾವರು ತಗುದು ಆಕ್ಬಿಡೂಂದ್ರು " ಎನ್ನುತ್ತಾ ಬೋರ ಪೊದೆಯನ್ನು ಬೇರು ಸಮೇತ ಕಿತ್ತು ಹೊರತೆಗೆದ.

ನಿಶಾರಾಣಿಯನ್ನು ಸರಸಿ ತವರು ಮನೆಯಿಂದ ತಂದು ಹಾಕಿದ್ದ ಳೆಂಬ ವಿಷಯ ಮೀರಳಿಗ ತಿಳಿದಿರಲಿಲ್ಲ. ನಿಶಾರಾಣಿ ಸರಸಿಗೆ ಪ್ರಿಯವಾದ ಹೂವು ಎಂಬುದು ಸಹ ಅವಳಿಗೆ ಗೊತ್ತಿರಲಿಲ್ಲ. ಕಾಡಾಗಿ ಬೆಳೆಯತೊಡ ಗಿದ್ದ ಆ ಪೊದೆ ಹಾವುಗಳಿಗೆ ಆಶ್ರಯವಾಗಬಹುದೆಂದು ಹೆದರಿ ಅವಳು ಬೋರನಿಗೆ ಕಿತ್ತುಹಾಕುವಂತೆ ಹೇಳಿದ್ದಳು.

ಆದರೆ ಸರಸಿ ಅದನ್ನು ತಪ್ಪಾಗಿ ಭಾವಿಸಿದಳು. ಮೀರ ತನ್ನನ್ನು ಅವಮಾನಪಡಿಸುವುದಕ್ಕಾಗಿಯೇ ಪೊದೆಯನ್ನು ಕೀಳಿಸಿರಬೇಕೆಂದು ಅವಳು ಭಾವಿಸಿದಳು.

ಗಿಡ ಹೋಯಿತಲ್ಲಾ ಎಂಬ ದುಃಖದಿಂದ ಸರಸಿಗೆ ತುಂಬಾ ಅಳು ಬಂತು.

ಶಾಮು ಗದ್ದೆಯ ಕಡೆಯಿಂದ ಬರುವ ಹೊತ್ತಿಗೆ ಅತ್ತು ಅತ್ತು ಸರಸಿಯ ಕಣ್ಣುಗಳು ಕೆಂಪಗೆ ಊದಿಕೊಂಡಿದ್ದವು. ಮೀರ ಅವಳನ್ನು ಮಾತನಾಡಿಸಲು ಪ್ರಯತ್ನಪಟ್ಟಿದ್ದರೂ ಸರಸಿ ಮಾತನಾಡಿರಲಿಲ್ಲ. ಶಾಮು ಬರುತ್ತಲೇ ಮೀರ ಹೇಳಿದಳು.

" ಸರಸಿ ಯಾಕೋ ತುಂಬ ಅತ್ತಿರುವ ಹಾಗಿದೆ. ಯಾಕೆಂದು ಕೇಳಿ ದರೆ ಹೇಳೋದಿಲ್ಲ."

ಶಾಮು ತಾನೇ ಹೋಗಿ ಸರಸಿಯನ್ನು ವಿಚಾರಿಸಿದ.

" ಅಳುವಂತಹುದು ಏನಾಯಿತು ?"

" ಬೋರ ರಾತ್ರಿರಾಣಿ ಗಿಡಾನೆಲ್ಲಾ ಕತ್ತರಿಸಿ ಹಾಕಿದಾನೆ. ನಾನ ದನ್ನು ಆಸೆಪಟ್ಟು ಹಳ್ಳಿಯಿಂದ ತರಿಸಿ ಹಾಕಿದ್ದೆ."

" ನೀನವನಿಗೆ ಕತ್ತರಿಸಬೇಡಾಂತ ಹೇಳಬೇಕಾಗಿತ್ತು."

" ನಾನೇನೋ ಹೇಳಿದ್ದೆ. ಆದರೆ...." ಸರಸಿ ಉಗುಳು ನುಂಗಿದಳು.

" ಹಾಗಾದರೂ ಯಾಕೆ ಕಡಿದ ಅವನು ?"

" ಮೀರ ಕಡಿದುಬಿಡು ಎಂದರಂತೆ...."

ಶಾಮು ಅಪ್ರತಿಭನಾಗಿ ನಿಂತುಬಿಟ್ಟ. ಮೀರ, ಸರಸಿ ಸ್ನೇಹದಿಂದಿರುವರೆಂದೇ ಅವನು ಭಾವಿಸಿದ್ದ. ಸರಸಿ ಒಂದು ಸಣ್ಣ ವಿಷಯವನ್ನು ದೊಡ್ಡದು ಮಾಡಿ ಅತ್ತಿರುವ ಕಾರಣವಾದರೂ ಏನು ? ಗಳಿಗೆಯಲ್ಲಿ ಚೇತರಿಸಿಕೊಂಡು ಶಾಮು ನುಡಿದ

"ಅವಳಿಗೆ ನೀನು ಹಾಕಿಸಿದೀಯಾಂತ ತಿಳಿದಿರಲಾರದು. ತಿಳಿದಿದ್ದರೆ ಖಂಡಿತ ಕಡಿಸುತ್ತಿರಲಿಲ್ಲ."

"ಏನೋ ಯಾರಿಗೆ ಗೊತ್ತು."

"ಸರಸೀ !" ಶಾಮು ರೇಗಿದ.

"ನಿಮಗೆ ಅವರೇನು ಮಾಡಿದರೂ ಸರಿ ನಾನು ಒಂದು ಮಾತನಾಡಿದರೆ ಅದು ನಿಮಗೆ ತಪ್ಪಾಗಿ ಕಾಣುತ್ತೆ. ಅಲ್ವೇ ?"

"ಮೀರಾನ ಇಲ್ಲಿಗೇ ಕರೆದು ಕೇಳಲೇ ?" ಶಾಮು ಕೇಳಿದ.

"ನಿಮ್ಮೆದುರಿಗೆ ಅವರು ತಮ್ಮ ತಪ್ಪು ಒಪ್ಕೋತಾರೆಯೇ ? ಇನ್ನು ಒಪ್ಪಿಕೊಂಡರೆ ತಾನೇ ಏನು ಪ್ರಯೋಜನ. ಗಿಡವಂತೂ ಹಾಳಾಯಿತು."

ಸರಸಿಯ ಮಾತನ್ನು ಲಕ್ಷಿಸದೆ ಶಾಮು

"ಮೀರಾ" ಎಂದು ಕೂಗಿದ.

ಸಂದರ್ಭ ತಿಳಿಯದೆ ಮೀರ ಒಳಗೆ ಬಂದಳು.

"ರಾತ್ರಿರಾಣಿ ಗಿಡ ಯಾಕೆ ಕಡಿಸಿದೆ ಮೀರಾ ?" ಶಾಮು ಕೇಳಿದ.

"ಹಾವುಗಳು ಬರುತ್ತವೇಂತ ತೆಗೆಸಿಹಾಕಿದೆ."

"ಅದನ್ನು ಸರಸಿ ಊರಿಂದ ತರಿಸಿ ಹಾಕಿಸಿದ್ದಳಂತೆ...."

"ಹಾಗೇನು ! ನನಗದು ಗೊತ್ತಿರಲಿಲ್ಲ. ಬೇಕಾದರೆ ಬೇರೆ ತರಿಸಿ ಹಾಕಿಸಿದರಾಯಿತು. ಬೋರನಿಗೆ ಹೇಳಿದರೆ ನಾಳೇನೇ ತಂದು ಹಾಕುತ್ತಾನೆ."

"ಮಾಡುವ ಕೆಲಸ ಮಾಡಿಬಿಟ್ಟು ಈಗ ಬೇರೆ ತರಿಸೋಣ ಎಂದರೆ ಏನು ಪ್ರಯೋಜನ ?" ಸರಸಿ ವ್ಯಂಗ್ಯವಾಗಿ ಹೇಳಿದಳು.

ಮೀರ ಚಕಿತಳಾದಳು. ಅವಳಿಗೆ ಸರಸಿಯಲ್ಲಿ ಸ್ನೇಹವಿಲ್ಲದಿದ್ದರೂ ತಿರಸ್ಕಾರವಂತೂ ಖಂಡಿತ ಇರಲಿಲ್ಲ. ಅವಳ ವಿಷಯಕ್ಕೆ ಹೆಚ್ಚು ಪ್ರವೇಶಿಸದೇ ತನ್ನ ಪಾಡಿಗೆ ಇದ್ದು ಬಿಡುತ್ತಿದ್ದಳು. ಸರಸಿಯೂ ಯಾವತ್ತೂ ಅವಳನ್ನು ಚುಚ್ಚುವಂತಹ ಮಾತುಗಳಿಂದ ನೋಯಿಸಿರಲಿಲ್ಲ. ಆದರೆ ಒಳಗೇ ಹೊಗೆಯಾಡುತ್ತಿದ್ದ ಮತ್ಸರದ ಕಿಡಿ ಈ ದಿನ ಭಗ್ಗನೆ ಹತ್ತಿಕೊಂಡಿತ್ತು.

"ನಾನು ಅದನ್ನು ಮನಃಪೂರ್ವಕವಾಗಿ ಕಡಿಸಿದೀನೀಂತ ತಿಳ್ಕೊಂಡಿದೀಯಾ ?"

ಸರಸಿ ಅವಳ ಪ್ರಶ್ನೆಗೆ ಉತ್ತರ ಹೇಳಲಿಲ್ಲ. ಶಾಮು ಅವರಿಬ್ಬರ ನಡುವೆ ಮಾತನಾಡದೆ ಮೂಗನಂತೆ ನಿಂತಿದ್ದ. ಸರಸಿ ಪ್ರಸಂಗವನ್ನು ಮನಃಪೂರ್ವಕವಾಗಿ ಬೆಳೆಸುತ್ತಿದ್ದಾಳೆ ಎಂಬುದು ಅವನಿಗೆ ತಿಳಿಯಿತು.

“ ನಂಬಿದರೆ ನಂಬು, ಬಿಟ್ಟರೆ ಬಿಡು. ನಾನು ತಿಳಿಯದೇ ಆ ಕೆಲಸ ಮಾಡಿಸಿದೆ. ತಪ್ಪಾಗಿದ್ದರೆ ಕ್ಷಮಿಸು ” ಎಂದವಳೇ ಮೀರ ರೂಮಿನಿಂದ ಹೊರಗೆ ಹೊರಟು ಹೋದಳು. ಅವಳ ಕಣ್ಣುಗಳಲ್ಲಿನ ಹನಿ ಶಾಮುವಿನ ಚುರುಕುಗಣ್ಣುಗಳಿಗೆ ಕಾಣಿಸದೇ ಇರಲಿಲ್ಲ.

ಮೀರಳ ಕಂಬನಿ ಶಾಮುವಿನ ಮನಸ್ಸನ್ನು ಕಲ್ಲುಮಾಡಿತು.

ಇಪ್ಪತ್ತೆರಡು, ಇಪ್ಪತ್ಮೂರು ವರ್ಷಗಳಾದರೂ ಗಂಡನನ್ನು ಕಾಣದೆ ಹಳ್ಳಿಯಲ್ಲಿ ಕೊಳೆಯುತ್ತಿದ್ದ ಸರಸಿಯನ್ನು ತನ್ನ ವಂಶ ಬೆಳೆಯಲೆಂದು ತಂದು ನನಗೆ ಮದುವೆ ಮಾಡಿಸಿದರೆ, ಅವಳಿಗೆ ಇವಳು ಕೊಡುವ ಪುರಸ್ಕಾರ ಎಂತಹದು ! ಸ್ವಾರ್ಥವನ್ನು ಬಿಟ್ಟು ತನಗಾಗಿ ಮರುಮದುವೆ ಮಾಡಿಸಿದ್ದಕ್ಕೆ ಅವಳಿಗೆ ಸಿಕ್ಕ ಉಡುಗೊರೆ ಯಾವುದು ?

ಗದ್ದೆಯಲ್ಲಿ ನೆತ್ತಿ ಸುಡುವವರೆಗೆ ಕೆಲಸಮಾಡಿ ದುಡಿದು ಬಂದಿದ್ದ ಶಾಮು ಬಹಳವಾಗಿ ಹಸಿದಿದ್ದ. ಆಯಾಸ, ಹಸಿವು, ಕೋಪ ಇವುಗಳಿಂದ ರುದ್ರನಾಗಿ ಮುನ್ನುಗ್ಗಿ ಸರಸಿಯ ಕೆನ್ನೆಗೆ ಛಟೀರನೆ ಹೊಡೆದು

“ ದೊಡ್ಡೋರು, ಚಿಕ್ಕವರು ಎನ್ನುವ ತಾರತಮ್ಯವಿಲ್ಲ. ಅವಳ ದೊಡ್ಡ ಮನಸ್ಸಿನಿಂದಾನೇ ಈಗ ನೀನು ನನ್ನ ಮನೆಯಲ್ಲಿರೋದು ” ಎಂದು ಗುಡುಗಿ ಶಾಮು ಹೊರಗೆ ಬಂದ. ಸರಸಿ ಬಿಕ್ಕಿ ಬಿಕ್ಕಿ ಅಳುತ್ತಾ ಊಟ ಸಹ ಮಾಡದೆ ಮಲಗಿದಳು.

ಕೊನೆಗೂ ಶಾಮು ಮೀರಳನ್ನೇ ವಹಿಸಿಕೊಂಡನಲ್ಲಾ ಎಂಬ ಆಕ್ರೋಶದಿಂದ ಅವಳ ಹೃದಯ ಬಿರಿಯಿತು.

ಶಾಮು ಸರಸಿಯ ಕೆನ್ನೆಗೆ ಹೊಡೆದುದನ್ನು ಕೇಳಿ ಮೀರ ಶಾಮುವನ್ನು ತರಾಟಿಗೆ ತೆಗೆದುಕೊಂಡಳು.

“ ನಾಚಿಕೆಯಾಗೋಲ್ಲವೇ ನಿಮಗೆ? ಹೆಣ್ಣಿನ ಮೇಲೆ ಕೈ ಮಾಡ್ತೀರಲ್ಲಾ....”

ಕೋಪದಲ್ಲಿ ಶಾಮು ಸರಸಿಯ ಕೆನ್ನೆಗೆ ಹೊಡೆದಿದ್ದರೂ ಆಮೇಲೆ ಅವನಿಗೂ ಪಶ್ಚಾತ್ತಾಪ ಉಂಟಾಗಿತ್ತು. ಮೀರ ತನ್ನನ್ನು ಮೂದಲಿಸಿದಾಗ ಶಾಮು ದೈನ್ಯವಾಗಿ

“ ನಾನೇನು ಮಾಡಬೇಕಿತ್ತು ನೀನೇ ಹೇಳು ಮೀರಾ? ನಾನು ಎಂದಾ

ದರೂ ನಿನ್ನ ಮೇಲೆ ಕೈ ಮಾಡಿದೀನೆಯೇ? ಅವಳಿಗೆ ಹೊಡೆಯದೇ ಇರೋದು ನನಗೆ ಸಾಧ್ಯವಾಗಲಿಲ್ಲ."

"ನೀವು ಏನು ಹೇಳಿದರೂ ನೀವು ಮಾಡಿದ್ದು ಸರೀಂತ ನಾನು ಒಪ್ಪೋದಿಲ್ಲ. ನೀವು ಹೊಡೆದಿದ್ದು ತಪ್ಪು."

"ಹೌದು ತಪ್ಪು."

"ಅವಳೊಡನೆ ಕ್ಷಮಾಪಣೆ ಕೇಳಿಕೊಂಡು ನೀವು ಅವಳಿಗೆ ಊಟ ಮಾಡಿಸಿದರೇನೇ ನಾನು ನಿಮ್ಮ ಕೈಲಿ ಮಾತನಾಡೋದು."

"ಇಲ್ಲದಿದ್ದರೆ...."

"ಇಲ್ಲದಿದ್ದರೆ ಈಗಲೇ ಮೈಸೂರಿಗೆ ನಾನು ಹೊರಟು ಹೋಗ್ತೀನಿ."

"ಮೀರಾ...."

"ನಾನು ಹತ್ತು ಎಣಿಸುತ್ತೇನೆ. ಅಷ್ಟರಲ್ಲಿ ನೀವು ಅವಳ ಕ್ಷಮೆ ದೊರಕಿಸಿಕೊಂಡಿರಬೇಕು."

"ಮೀರಾ...."

"ಒಂದು, ಎರಡು, ಮೂರು, ನಾಲ್ಕು...."

ಶಾಮು ಬಲವಂತದಿಂದ ತಳ್ಳಲ್ಪಟ್ಟವನಂತೆ ಸರಸಿಯ ರೂಮಿನೊಳಗೆ ಹೋದ.

ಸುರುಳಿ ಸುತ್ತಿದ್ದ ಹಾಸಿಗೆಯ ಮೇಲೆ ತಲೆಯಿರಿಸಿಕೊಂಡು ಸರಸಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ಶಾಮು ಮಂಚದ ತುದಿಯಲ್ಲಿ ಕುಳಿತು ಮೃದುವಾಗಿ

"ಸರಸೀ" ಎಂದ.

ಸರಸಿ ತಲೆ ಎತ್ತಲಿಲ್ಲ. ಶಾಮು ಅವಳ ಭುಜ ಹಿಡಿದೆತ್ತಿ, ಅವಳನ್ನು ಬಲವಂತವಾಗಿ ತನ್ನ ಕಡೆ ತಿರುಗಿಸಿಕೊಂಡು

"ಸರಸೀ ನನ್ನದು ತಪ್ಪಾಯಿತು. ಊಟ ಮಾಡು ಏಳು" ಎಂದ.

ತನ್ನ ಗಲ್ಲ ಹಿಡಿದಿದ್ದ ಶಾಮುವಿನ ಕೈಯನ್ನು ಸರಸಿ ಕೋಪದಿಂದ ಕಿತ್ತೆಸೆದು

"ನಾನಿದ್ದರೆಷ್ಟು, ಸತ್ತರೆಷ್ಟು? ನೀವು, ನಿಮ್ಮ ಮೀರ ಸುಖವಾಗಿರಿ" ಎಂದಳು. ಅವಳು ಮೀರಳ ಹೆಸರು ಹೇಳುತ್ತಲೇ ಶಾಮು ಕೆಣಕಿದ ಫಣಿಯಂತಾದ. ಅವನು ತಟ್ಟನೆ ಅವಳಿಂದ ದೂರ ಸರಿದು

"ನೀನು ಅವಳ ಹೆಸರು ಎತ್ತಬೇಡ. ಅನ್ಯಾಯವಾಗಿ ಅವಳನ್ನ ಯಾಕೆ ದೂರುತ್ತೀಯಾ?" ಎಂದ.

" ನಿಮ್ಮ ಪಾಲಿಗೆ ಅವರು ಸರ್ವಗುಣಸಂಪನ್ನೆ."

" ಹೌದು."

" ನೀವು ಅವರನ್ನು ತಲೆ ಮೇಲೆ ಕೂರಿಸಿಕೊಂಡು ಮೆರೆಸಿದರೂ, ಅವರು ಮಾತ್ರ ನಿಮ್ಮನ್ನು ಬಿಟ್ಟು ಓಡೋಕೆ ಯಾಕೆ ಹೋಗ್ತಾರೆ? ಗಂಡನ್ನ ಬಿಟ್ಟು ಹೋಗೋಳು ಸರ್ವಗುಣಸಂಪನ್ನೆ."

" ಸರಸಿ, ಬಾಯಿ ಮುಚ್ಚು."

" ಇದ್ದಿದ್ದು ಇದ್ದ ಹಾಗೆ ಹೇಳಿದರೆ ಕೆಂಡದಂತಹ ಕೋಪ."

" ಸರಸೀ, ಈಗ ನಾನು ನಿನ್ನಲ್ಲಿ ಕ್ಷಮಾಪಣೆ ಕೇಳಿದ್ದು ಮೀರಳಿಗಾಗಿ. ಪುನಃ ನನ್ನ ರೇಗಿಸಿ ಏಟು ತಿನ್ನಬೇಡ. ಸುಮ್ಮನೆ ಊಟ ಮಾಡು ಬಾ."

" ನನಗೇನೂ ಬೇಕಿಲ್ಲ. ನೀವು ಮಾಡಿ."

ಮಾತಿಗೆ ಮಾತು ಜೋಡಿಸುತ್ತಿರುವ ಸರಸಿಯನ್ನು ಕಂಡು ಶಾಮು ಕ್ಷಣಕಾಲ ಬೆಪ್ಪಾಗಿ ನಿಂತು ರುದ್ರನಾಗಿ ಹೇಳಿದ

" ಬರ್ತೀಯೋ ಇಲ್ವೋ ?"

" ಊಹೂಂ" ಎಂದಳು ಸರಸಿ ಮೊಂಡತನದಿಂದ.

ಶಾಮು ಅವಳಿಗೆ ಮತ್ತೆರಡು ಏಟುಗಳನ್ನು ಬಿಗಿದ. ಸರಸಿ ಮುಖ ಬಿಗಿದುಕೊಂಡು ಹಲ್ಲುಕಚ್ಚಿ, ಕಲ್ಲಿನಂತೆ ನಿಂತಿದ್ದಳು.

ಮೀರ ಓಡಿ ಬಂದು ಗಂಡ ಹೆಂಡಿರ ನಡುವೆ ನಿಂತು, ಶಾಮುವಿನ ಕೈಯನ್ನು ಬಿಗಿಯಾಗಿ ಹಿಡಿದಳು.

" ನೀವು ಅವಳನ್ನು ಹೊಡೆದರೆ ನನ್ನಾಣೆಯಿದೆ."

" ಹೊಡೆಸೋದು ಹೊಡೆಸಿಬಿಟ್ಟು ಈಗ ಏನೂ ಕಾಣದವರ ಹಾಗೆ ಬರಬೇಡಿ" ಎಂದಳು ಸರಸಿ.

ಹುಚ್ಚನನ್ನು ಪಳಗಿಸಬಹುದು, ಆದರೆ ಮೂರ್ಖರೊಡನೆ ಸೆಣಸಾಡುವುದು ಕಷ್ಟ ಎಂದುಕೊಂಡಳು ಮೀರ.

" ನಡಿ ಮೀರಾ, ನಾವು ಹೋಗೋಣ. ಗಾದೆ ಕೇಳಿಲ್ಲಿವೇ—ಸಗಣಿ ಯವನ ಕೂಡ ಸರಸವಾಡೋದಕ್ಕಿಂತ ಗಂಧದವನ ಜೊತೆ ಗುದ್ದಾಡುವುದು ಮೇಲೂಂತ. ಹೋಗೋಣ ಬಾ" ಎಂದು ಶಾಮು ಮೀರಳ ಕೈ ಹಿಡಿದೆಳೆದು ಹೊರಟ.

" ಹೌದು. ನಾನು ಸಗಣಿ, ಅವರು ಗಂಧ. ನೀವು ಅವರ ಜೊತೇನೇ ಗುದ್ದಾಡಿ" ಎಂದವಳೇ ಸರಸಿ ಬಾಗಿಲು ಹಾಕಿಕೊಂಡಳು.

ಆ ದಿನ ಸರಸಿ ಊಟ ಮಾಡಲಿಲ್ಲ. ವೆಂಕಮ್ಮನವರು ಸರಸಿಯನ್ನು

ಮತ್ತೆ ಬಲವಂತ ಮಾಡಿ ವಿಫಲರಾದರು. ಇಡೀ ದಿನ ಸರಸಿ ತನ್ನ ರೂಮಿನ ಬಾಗಿಲನ್ನು ಸಹ ತೆಗೆಯಲಿಲ್ಲ. ಅದನ್ನು ನೋಡಿ ಮೀರ ಗಾಬರಿಯಾಗಿ

"ರೂಮಿನ ಬಾಗಿಲನ್ನಾದರೂ ತೆಗೆಸಿ. ನಮ್ಮ ಮೇಲಿನ ಕೋಪಕ್ಕೆ ಏನಾದರೂ ಮಾಡಿಕೊಂಡಾಳು" ಎಂದಳು ಗಂಡನಿಗೆ.

"ಮಾಡಿಕೊಂಡರೆ ಕಾಟವೇ ಕಳೆಯಿತು. ಎರಡನೇ ಮದುವೆ ಬೇಡಾಂತ ನಿನ್ನ ಮುಂದೆ ತಲೆ ಚಚ್ಚಿಕೊಂಡೆ. ನನ್ನ ಮಾತು ಕೇಳದೆ ಈ ಶನೀನ ಗಂಟುಹಾಕಿದೆಯಲ್ಲಾ ಈಗ ಅನುಭವಿಸು" ಎಂದು ಶಾಮು ಮೀರಳ ಮೇಲೆ ರೇಗಿದ.

ಗಂಡನಿಗೆ ಮತ್ತೊಂದು ಮದುವೆ ಮಾಡಿಸಿದ ಮಾತ್ರಕ್ಕೆ ಇಂತಹ ಪರಿಸ್ಥಿತಿಯನ್ನೆದುರಿಸಬೇಕಾಗಬಹುದು ಎಂದು ಮೀರ ಕನಸಿನಲ್ಲಿಯೂ ಎಣಿಸಿರಲಿಲ್ಲ. ಸವತಿಯರಾದ ಮಾತ್ರಕ್ಕೆ ಯಾವಾಗಲೂ ಜಗಳವಾಡಬೇಕೆಂದಿದೆಯೇ? ಸವತಿಯರು ಅಕ್ಕತಂಗಿಯರಂತೆ ಹೊಂದಿಕೊಂಡು ಸಂಸಾರ ನಡೆಸುವುದು ಸಾಧ್ಯವೇ ಇಲ್ಲವೇ?

ಮೀರ ತಾನೇನೋ ಯೋಚಿಸಿದ್ದಳು. ಆದರೆ ನಡೆದದ್ದೇನು?

ಒಂದೆರಡು ದಿನ ಮನೆ ಅಶಾಂತಿಯಲ್ಲಿ ಮುಳುಗಿತ್ತು. ಮನೆಯ ವಾತಾವರಣವನ್ನು ಸರಿಪಡಿಸಲು ಸರಸಿ ಸ್ವಲ್ಪವೂ ಪ್ರಯತ್ನಿಸಲಿಲ್ಲ. ಆದರೆ ಶಾಮು, ಮೀರ ಸತತವಾಗಿ ಪ್ರಯತ್ನಿಸಿ ಸರಸಿಯೊಡನೆ ಮೊದಲಿನಂತೆ ಮಾತುಕತೆಯಾಡುತ್ತಿದ್ದರು.

ಸರಸಿಗೆ ಶಾಮುವಿನ ಮೇಲೆ ಸ್ವಲ್ಪವೂ ಕೋಪವಿರಲಿಲ್ಲ. ಮೀರಳಿಂದಲೇ ಶಾಮು ಮೊದಲು ತನ್ನನ್ನು ನಿರಾಕರಿಸಿದುದು, ಅವಳಿಂದಾಗಿಯೇ ಈಗಲೂ ತನ್ನನ್ನು ಅವನು ಕಡೆಗಾಣಿಸುತ್ತಿದ್ದಾನೆ ಎಂದವಳು ಧೃಡವಾಗಿ ನಂಬಿದ್ದಳು.

ಆದುದರಿಂದ ಸರಸಿ, ಶಾಮುವಿಗೆ ಮತ್ತೆ ಹೊಂದಿಕೆಯಾದರೂ ಮೀರ, ಸರಸಿಗೆ ಮಾತ್ರ ಹೊಂದಿಕೆಯಾಗಲಿಲ್ಲ. ಮೀರ ಪ್ರಯತ್ನಿಸಿದಷ್ಟೂ ಸರಸಿ ಅವಳಿಂದ ದೂರವಿರಲು ಪ್ರಯತ್ನಿಸುತ್ತಿದ್ದಳು.

ರಜ ಕಳೆದರೆ ಸಾಕೆಂದು ಮೀರ ಹಲುಬಿದಳು. ಮುಳ್ಳಮೇಲೆ ನಿಂತವಳಂತೆ ರಜ ಕಳೆದು, ಕಾಲೇಜು ಬಾಗಿಲು ತೆಗೆಯಲು ಎರಡು ದಿನವಿರುವಾಗಲೇ ಮೀರ ಮೈಸೂರಿಗೆ ಧಾವಿಸಿದಳು.

ಕೊನೆಯ ವರ್ಷದ ಪರೀಕ್ಷೆಯಾದುದರಿಂದ ಮೀರ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ವ್ಯಾಸಂಗದಲ್ಲಿ ಮಗ್ನಳಾದಳು. ಆಸ್ಪತ್ರೆಯಲ್ಲಿ ಹೌಸ್ ಸರ್ಜನ್ ಆಗಿದ್ದ ಗೋಪಿ ವಿಜಯಳಿಗೆ ಎಚ್ಚರಿಕೆ ಹೇಳಿದ್ದ

"ಇನ್ನೊಂದು ವರ್ಷ ಮನಸ್ಸಿಟ್ಟು ಓದಿ ಪಾಸು ಮಾಡಬೇಕು ವಿಜಯ್. ನಿನ್ನ ಪರೀಕ್ಷೆ ಮುಗಿದ ಮೇಲೆ ನಾವಿಬ್ಬರೂ ಕಾಳಗದ ಕಹಳೆ ಊದಬೇಕಾಗುತ್ತದೆ."

ವಿಜಯ ಗೋಪಿಯ ಮಾತನ್ನು ಮನ್ನಿಸುವುದಕ್ಕಾಗಿ ಓದುತ್ತಿದ್ದಳೇ ಹೊರತು, ಮೆಡಿಕಲ್ ಪರೀಕ್ಷೆಯಲ್ಲಿ ಅವಳಿಗೆ ಸೇರುವಾಗ ಇದ್ದ ಆಸಕ್ತಿ ಇರಲಿಲ್ಲ.

"ಓದಲೇ ಬೇಕೆ ಗೋಪಿ?" ಎಂದು ಅವಳು ಕೇಳಿದ್ದಳು.

"ಹೀಗೆ ಕೇಳಿದರೆ ನಾನೇನು ಹೇಳಲಿ? ಈಗ ನೀನು ಕಾಲೇಜಿನಲ್ಲಿ ಇಷ್ಟು ವರ್ಷ ಓದಿದ್ದೆಲ್ಲಾ ದಂಡವಾಗತ್ತೆ. ನೀನು ಮೆಡಿಕಲ್ ಪಾಸ್ ಮಾಡದೇ ಇದ್ದರೆ...."

"ಏನ್ಮಾಡ್ತೀರಿ?" ವಿಜಯ ತುಂಟತನದಿಂದ ಕೇಳುತ್ತಿದ್ದಳು.

"ನನಗೆ ಹೆಣ್ಣು ಕೊಡ್ತೀನೀಂತ ಯಾರ‍್ಯಾರೋ ಬರ್ತಿದ್ದಾರೆ. ಅವರ ಪೈಕಿ ಯಾವುದಾದರೂ ಒಂದು ಹುಡುಗೀನ ಮದುವೆ ಮಾಡಿಕೊಳ್ಳುತ್ತೀನಿ."

ಬಹಳ ಸಂತೋಷ. ಮದುವೆ ಯಾವಾಗ?" ವಿಜಯ ಅವನ ಬೆದರಿಕೆಯನ್ನು ಸ್ವಲ್ಪವೂ ಲಕ್ಷಿಸುತ್ತಿರಲಿಲ್ಲ.

"ನಿನ್ನ ಪರೀಕ್ಷೆ ಮುಗಿದ ಮೇಲೆ."

"ನಿಮ್ಮ ಮದುವೆಗೂ, ನನ್ನ ಓದಿಗೂ ಏನು ಸಂಬಂಧ?"

"ನಿನ್ನ ಕೈಲಿ ಸರಸ ಆಡೋಕೆ ಸಮಯವಿಲ್ಲ ನನಗೆ" ಎಂದು ಗೋಪಿ ಮುನಿಯುತ್ತಿದ್ದ.

"ಯಾರ ಕೈಲಿ ಸರಸ ಆಡೋಕೆ ಸಮಯವಿದೆ? ಆ ನರ್ಸ್...."

"ಬೇಡಾ ವಿಜಯ್. ನನ್ನ ರೇಗಿಸಬೇಡ."

"ಏನ್ಮಾಡ್ತೀರಿ ರೇಗಿಸಿದರೆ?"

"ಇಲ್ಲಿ ಯಾರಿದ್ದಾರೆ ಯಾರಿಲ್ಲಾಂತ ನೋಡೋದಿಲ್ಲ—ಈ ನರ್ಸುಗಳು, ಪೇಷಂಟುಗಳ ಎದುರಿಗೇ ನಿನ್ನ ಹಿಡಿದು ಮುತ್ತಿಟ್ಟುಬಿಡುತ್ತೇನೆ."

"ಸಧ್ಯ, ಅದೊಂದು ಬಾಕಿ. ನೀವು ನಿಮ್ಮ ತಂದೇಗೆ ಏನು ಹೇಳಿದಿರಿ?"

"ನಾನು ಸಧ್ಯಕ್ಕೆ ಮದುವೆ ಆಗೋದಿಲ್ಲಾಂತ ಹೇಳಿದೀನಿ. ನನಗೆ ಕೆಲಸ ಸಿಗುವವರೆಗೂ ಮದುವೆ ಮಾತು ಎತ್ತಬೇಡಿ ಎಂದು ಹೇಳಿದ್ದೇನೆ." ಎನ್ನುತ್ತಿದ್ದ ಗೋಪಿ.

ಗೋಪಿಗಾಗಿಯಾದರೂ ವಿಜಯ ತನ್ನ ವ್ಯಾಸಂಗವನ್ನು ಪೂರ್ಣ ಗೊಳಿಸಬೇಕಿತ್ತು. ಆದುದರಿಂದ ಅವಳು ಮೊದಲಿನಂತೆ ಗೋಪಿಯೊಡನೆ ಹರಟೆಗೆ ನಿಲ್ಲದೆ ತನ್ನ ಕೆಲಸವನ್ನು ಮುಗಿಸುತ್ತಿದ್ದಳು.

ಒಂದು ಮಧ್ಯಾಹ್ನ ಮೀರ ಆಗತಾನೆ ಕಾಲೇಜಿನಿಂದ ಹಾಸ್ಟಲಿಗೆ ಬಂದಿದ್ದಳು. ಅವಳ ಹೆಸರಿಗೆ ಬಂದಿದ್ದ ಕಾಗದ ಮೇಜಿನ ಮೇಲಿತ್ತು. ಮೀರ ಆತುರದಿಂದ ಕಾಗದವನ್ನು ಒಡೆದಳು; ಶಾಮು ಮೀರಳಿಗೆ ಕಾಗದ ಬರೆದಿದ್ದ.

" ಮೀರಾ,

ಇತ್ತೀಚೆಗೆ ಸರಸಿಯ ಆರೋಗ್ಯ ಅಷ್ಟೇನು ಚೆನ್ನಾಗಿಲ್ಲ. ಆದುದರಿಂದ ಅವಳನ್ನು ಮೈಸೂರಿಗೆ ಕರೆದುಕೊಂಡು ಬರೋಣವೆಂದುಕೊಂಡಿದ್ದೇನೆ. ಅವಳನ್ನು ಸರಿಯಾದ ವೈದ್ಯರಿಗೆ ತೋರಿಸುವ ಜವಾಬ್ದಾರಿ ನಿನ್ನದು.

ಶಾಮು."

ಕಾಗದ ಓದಿ ಮೀರಳ ಮನಸ್ಸು ಕಳವಳಗೊಂಡಿತು. ಅವಳು ಕೂಡಲೇ ಸರಸಿಯನ್ನು ಕರೆದುಕೊಂಡು ಬರುವಂತೆ ಶಾಮುವಿಗೆ ಕಾಗದ ಬರೆದಳು.

ಶಾಮು ಸರಸಿಯನ್ನು ಕರೆದುಕೊಂಡು ಬಂದ ಮೇಲೆ ಅವನ ಕಳವಳ ಕಂಡು ಮೀರಾಗೆ ನಗು ಬಂತು. ದುರ್ಬಲಳಾಗಿದ್ದ ಸರಸಿಯನ್ನು ತಾನೇ ಎಂ. ಬಿ. ಗೆ ತೋರಿಸಿ ಅವರಿಂದ ಸಲಹೆ ಪಡೆದಳು.

" ಏನೂ ಯೋಚನೆ ಪಡಬೇಡಿ. ಎರಡು ತಿಂಗಳಾಗಿದೆ. ಹಾಲು, ಹಣ್ಣು ಧಾರಾಳವಾಗಿ ತೆಗೆದುಕೊಳ್ಳಿ " ಎಂದು ಸರಸಿಗೆ ಹೇಳಿ ಎಂ. ಬಿ. ಮೀರಳ ಕಡೆ ತಿರುಗಿ

" ಇವರು ನಿನಗೇನಾಗಬೇಕು ?" ಎಂದರು.

ಮೀರಳ ನಾಲಿಗೆ ಒಂದು ಕ್ಷಣಮಾತ್ರ ತಡೆಯಿತು. ಅನಂತರ ಅವಳು ಅಳುಕದೆ ಉತ್ತರ ಕೊಟ್ಟಳು—" ಇವಳು ನನ್ನ ತಂಗಿ."

ಅದೇ ಸಂಜೆ ಶಾಮು ಸರಸಿಯೊಡನೆ ಹಳ್ಳಿಗೆ ಹೊರಟು ಹೋದ. ವೈದ್ಯರಿಂದ ಸರಸಿಗೆ ಎರಡು ತಿಂಗಳಾಗಿದೆ ಎಂದು ಕೇಳಿ ಮೀರಳಿಗೆ ಹರ್ಷ ವಾಯಿತು. ತಾನು ಯಾವ ಉದ್ದೇಶಕ್ಕಾಗಿ ಶಾಮುವಿಗೆ ಮದುವೆ ಮಾಡಿ ಸಿದ್ದಳೋ ಅದು ಫಲಪ್ರದವಾದುದನ್ನು ಕಂಡು ಅವಳಿಗೆ ಅಪರಿಮಿತ ಆನಂದ ವಾಯಿತು. ಆದರೂ ಅಂತರಂಗದ ಆಳದಲ್ಲಿ ನೋವಿನ ನರವೊಂದು ಮಿಡಿಯಿತು.

"ನನ್ನ ವೀಣಾ ಬದುಕಿದ್ದರೆ...."

ಆದರೆ ಮೀರ ಈ ನೋವನ್ನು ಬೇಗ ನುಂಗಿಕೊಂಡಳು. ಸರಸಿ ಗರ್ಭಿಣಿಯೆಂದು ತಿಳಿದ ಒಂದೆರಡು ದಿನ ಮೀರಳಿಗೆ ಎಲ್ಲೆಲ್ಲಿಯೂ ವೀಣಳ ಮೂರ್ತಿಯೇ ಕಾಣಿಸುತ್ತಿತ್ತು. ವೀಣಳ ರೂಪ, ಆಟ, ತುಂಟತನ ಅವಳ ನೆನಪಿನಲ್ಲಿ ಕಿಚ್ಚಿನಂತೆ ಉರಿದವು—ಎರಡೇ ದಿನ. ಅನಂತರ ಎಲ್ಲವೂ ಮತ್ತೆ ಶಾಂತಿವಾಯಿತು.

ಸರಸಿಯ ಯೋಗಕ್ಷೇಮವನ್ನು ವಿಚಾರಿಸಿ, ಅವಳಿಗೆ ಕೆಲವು ಸಲಹೆಗಳನ್ನು ಕೊಡಲು ಮೀರಾ ಆಗಾಗ್ಗೆ ಕಾಗದಗಳನ್ನು ಬರೆಯುತ್ತಿದ್ದಳು. ಸರಸಿ ಮೀರಳಿಂದ ಸಲಹೆಗಳನ್ನು ಸ್ವೀಕರಿಸಿದರೂ, ಅವಳಿಗೆ ಕೃತಜ್ಞತೆಯನ್ನರ್ಪಿಸಿ ಕಾಗದ ಬರೆಯುವ ಔದಾರ್ಯವನ್ನು ತೋರಿಸಲಿಲ್ಲ. ಮೀರ ಸರಸಿಯಿಂದ ಯಾವ ಬಗೆಯ ಪತ್ರವನ್ನು ನಿರೀಕ್ಷಿಸಿಯೂ ಇರಲಿಲ್ಲ. ತನಗೆ ತಿಳಿದ ಮಟ್ಟಿಗೆ ವೈದ್ಯದ ಬಗ್ಗೆ ಸರಸಿಗೆ ಸಲಹೆ ಕೊಡುವುದು ತನ್ನ ಕರ್ತವ್ಯ ಎಂದು ಮೀರ ಭಾವಿಸಿದ್ದಳು.

ಸರಸಿ ಗರ್ಭಿಣಿಯೆಂಬುದು ತಿಳಿದ ಕೂಡಲೇ ಶಾಮು ಅವಳನ್ನು ತುಂಬಾ ಆದರದಿಂದ ನೋಡಿಕೊಳ್ಳುತ್ತಿದ್ದ. ಅವನಿಗೆ ಮಕ್ಕಳೆಂದರೆ ತುಂಬಾ ಆಸೆಯಿತ್ತು. ಅವನ ಆಸೆಯೆಲ್ಲಾ ರೂಪುಗೊಂಡಂತೆ ಜಾನಿ ಅವನ ಮನೆಯ ಬೆಳಕಾಗಿ ಬಂದು ಐದು ವರ್ಷಗಳು ಬೆಳಗಿ ಮರೆಯಾಗಿದ್ದಳು.

ಈಗ ಮತ್ತೆ ತಾನು ತಂದೆಯಾಗಲಿರುವನೆಂದು ತಿಳಿದು ಶಾಮುವಿನ ಹೃದಯ ಸಂತಸದಿಂದ ನಲಿದಾಡಿತು.

ಪರೀಕ್ಷೆ ಮುಗಿಸಿಕೊಂಡು ಮೀರ ಹಳ್ಳಿಗೆ ಬಂದಾಗ ಸರಸಿ ಒಂದು ತಿಂಗಳ ಗಂಡು ಮಗುವಿನ ತಾಯಿಯಾಗಿದ್ದಳು. ಸರಸಿಯನ್ನು ಅವರ ತಾಯಿ ಬಾಣಂತನಕ್ಕೆ ಕರೆದೊಯ್ದಿದ್ದರು. ಪರೀಕ್ಷೆಯ ಸಮಯವಾಗಿದ್ದುದರಿಂದ ಮೀರ ಮಗುವಿನ ನಾಮಕರಣಕ್ಕೆ ಹೋಗಲಿಲ್ಲ. ತಾನು ಹೋಗದಿದ್ದರೂ ಅವಳು ರೆಡಿಮೇಡ್ ಸ್ವೆಟರು. ಕುಲಾವಿ, ಕಾಲುಚೀಲಗಳನ್ನು ಮಗುವಿಗೆ ಉಡುಗೊರೆಯಾಗಿ ಕಳುಹಿಸಿದ್ದಳು.

ಪರೀಕ್ಷೆ ಮುಗಿಸಿಕೊಂಡು ಮೀರ ಹಳ್ಳಿಗೆ ಬಂದಾಗ ಸರಸಿ ತವರು ಮನೆಗೆ ಹೋಗಿದ್ದಳು. ಮೀರ ಬಸ್ಸಿನಿಂದಿಳಿದು ಮನೆಗೆ ಬಂದವಳೇ ಮೊದಲು ಮಗುವಿನ ವಿಷಯ ಕೇಳಿದಳು,

"ಹೇಗಿದಾನೆ ಸರಸಿಯ ಕುಮಾರ ಕಂಠೀರವ?"

"ಹುಷಾರಾಗಿದಾನೆ."

"ಯಾರ ಹಾಗಿದಾನೆ? ನಿಮ್ಮ ಹಾಗೋ, ಸರಸಿಯ ಹಾಗೋ?"

"ಎಲ್ಲರೂ ನನ್ನ ಹಾಗೇ ಇದಾನೆ ಅಂತಾರೆ. ನಾಡಿದ್ದು ಅಲ್ಲಿಗೆ ಹೋಗಿ ಬರೋಣ. ಆಗ ನೀನೆ ಹೇಳುವಿಯಂತೆ."

"ಹೆಸರೇನು ಇಟ್ಟಿರಿ?"

"ನಮ್ಮ ತಂದೆಯ ಹೆಸರು ಇಟ್ಟಿದೀವಿ. ಸುಬ್ರಮಣ್ಯಾಂತ."

ಮೀರ ತಾನು ಮಗುವಿಗಾಗಿ ತಂದಿದ್ದ ರೆಡಿಮೇಡ್ ಅಂಗಿಗಳು, ಆಟದ ಸಾಮಾನುಗಳನ್ನು ಒಂದೊಂದಾಗಿ ತೆಗೆದು ಶಾಮುವಿಗೆ ತೋರಿಸಿದಳು. ಶಾಮು ಆಟದ ಸಾಮಾನುಗಳನ್ನು ನೋಡದೆ ಮೀರಳನ್ನು ನೋಡುತ್ತಿದ್ದ.

"ಮೀರಾ, ನಿನ್ನ ನೋಡಿದರೆ ನನಗೆ ತುಂಬಾ ವ್ಯಥೆಯಾಗುತ್ತದೆ. ಜಾನಿ ಇದ್ದಿದ್ದರೆ...."

"ಹಳೆಯದನ್ನೆಲ್ಲಾ ಜ್ಞಾಪಿಸಬೇಡಿ."

"ಸುಬ್ರಮಣ್ಯನಿಗೆ ಆಟದ ಸಾಮಾನುಗಳನ್ನು ತಂದು ನೀನು ಸಂತೋಷಪಡ್ತಿರೋದನ್ನ ನೋಡಿ ನನಗೆ ಸಂಕಟವಾಯಿತು."

ಮೀರ ಗಂಭೀರ ದನಿಯಿಂದ "ಜೀವನದಲ್ಲಿ ನಾನು ಯಾವುದಕ್ಕೆ ಮಹತ್ತರವಾದ ಸ್ಥಾನವನ್ನು ಕೊಟ್ಟದ್ದೆನೋ ಆ ಆದರ್ಶವನ್ನು ಸಾಧಿಸಲು ನೀವು ನನಗೆ ಸಹಾಯವನ್ನು ಮಾಡಿದ್ದೀರಿ. ನಾನು ಬದುಕಿನಿಂದ ಮತ್ತೇನನ್ನೂ ಬಯಸುವುದಿಲ್ಲ." ಎಂದಳು.

ಅವಳು ಕೊಟ್ಟ ಉತ್ತರ ಶಾಮುವನ್ನು ಮೂಕನನ್ನಾಗಿಸಿತು.

ಮೀರ, ಶಾಮು ಸರಸಿಯ ಮಗುವನ್ನು ನೋಡಲು ಹಳ್ಳಿಗೆ ಹೊರಟರು. ಮನೆಗೆ ಹೋಗುತ್ತಲೇ ಮೀರ ಸರಸಿ ಮಲಗಿದ್ದ ರೂಮಿಗೆ ಧಾವಿಸಿ ಹೋಗಿ, ತೊಟ್ಟಿಲಿನಲ್ಲಿ ಆಡುತ್ತ ಮಲಗಿದ್ದ ಮಗುವನ್ನು ಎತ್ತಿಕೊಂಡು ಬಂದು ಶಾಮುವಿನ ಕೈಗೆ ಕೊಟ್ಟು

"ಇವತ್ತಿಗೆ ನನಗೆ ತೃಪ್ತಿಯಾಯಿತು" ಎಂದಳು.

ಶಾಮು ಹೇಳಿದ್ದಂತೆ ಸುಬ್ರಮಣ್ಯ ಶಾಮುವಿನ ಪಡಿಯಚ್ಚಾಗಿದ್ದ. ಸಾವಿತ್ರಮ್ಮನವರಂತೂ ಮೊಮ್ಮಗನನ್ನು ಪುಟ್ಟಶಾಮು ಎಂದೇ ಕರೆಯುತ್ತಿದ್ದರು. ಮೀರ ಮಗುವನ್ನು ಎತ್ತಿಕೊಂಡಾಗ ಸಾವಿತ್ರಮ್ಮ ಹೇಳಿದರು.

"ಶಾಮು ಮಗುವಾಗಿದ್ದಾಗ ಹೀಗೇ ಇದ್ದ."

ಮೀರ ಮಗುವಿಗಾಗಿ ತಂದಿದ್ದ ಅಂಗಿಗಳನ್ನು ನೋಡಿ ಸಾವಿತ್ರಮ್ಮ

"ಯಾಕಮ್ಮ ಇಷ್ಟೊಂದು ಅಂಗಿಗಳನ್ನು ತಂದೆ? ಎಲ್ಲಾ ಎರಡು

"ಆದರೇನಂತೆ—ಸುಬ್ರಮಣ್ಯನ ತಂಗಿಗೋ, ತಮ್ಮನಿಗೋ ಆಗುತ್ತದೆ" ಎಂದಳು ಮೀರ.

ಮೀರಳ ಮಾತು ಕೇಳಿ ಮಂಚದ ಮೇಲೆ ಮಲಗಿದ್ದ ಸರಸಿ ಕಿಲಕಿಲನೆ ನಕ್ಕಳು. ಸರಸಿಯಲ್ಲಿದ್ದ ಸವತಿ ಮಾತ್ಸರ್ಯ ಈಗ ಸ್ವಲ್ಪ ದೂರವಾಗಿ, ಅವಳು ಮಗುವಿನ ತಾಯಿಯಾಗಿದ್ದಳು.

ಎರಡು ದಿನಗಳ ನಂತರ ಮೀರ, ಶಾಮು ತಮ್ಮ ಹಳ್ಳಿಗೆ ಹಿಂದಿರುಗಿದರು.

ಸುಬ್ರಮಣ್ಯನಿಗೆ ಮೂರು ತಿಂಗಳು ತುಂಬುವುದರಲ್ಲಿ ಶಾಮು ಹಳ್ಳಿಗೆ ನಾಲ್ಕಾರು ಬಾರಿ ಹೋಗಿ ಬಂದಿದ್ದ. ಮಗುವಿಗೆ ಮೂರು ತಿಂಗಳು ತುಂಬುತ್ತಲೇ ಅವನು ಅತ್ತೆ, ಮಾವನನ್ನು ಹಿಂಸೆ ಮಾಡಿ, ಹೆಂಡತಿ, ಮಗುವನ್ನು ತನ್ನೂರಿಗೆ ಹೊರಡಿಸಿಯೇ ಬಿಟ್ಟ.

ಸರಸಿ ಮಗುವಿನೊಡನೆ ಬರುವುದನ್ನೇ ನಿರೀಕ್ಷಿಸುತ್ತಾ ಮೀರಾ ಮುಂಬಾಗಿಲಿನಲ್ಲಿ ನಿಂತಿದ್ದಳು. ತಾನು ವೀಣಳೊಡನೆ ಟ್ಯಾಕ್ಸಿಯಲ್ಲಿ ಮನೆಗೆ ಬಂದ ದೃಶ್ಯ ಅವಳ ಅಂತರಂಗ ಪಟದ ಮೇಲೆ ಸ್ಪಷ್ಟವಾಗಿ ಮೂಡಿತ್ತು. ಹಳ್ಳಿಯ ಹೆಂಗಸರು, ಮಕ್ಕಳು ಆ ದಿನದಂತೆಯೇ ಈ ದಿನವೂ ಶಾಮುವಿನ ಮಗನನ್ನು ನೋಡಲು ಗುಂಪು ಕಟ್ಟಿ ನಿಂತಿದ್ದರು.

ಸರಸಿ, ಶಾಮು, ಮಗು ಸಾವಿತ್ರಮ್ಮ ಎಲ್ಲರೂ ಗಾಡಿಯಿಂದಿಳಿದರು. ಶಾಮುವಿನ ರೈತರುಗಳು ಮಗುವನ್ನು ನೋಡಿ ತೃಪ್ತಿಪಟ್ಟು ಹೊರಟು ಹೋದರು. ಮೀರ ಮಾತ್ರ ನಿಂತಲ್ಲಿಯೇ ಪ್ರತಿಮೆಯಂತೆ ನಿಂತಿದ್ದಳು.

ಗುಂಗುರು ತಲೆಯ, ಸುಳಿಗಲ್ಲದ, ಮಿಂಚುಗಣ್ಣಿನ, ತಿಳಿ ದೇಹ ಕಾಂತಿಯ ಪುಟ್ಟ ವೀಣಾ ಮೀರಳ ಮನಸ್ಸಿನಲ್ಲಿ ದುಃಖದ ತೆರೆಗಳನ್ನು ಎಬ್ಬಿಸಿದ್ದಳು. ನೆನಪಿನ ಬಿರುಗಾಳಿಯಿಂದಾಗಿ ಮೀರ ತತ್ತರಿಸಿದಳು. ಎಲ್ಲರೂ ಒಳಗೆ ಹೋದ ನಂತರವೂ ಮೀರ ಅಲ್ಲಿಯೇ ನಿಂತಿದ್ದಳು. ಅವಳು ನಿಶ್ಚಲಳಾಗಿ ನಿಂತಿರುವುದನ್ನು ನೋಡಿ ಶಾಮು ಹೊರಗೆ ಬಂದು "ಮೀರಾ" ಎಂದು ಕೂಗಿದ. ಅವಳ ತೊಳಲಾಟ ಅವನಿಗೆ ಅರ್ಥವಾಯಿತು ಅವನ ಮನಸ್ಸೂ ಮಗಳ ನೆನಪಿನಿಂದ ವ್ಯಥೆಗೊಂಡಿತು.

ಮೀರ ತುಟಿಕಚ್ಚಿ ಅಳು ನುಂಗಲು ಯತ್ನಿಸಿದಳು. ಆದರೆ ಅದು ಸಾಧ್ಯವಾಗಲಿಲ್ಲ. ಶಾಮು ಅವಳನ್ನು ಸಮಾಧಾನ ಪಡಿಸುತ್ತಾ ನಿಂತ.

ಶಾಮುವನ್ನು ಹುಡುಕಿಕೊಂಡು ಬಂದ ಸರಸಿ ಈ ದೃಶ್ಯ ನೋಡಿ ಸ್ತಬ್ಧಳಾಗಿ ನಿಂತುಬಿಟ್ಟಳು. ಅವಳ ಮನಸ್ಸಿನಲ್ಲಿ ಅಸಮಾಧಾನದ ಹೊಗೆ ಭುಗಿಲ್ ಎಂದು ಹೊತ್ತಿಕೊಂಡಿತು.

ತಾನು ಗಂಡು ಮಗುವಿನೊಡನೆ ಲಕ್ಷಣವಾಗಿ ಮನೆಗೆ ಬಂದಿರುವಾಗ ಸತ್ತವರ ಮನೆಯಂತೆ ಮೀರ ಅಳುವುದೇಕೆ? ಅವಳು ಅತ್ತರೆ ಮುತ್ತು ಸುರಿಯುವುದು ಎನ್ನುವಂತೆ ಶಾಮು ಅವಳನ್ನು ಸಂತಯಿಸುವುದಾದರೂ ಏಕೆ? ಒಟ್ಟಿನಲ್ಲಿ ಗಂಡು ಮಗುವಿನ ತಾಯಾಗಿ ತಾನು ಮನೆಗೆ ಬಂದಿರುವುದು ಮೀರಳಿಗೆ ತಾಳಿಕೆಯಿಲ್ಲ.

ಸರಸಿ ತಕ್ಷಣ ಆ ಸ್ಥಳದಿಂದ ಹೊರಟು ಹೊದಳು,

ಸುಬ್ರಮಣ್ಯ ಅಳುವುದನ್ನು ಕೇಳಿ ಮೀರ ತನ್ನ ದುಃಖ ಮರೆತು

"ಮಗು ಅಳ್ತಾ ಇದೆ. ಸರಸಿ ಎಲ್ಲಿ ಹೋದಳೋ?" ಎನ್ನುತ್ತಾ ಕಂಬನಿ ಒರೆಸಿಕೊಂಡು ಮಗುವಿನ ಬಳಿಗೆ ಬಂದಳು.

ಮಗು ಹಾಸಿಗೆಯ ಮೇಲೆ ಕೈಕಾಲು ಬಡಿಯುತ್ತಾ ಹಸಿವಿನಿಂದ ಚೀರಾಡುತ್ತಿತ್ತು.

ಮೀರ ಮಗುವನ್ನು ಎತ್ತಿಕೊಂಡು "ಸರಸಿ,....ಸರಸೀ" ಎಂದು ಕೂಗಿದಳು. ಮನೆಯ ಹಿಂಭಾಗದಲ್ಲಿ ಸಾವಿತ್ರಮ್ಮನೊಡನೆ ಮೀರಳ ಮೇಲೆ ಚಾಡಿ ಹೇಳುತ್ತಾ ನಿಂತಿದ್ದ ಸರಸಿ, ಮೀರಳ ಕೂಗನ್ನು ಕೇಳಿ ಒಳಗೆ ಬಂದಳು. ಮೀರ ತನ್ನ ಮಗನನ್ನು ಎತ್ತಿಕೊಂಡಿರುವುದನ್ನು ನೋಡಿ ಸರಸಿ ಎತ್ತಿಕೊಳ್ಳಲು ಮುಂದೆ ಬಂದಳು.

"ಮಗು ಅಷ್ಟೊಂದು ಅಳ್ತಾ ಇದ್ದರೂ ಎಲ್ಲೀಗೆ ಹೋಗಿದ್ದೆ?"

ಸರಸಿ ಅವಳ ಮಾತಿಗೆ ಉತ್ತರ ಕೊಡದೆ ಮೀರಳನ್ನು ತಿರಸ್ಕಾರದಿಂದ ನೋಡಿ, ಮಗುವನ್ನು ಎತ್ತಿಕೊಂಡು ಹೊರಟುಹೋದಳು.

"ನನ್ನ ಮಗು ಕಂಡರೆ ನಿನಗಿರೋ ಪ್ರೀತಿ ಅಷ್ಟರಲ್ಲೇ ಇದೆ" ಎಂದು ಕೂಗಿ ಹೇಳಿದ ಆ ನೋಟ ಮೀರಳ ಹೃದಯಕ್ಕೆ ಬರೆ ಹಾಕಿತು.

* * * *

ಚೆಲುವಾಂಬಾ ಆಸ್ಪತ್ರೆಯಲ್ಲಿ ಹೌಸ್ ಸರ್ಜನ್ ಕೆಲಸ ಸಿಕ್ಕಿದೊಡನೆ ಮೀರ ಮೈಸೂರಿಗೆ ಹೊರಟಳು.

ಡಾಕ್ಟರ್ ಪರೀಕ್ಷೆಯಾದ ಮೇಲೂ ಮೀರ ಮೈಸೂರಿಗೆ ಹೊರಟದ್ದು ಶಾಮುವಿಗೆ ಸ್ವಲ್ಪವೂ ಹಿಡಿಸಲಿಲ್ಲ. ಅವನು ತನ್ನ ಅಭಿಪ್ರಾಯವನ್ನು ಬಾಯಲ್ಲಿ ಆಡಿದ.

"ಪರೀಕ್ಷೆ ಮುಗಿದ ಮೇಲೆ ಇಲ್ಲೇ ಇತ್ತೀನಿ ಎಂದು ಹೇಳಿದ್ದೆಯಲ್ಲಾ, ಈಗ ಯಾಕೆ ಮತ್ತೆ ಮೈಸೂರಿಗೆ ಹೋಗಬೇಕು?"

"ಆರು ತಿಂಗಳು ಶಿಕ್ಷಣ ಪಡೆದು ಮತ್ತೆ ಇಲ್ಲಿಗೇ ಬರುತ್ತೇನೆ" ಎಂದು

ಶಾಮುವಿಗೆ ಮೀರ ಸಮಾಧಾನ ಹೇಳಿ ಹೊರಟುಹೋದಳು.

ಮೀರ ಹೊರಟ ಮೇಲೆ ಸರಸಿ ಸರಾಗವಾಗಿ ಉಸಿರಾಡಿದಳು.

ಮೀರ ಮೈಸೂರಿಗೆ ಬರುವ ವೇಳೆಗೆ ಅವಳ ಗೆಳೆಯ, ಗೆಳತಿಯ ಮನೆಗಳಲ್ಲಿ ಕ್ರಾಂತಿ ಎದ್ದಿತ್ತು.

ಗೋಪಿಯ ತಂದೆ ಮಗನ ಮದುವೆ ಮಾಡಲು ಸರ್ವವಿಧದಲ್ಲೂ ಪ್ರಯತ್ನಿಸಿ ವಿಫಲರಾಗಿದ್ದರು. ಗೋಪಿಯ ಸೋದರತ್ತೆಯ ಮಗಳು ಶಾಂತಳನ್ನು ಅವಳು ಹುಟ್ಟಿದ ಗಳಿಗೆಯಿಂದಲೇ ಗೋಪಿಗೆ ಮೀಸಲಾಗಿರಿಸಿದ್ದರು. ಗೋಪಿಯ ಪರೀಕ್ಷೆ ಮುಗಿದ ಗಳಿಗೆಯಿಂದಲೇ ಅವನ ತಂದೆ, ಸೋದರಮಾವ ಅವನಿಗೆ ಶಾಂತಳನ್ನು ಮದುವೆ ಮಾಡಿಕೊಳ್ಳಬೇಕೆಂದು ಹಿಂಸೆ ಮಾಡುತ್ತಿದ್ದರು.

"ನನಗೆ ಕೆಲಸ ಸಿಗಲಿ" ಎಂದು ಗೋಪಿ ತನ್ನ ಮದುವೆಯನ್ನು ಆರು ತಿಂಗಳು ಮಟ್ಟಿಗೆ ಮುಂದೂಡಿದ. ಮೆಡಿಕಲ್ ಕಾಲೇಜಿನಲ್ಲಿ ಲೆಕ್ಚರರ್ ಕೆಲಸ ಸಿಕ್ಕುತ್ತಲೇ ಮತ್ತೆ ಮನೆಯಲ್ಲಿ ತಗಾದೆ ಆರಂಭವಾಯಿತು. ಮತ್ತೇನಾದರೂ ನೆಪ ಹೇಳಿ ಮದುವೆಯನ್ನು ತಡೆಯುವುದು ಗೋಪಿಗೆ ಸಾಧ್ಯವಾಗಲಿಲ್ಲ. ತಾಯಿ ಉಪವಾಸ ಮಾಡಿದರು, ತಂದೆ ಮಗನನ್ನು ಹೀನಾಮಾನ ಬಯ್ದರು. ಈ ರಂಪಾಟ ನೋಡಲಾರದೇ ಗೋಪಿ ತನ್ನ ಮನಸ್ಸಿನ ಆಸೆಯನ್ನು ತಂದೆಗೆ ಹೇಳಿದ.

"ಆಗಲಿ ಅಣ್ಣ. ನಾನು ನೀನು ಹೇಳಿದ ಹಾಗೆ ಮದುವೆ ಮಾಡ್ಕೋತೀನಿ. ಆದರೆ ಶಾಂತಾನ ಮಾತ್ರ ಆಗಲಾರೆ."

ಹುಚ್ಚರಾಗಿ ಕೂಗಿದರು "ಶಾಂತಾ ಏನಾಗಿದಾಳೆ? ಚೆನ್ನಾಗಿಲ್ಲವೇ? ವಿದ್ಯಾವತಿಯಲ್ಲವೇ?"

"ಅವಳಲ್ಲಿ ನನಗೆ ಪ್ರೀತಿಯಿಲ್ಲ."

"ಮದುವೆ ಮಾಡಿಕೊಂಡರೆ ಪ್ರೀತಿ ತಾನಾಗಿಯೇ ಬರುತ್ತದೆ."

"ಅವಳನ್ನ ನಾನು ಖಂಡಿತ ಮಾಡಿಕೊಳ್ಳುವುದಿಲ್ಲ."

"ಹಾಗಾದರೆ ಯಾರನ್ನ ಮಾಡಿಕೊಳ್ಳುತ್ತೀಯಾ?"

"ನಮ್ಮ ಕಾಲೇಜಿನಲ್ಲಿ ವಿಜಯಾಂತ ಒಬ್ಬಳು ಹುಡುಗಿ ಇದ್ದಳು. ಈಗ ಅವಳು ಹೌಸ್ ಸರ್ಜನ್ ಆಗಿದಾಳೆ. ಅವಳನ್ನ ಮದುವೆ ಮಾಡಿಕೋತೀನಿ."

"ಬ್ರಾಹ್ಮಣರ ಹುಡುಗಿಯೇ?"

"ಮರಾಟಿ ಬ್ರಾಹ್ಮಣರು. ಅವಳ ತಂದೆ ಪರಾಂಜಪೆ...."

ಗೋಪಿಯ ಮಾತು ಕೇಳಿ ತಾಯಿ ಜೋರಾಗಿ ಅಳಲು ಮೊದಲು ಮಾಡಿದರು.

" ಗೋಪಿ, ನಿನ್ನ ಹೊತ್ತು ಹೆತ್ತಿದ್ದಕ್ಕೆ ಸಾರ್ಥಕವಾಯಿತು. ಮರಾಟಿ ಹುಡುಗಿ ಸೊಸೆಯಾದರೆ ನನ್ನ ಪುಣ್ಯಕ್ಕೆ ಎಲ್ಲಿ ಹೋಗಿ ಸಾಯಲಿ ? ಹಬ್ಬ, ಹರಿದಿನ, ತಿಥಿ ದಿನಗಳಲ್ಲಿ ಆ ಹುಡುಗೀನ ಅಡಿಗೆ ಮನೆಗೆ ಬಿಡಬಹುದೇನೋ? ಅವಳ ಕೈನ ನೀರು ಹೇಗೆ ಕುಡಿಯಲೋ ?"

" ನಾನು ಮದುವೆ ಮಾಡಿಕೊಳ್ಳುವುದಾದರೆ ಅವಳನ್ನೇ ಮಾಡಿಕೊಳ್ಳುತ್ತೇನೆ." ಗೋಪಿ ಖಂಡಿತವಾಗಿ ಹೇಳಿಬಿಟ್ಟ.

" ನಾನು ನಿನ್ನ ತಂದೆಯಲ್ಲ ನೀನು ನನ್ನ ಮಗನಲ್ಲ."

ಗೋಪಿ ಮೌನವಾಗಿ ನಿಂತಿದ್ದ. ತಂದೆ ಗುಡುಗಿದರು.

" ಕೊನೇ ಮಾತು ಹೇಳಿಬಿಡು. ನಾನು ಹೇಳಿದ ಹಾಗೆ ಕೇಳದಿದ್ದರೆ ನಿನ್ನ ಮುಖ ಸಹಿತ ನಾನು ನೋಡೋದಿಲ್ಲ."

" ನಾನು ಹೇಳಬೇಕಾದುದನ್ನೆಲ್ಲಾ ಆಗಲೇ ಹೇಳಿಯಾಗಿದೆ " ಎಂದ ಗೋಪಿ ದೃಢವಾಗಿ.

" ಹಾಗಾದರೆ ನನ್ನ ಮನೆ ಬಿಟ್ಟು ಹೊರಡು. ಇನ್ನು ಈ ಕಡೆ ಸುಳಿಯಬೇಡ."

" ಅಪ್ಪಣೆ " ಎಂದ ಗೋಪಿ.

ಅಂದಿನಿಂದ ಅವನ ವಾಸಸ್ಥಾನ ಬದಲಾಯಿಸಿತು. ಗೆಳೆಯನೊಬ್ಬನ ರೂಮಿಗೆ ತನ್ನ ಸಾಮಾನುಗಳನ್ನು ಸಾಗಿಸಿ, ಗೋಪಿ ಹೋಟಲಿನಲ್ಲಿ ಊಟ ಮಾಡುತ್ತಿದ್ದ.

ಒಂದು ದಿನ ಗೆಳೆಯ ಯಾವುದೋ ಚಿತ್ರಕ್ಕೆ ಹೋಗಿದ್ದ. ಭಾನುವಾರವಾಗಿದ್ದುದರಿಂದ ಗೋಪಿಗೆ ಕಾಲೇಜಿರಲಿಲ್ಲ. ಮಧ್ಯಾಹ್ನ ನಾಲ್ಕು ಗಂಟೆಯಲ್ಲಿ ಯಾರೋ ಬಾಗಿಲು ಬಡಿದಂತಾಯಿತು. ಮಲಗಿದ್ದ ಗೋಪಿ ಎದ್ದು ಬಾಗಿಲು ತೆಗೆದ.

ಹೊಸಲಿನ ಆಚೆ ಚಿಕ್ಕ ಚರ್ಮದ ಸೂಟು ಕೇಸು ಹಿಡಿದು ವಿಜಯ ನಗುತ್ತಾ ನಿಂತಿದ್ದಳು. ಅವಳನ್ನು ನೋಡಿದ ಕೂಡಲೇ ಗೋಪಿಗೆ ಎಲ್ಲವೂ ಅರ್ಥವಾಯಿತು. ಅವನು ಗಲಿಬಿಲಿಯಿಂದ ನೆಟ್‌ಬನೀನಿನ ಮೇಲೆ ಶರಟು ಹಾಕಿಕೊಂಡು, ಹಾಸಿಗೆ ಸುತ್ತಿಟ್ಟು, ಕ್ರಾಪು ಬಾಚಿ "ದಯಮಾಡಿಸಿ" ಎಂದ. ವಿಜಯ ನಗುತ್ತಲೇ ಒಳಗೆ ಬಂದಳು.

" ನನ್ನ ರೂಮಿಗೆ ಬರೋಕೆ ನಿಂಗೆ ಎಷ್ಟು ಧೈರ್ಯ ? ಯಾರೂ ಇಲ್ಲದೇ ಇರೋವಾಗ...."

"ಬಂದರೆ ಏನು ಮಾಡ್ತೀರಿ ?" ವಿಜಯ ಮತ್ತೆ ನಕ್ಕಳು.

ಗೋಪಿ ತೆಗೆದಿದ್ದ ಬಾಗಿಲಿನ ಕಡೆ ಒಂದು ಬಾರಿ ನೋಡಿ ಮತ್ತೆ ವಿಜಯಳ ಕಡೆ ತಿರುಗಿದ.

"ಬಾಗಿಲು ತೆಗೆದಿದೆ. ಇಲ್ಲದೇ ಇದ್ದರೆ...." ಎಂದ ಗೋಪಿ.

ವಿಜಯ ತಾನಾಗಿಯೇ ಬಾಗಿಲು ಮುಚ್ಚಿ "ಈಗ" ಎಂದಳು.

"ಇನ್ನು ನೀನು ಸಿಂಹದ ಕೈಗೆ ಸಿಕ್ಕ ಹರಿಣಿ" ಎನ್ನುತ್ತಾ ಗೋಪಿ ಮುಂದೆ ಬಂದ.

"ಊಹೂಂ" ಎಂದಳು ವಿಜಯ. ಗೋಪಿ ಅಲ್ಲೇ ನಿಂತ.

"ವಿಜಯ, ಏನಾಯಿತು ಹೇಳಬಾರದೇ ?"

"ನಿಮಗಾದ ಗತಿಯೇ ನನಗೂ ಆಯಿತು."

"ಅಂದರೆ ?"

"ನಿಮ್ಮ ತಂದೆ ಇವತ್ತು ಬೆಳಿಗ್ಗೆ ನಮ್ಮ ಮನೆಗೆ ಬಂದು ನಮ್ಮ ತಂದೆಗೆ ಇದ್ದ ವಿಷಯ ಹೇಳಿದರು. ನಮ್ಮ ತಂದೆ ನನ್ನ ಕರೆಸಿ "ನಿಜವೇ" ಎಂದರು. ನಾನು ಒಪ್ಪಿಕೊಂಡೆ. ನಮ್ಮ ತಂದೆಯೂ ಸಂಪ್ರದಾಯಸ್ಥರು. ಮಾತಿಗೆ ಮಾತು ಬೆಳೆಯಿತು. ಅದರ ಪರಿಣಾಮ—ನಾನು ಇಲ್ಲಿ ನನ್ನ ಗೋಪಿಯ ಬಳಿ."

"ನಮ್ಮ ತಂದೆ ನಿಮ್ಮ ಮನೆಗೆ ಯಾಕೆ ಬಂದಿದ್ದರು ?"

"ನನ್ನ ಹತೋಟಿಯಲ್ಲಿಟ್ಟುಕೊಳ್ಳಲಿ ಎಂದು ನಮ್ಮ ತಂದೆಗೆ ಹೇಳಲು ಬಂದಿದ್ದರು. ಆದರೆ ನಾವಿಬ್ಬರೂ ಈಗ ಯಾರ ಹತೋಟಿಯಲ್ಲೂ ಇಲ್ಲ ಎನ್ನುವುದು ಅವರಿಗೆ ತಿಳಿದಿರಲಾರದು."

"ಮತ್ತೆ ನೀನು ನಗುತ್ತಾ ಒಳಗೆ ಬಂದೆ....?"

"ಮನೇಲಿ ಅತ್ತರೆ ನಾನೊಬ್ಬಳೇ ಅಳಬೇಕು. ಇಲ್ಲಿ ಬಂದು ನಿಮ್ಮ ಹತ್ತಿರ, ನಿಮ್ಮ ಎದೆಯ ಮೇಲೆ ತಲೆ ಇಟ್ಟು ಅಳೋಣಾಂತ ಅಳುವೆಲ್ಲಾ ಕೂಡಿಹಾಕಿಕೊಂಡು ಬಂದಿದ್ದೇನೆ."

ಹಾಗೆ ಹೇಳುವಾಗ ವಿಜಯಳ ದನಿ ನಡುಗಿತು.

"ವಿಜಯ್, ಡಾರ್ಲಿಂಗ್" ಎನ್ನುತ್ತಾ ಗೋಪಿ ವಿಜಯಳನ್ನು ಅಪ್ಪಿಕೊಂಡ. ಅವಳು ಅವನ ಎದೆಯ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ಗೋಪಿ ಅವಳನ್ನು ಸಮಾಧಾನ ಮಾಡಿದ. ತನ್ನ ತುಟಿಯಿಂದ ಗೋಪಿ ಅವಳ ಕೆನ್ನೆಯ ಮೇಲೆ ಹರಿಯುತ್ತಿದ್ದ ಕಂಬನಿಯನ್ನು ಒರೆಸಿದ. ದುಃಖದ ಆವೇಗದಿಂದ ನಡುಗುತ್ತಿದ್ದ ಅವಳ ತುಟಿಗಳನ್ನು ಮುದ್ದಿಸಿ

" ಇದಕ್ಕೆ ಯಾಕೆ ಅಳಬೇಕು ವಿಜಯ್ ? ಈ ಪ್ರಸಂಗದಿಂದ ನಾವಿಬ್ಬರೂ ಒಟ್ಟಿಗೆ ಇರುವಂತಾಯಿತು " ಎಂದ.

" ಹಾಗೆಂದರೆ ?"

" ನೀನು ಮೊದಲು ಅಳೋದಿಲ್ಲಾಂತ ಪ್ರಾಮಿಸ್ ಮಾಡು."

" ಆಗಲಿ."

" ಹೀಗೆ ಹೇಳಿದರೆ ಆಗುವುದಿಲ್ಲ. ನನಗೆ ಮುತ್ತಿನ ಭಾಷೆ ಬೇಕು."

" ಥೂ ನೀವೊಬ್ಬರು ಕೆಟ್ಟ ಹುಡುಗ " ಎಂದಳು ವಿಜಯ.

" ನೀನೇನಾದರೂ ಬೈದುಕೋ. ನಾನು ಕೇಳುವವನಲ್ಲ."

" ನಂಗೆ ತೆಗೆದುಕೊಳ್ಳುವುದು ಗೊತ್ತೇ ಹೊರತು ಕೊಡುವುದು ಗೊತ್ತಿಲ್ಲ."

" ಜಿಪುಣೆ ನೀನು. ದಾನಿ ನಾನು."

" ಪಾಪ ! ಇಂತಹ ದಾನ ಮಾಡೋಕೆ ನೀವೇ ಆಗಬೇಕು ಅಲ್ಲವೇ?" ವಿಜಯ ಗೋಪಿಯನ್ನು ಅಣಕಿಸಿದಳು.

" ನಿನ್ನಂತಹ ಭಿಕ್ಷುಕಿ ಸಿಕ್ಕಿರೋದು ನನ್ನ ಪುಣ್ಯ " ಎಂದ ಗೋಪಿ.

" ಪುಣ್ಯದ ಮಾತು ಹಾಗಿರಲಿ. ಈಗ ಏನು ಮಾಡೋಣ" ವಿಜಯ ಕಳವಳದಿಂದ ಕೇಳಿದಳು.

" ನಮ್ಮಿಬ್ಬರಿಗೂ ಈಗ ಯಾರ ಆತಂಕವೂ ಇಲ್ಲ. ಇಬ್ಬರೂ ಮೆಜಾರಿಟಿಗೆ ಬಂದಿದ್ದೇವೆ. ರಿಜಿಸ್ಟರ್ಡ್...."

" ಊಹೂಂ. ನನಗದರಲ್ಲಿ ನಂಬಿಕೆಯಿಲ್ಲ " ಎಂದು ವಿಜಯ ರಾಗ ಎಳೆದಳು.

" ನನ್ನಲ್ಲಿ ನಂಬಿಕೆ ಇಲ್ಲವೇ ?"

" ಹಾಗಲ್ಲ. ನಮ್ಮಿಬ್ಬರ ಪ್ರೇಮಬಂಧನಕ್ಕೆ ಕೋರ್ಟಿನ ಮುದ್ರೆ ಬೀಳುವುದು ನನಗಿಷ್ಟವಿಲ್ಲ. ಮನೆ, ಭೂಮಿ, ಆಸ್ತೀನ ರಿಜಿಸ್ಟರ್ ಮಾಡಿಸಿದ ಹಾಗೆ ನಮ್ಮ ಮದುವೇನ...."

" ನೀನು ಹೇಳಿದ ಹಾಗೆ ಆಗಲಿ ವಿಜಯ್ " ಎಂದ ಗೋಪಿ.

" ಅದುವರೆಗೆ ನಾನೆಲ್ಲಿರಲಿ ?"

" ಮೀರಳ ಜೊತೆ ಹಾಸ್ಟೆಲಿನಲ್ಲಿರು."

" ನೀವು ?"

" ನಾನು ಇಲ್ಲೇ ಇರ್ತೀನಿ."

" ತುಂಬ ದಿವಸ ನಿಮ್ಮನ್ನ ಬಿಟ್ಟು ದೂರ ಇರೋಕಾಗೋದಿಲ್ಲ. ನಂಗೆ ಯಾಕೋ ತುಂಬಾ ಬೇಜಾರಾಗತ್ತೆ" ವಿಜಯ ಮತ್ತೆ ಅಳುಮುಖ ಮಾಡಿದಳು.

"ಅಮ್ಮನ್ನ ಬಿಟ್ಟಿರಲಾರೆಯಾ ಚಿನ್ನ?" ಗೋಪಿ ಕೇಳಿದ.

ವಿಜಯ ತಲೆ ಅಲುಗಿಸಿದಳು. ಅವಳ ಕಣ್ಣಿನಿಂದ ಒಂದು ಹನಿ ಪಳಕ್ಕನೆ ಜಾರಿ ಬೀಳುವುದರಲ್ಲಿತ್ತು.

"ಹೂ. ನಾನು ಒಂದು ದಿನವೂ ಅಮ್ಮನ್ನ ಬಿಟ್ಟವಳಲ್ಲ ಈಗ ಅವಳನ್ನ ಬಿಟ್ಟಿರೋದು ಅಂದ್ರೆ ತುಂಬಾ ಕಷ್ಟ."

"ವಿಜಯ್ ನೀನಿನ್ನೂ ಮಗು. ಆದುದರಿಂದ ಇನ್ನೆರಡು ವರ್ಷ ಅಮ್ಮನ ಬಳಿಯೇ ಇದ್ದು ಆಮೇಲೆ ನನ್ನಲ್ಲಿಗೆ ಬಾ."

"ನಿಮ್ಮನ್ನ ಬಿಟ್ಟಿರೋದಂತೂ ಸಾಧ್ಯವೇ ಇಲ್ಲ. ಅಮ್ಮನ್ನಾದರೂ ಬಿಟ್ಟುಬಿಡುತ್ತೇನೆ."

"ನಾನೇ ನಿನ್ನ ಬಿಟ್ಟರೆ ಏನು ಮಾಡ್ತೀಯಾ?" ಗೋಪಿ ಹಾಸ್ಯವಾಗಿ ಕೇಳಿದ.

"ನನ್ನಂತಹ ಭಗ್ನ ಪ್ರೇಮಿಗಳಿಗೆ ಕೆರೆಯಲ್ಲಿ ನೀರು ತುಂಬಿದೆ."

"ವಿಜಯ್, ನೀನು ಹುಚ್ಚಿಯಾಗ್ತಿದೀಯಾ!"

"ಹೌದು. ನನಗೆ ಗೋಪಿಯ ಹುಚ್ಚು."

ಗೋಪಿ ದೀರ್ಘವಾಗಿ ಉಸಿರೆಳೆದು ಹೇಳಿದ

"ನಾವಿಬ್ಬರೂ ಪರಸ್ಪರ ಮೆಚ್ಚಿ ಸುಖವಾಗಿರ್ತೀವಿ ಎಂದು ನಂಬಿರುವಾಗ ಹಿರಿಯರು ಯಾಕೆ ಹೀಗೆ ಮಾಡ್ತಾರೋ?"

"ಈ ಸಂಕುಚಿತ ಭಾವನೆ ಹೋಗಬೇಕಾದರೆ ಇನ್ನೂ ಎಷ್ಟು ಕಾಲ ಬೇಕೋ?"

ಗೋಪಿ ರೂಮಿಗೆ ಬೀಗ ಹಾಕಿ ವಿಜಯಳೊಡನೆ ಮೀರಳ ಬಳಿಗೆ ಹೋದ. ಮೀರ ಅದೇ ತಾನೇ ಆಸ್ಪತ್ರೆಯಿಂದ ಮರಳಿ ರೂಮಿಗೆ ಬಂದಿದ್ದಳು. ಜೊತೆಯಲ್ಲಿ ಬಂದ ಗೋಪಿ, ವಿಜಯಳನ್ನು ನೋಡಿ ನಸುನಕ್ಕಳು.

ಗೋಪಿ ವಿಜಯಳನ್ನು ಮೀರಳಿಗೆ ತೋರಿಸಿ

"ಈ ಮಗೂನ ನಿಮಗೆ ಒಪ್ಪಿಸಿದ್ದೇನೆ. ಅವಳನ್ನು ನಾನು ಕೈಹಿಡಿಯುವವರೆಗೆ ಅವಳು ನಿಮ್ಮಲ್ಲಿರಲಿ" ಎಂದ.

ವಿಜಯ ಮನೆಯಲ್ಲಿ ನಡೆದ ಸಂಗತಿಗಳನ್ನು ಮೀರಳಿಗೆ ವಿವರಿಸಿದಳು. ಮೀರ ಬಹಳ ಹೊತ್ತು ಸುಮ್ಮನೆ ಕುಳಿತಿದ್ದು ಅನಂತರ ಕೇಳಿದಳು

"ಮುಂದೆ ಏನು ಮಾಡ್ಬೇಕೊಂತಿದೀರಿ?"

ವಿಜಯ ಗೋಪಿಯ ಕಡೆ ನೋಡಿದಳು. ಗೋಪಿ ಹೇಳಿದ

"ವಿಜಯಾಗೆ ರಿಜಿಸ್ಟರ್ಡ್ ಮದುವೆ ಬೇಡವಂತೆ. ಹಿಂದೂ ಸಂಪ್ರದಾ

ಯದಂತೆಯೇ ಮದುವೆಯಾಗಬೇಕಂತೆ."

"ಸರಿ."

"ಅದಕ್ಕೆ ಯಾರಾದರೂ ಮುಂದೆ ಬರದೇ ನಾವು ಹೇಗೆ...."

"ನೀವು ಯೋಚನೆ ಮಾಡಬೇಡಿ. ಇನ್ನು ನಾಲ್ಕು ದಿನಗಳಲ್ಲಿ ನಿಮ್ಮ ಸಮಸ್ಯೆ ಪರಿಹಾರವಾಗುತ್ತದೆ" ಎಂದಳು ಮೀರ.

ವಿಜಯಳನ್ನು ಮೀರಳ ಬಳಿ ಬಿಟ್ಟು ಗೋಪಿ ಹೊರಟುಹೋದ ಅವನು ಹೋದ ಕೂಡಲೇ ವಿಜಯ ಹಾಸಿಗೆಯ ಮೇಲೆ ಉರುಳಿ ಅತ್ತಳು.

"ಯಾಕೆ ಅಳ್ತೀಯಾ ?" ಮೀರ ಅವಳ ಭುಜ ಅಲುಗಿಸಿದಳು.

"ನಂಗೆ ತುಂಬಾ ಕಷ್ಟ ಆಗತ್ತೆ ಮೀರಾ"

"ಯಾಕಮ್ಮ ?"

"ಗೋಪಿ ನನ್ನ ಎಷ್ಟು ಪ್ರೀತಿಸುತ್ತಾರೆ! ನನಗಾಗಿ ತಾಯಿ ತಂದೇನೂ ದೂರ ಮಾಡಿಕೊಂಡಿದಾರೆ."

"ನೀನೂ ಈಗ ದೂರ ಮಾಡಿಕೊಂಡಿಲ್ಲವೆ ?"

"ಆದ್ರೂ ಅವರು ನನ್ನ ಪ್ರೀತಿಸುವಷ್ಟು ನಾನು ಅವರನ್ನು ಪ್ರೀತಿಸೋದಿಲ್ಲ. ನನಗಂತೂ ಏನೂ ತೋಚದೆ ಹುಚ್ಚು ಹಿಡಿದ ಹಾಗಾಗಿದೆ."

"ನಾನೆಲ್ಲಾ ಸರಿ ಮಾಡ್ತೇನೆ. ಅಳಬೇಡ ವಿಜಯಾ."

ಮೀರಳ ಸಮಾಧಾನದ ಮಾತುಗಳನ್ನು ಕೇಳಿ ವಿಜಯ ಕಣ್ಣೊರೆಸಿಕೊಂಡಳು.

ಮಾರನೆಯ ದಿನ ಮೀರ ಒಂದು ದಿನದ ಮಟ್ಟಿಗೆ ರಜ ತೆಗೆದುಕೊಂಡು ಹಳ್ಳಿಗೆ ಹೊರಟಳು. ಮೀರ ಏಕಾಏಕಿ ಬಂದುದನ್ನು ಕಂಡು ಶಾಮು, ಸರಸಿ ಚಕಿತರಾದರು.

"ರಾಣಿಯವರು ಒಂದು ಮಾತೂ ಹೇಳದೆ ಬಂದು ಬಿಟ್ಟಿರಲ್ಲಾ" ಎಂದು ಶಾಮು ಉದ್ಗಾರ ತೆಗೆದ.

"ನಿಮ್ಮ ಕೈಲಿ ನಾನು ಮಾತನಾಡಬೇಕಿತ್ತು" ಎಂದು ಮೀರ ಮೊದಲು ಮಾಡಿ ಗೋಪಿ, ವಿಜಯರ ಸ್ನೇಹ, ಅವರ ಮನೆಯವರ ವಿರೋಧ ಎಲ್ಲವನ್ನೂ ವಿವರಿಸಿದಳು. ಶಾಮು, ಸರಸಿ ಎಲ್ಲವನ್ನೂ ಮೌನವಾಗಿ ಕೇಳಿದರು. ಮೀರ ಮಾತು ನಿಲ್ಲಿಸುತ್ತಲೇ ಸರಸಿ ಹೇಳಿದಳು.

"ಬ್ರಾಹ್ಮಣರ ಹುಡುಗ ಮರಾಟೆಯವಳನ್ನು ಮದುವೆಯಾಗೋಣಾಂದ್ರೆ ಶುದ್ಧ ಅನ್ಯಾಯ. ಇದಕ್ಕೆ ನಾವು ಎಂದಿಗೂ ಪ್ರೋತ್ಸಾಹಿಸಬಾರದು."

ಮೀರ ಅವಳ ಮಾತಿಗೆ ಬೆಲೆ ಕೊಡದೆ ಶಾಮುವಿನ ಕಡೆ ತಿರುಗಿ

"ನೀವೇನು ಹೇಳ್ತೀರಿ ?" ಎಂದಳು.

"ಅವರಿಬ್ಬರಿಗೂ ನಿಜವಾದ ಪ್ರೀತಿಯಿದ್ದರೆ ಮದುವೆಯಾಗುವುದರಲ್ಲಿ ತಪ್ಪೇನಿಲ್ಲ."

ಮೀರಳ ಮುಖ ಹಿಗ್ಗಿನಿಂದ ಅಗಲವಾಯಿತು. ಅವಳು ಅತ್ಯಂತ ಹರ್ಷದಿಂದ ಕೇಳಿದಳು.

"ಹಾಗಾದರೆ ನಾನು ಸಹಾಯ ಮಾಡಲು ನಿಮ್ಮಡ್ಡಿಯಿಲ್ಲವೇ ?"

"ಅಂದರೆ ?"

"ನಾವು ಅವರನ್ನು ಇಲ್ಲಿಗೆ ಕರೆಸಿ ಹಿಂದೂ ಪದ್ಧತಿಯ ಪ್ರಕಾರ ಅವರಿಗೆ ಮದುವೆ ಮಾಡಿಬಿಡೋಣ."

"ಅವರ ತಾಯಿ, ತಂದೆ ಗಲಾಟೆ ಮಾಡಿದರೆ ?"

"ಇವರಿಬ್ಬರೂ ಮೆಜಾರಿಟಿಗೆ ಬಂದಿದ್ದಾರೆ. ಹಿರಿಯರು ಏನೂ ಮಾಡುವ ಹಾಗಿಲ್ಲ."

"ನಾನಂತೂ ಈ ಮದುವೇನ ಖಂಡಿತ ಒಪ್ಪೋದಿಲ್ಲ" ಎಂದಳು ಸರಸಿ.

ಶಾಮುವಿನ ಕಿವಿಗೆ ಸರಸಿಯ ಮಾತುಗಳು ಬೀಳಲಿಲ್ಲ. ಅವನು ಯಾವುದೋ ಗಾಢವಾದ ಆಲೋಚನೆಯಲ್ಲಿ ಮುಳುಗಿದಂತೆ ತೋರಿತು.

ಮದುವೆ! ಬಹಳ ದೊಡ್ಡ ಜವಾಬ್ದಾರಿ. ಆದರೆ ಅದರಲ್ಲಿ ಎಂತಹ ಆತ್ಮತೃಪ್ತಿಯಿದೆ! ತನ್ನಿಂದ ಸ್ವಲ್ಪ ಹಣ ಖರ್ಚಾಗಬಹುದು. ಆದರೆ ಅದರಿಂದ ತನಗೇನೂ ನಷ್ಟವಿಲ್ಲ. ಯಾಕೆ ಹಾಗೆ ಮಾಡಬಾರದು ? ಇದರಿಂದ ಮೀರಳಿಗೂ ತುಂಬಾ ಸಮಾಧಾನವಾಗುತ್ತದೆ.

"ಹಾಗೇ ಆಗಲಿ" ಎಂದ ಶಾಮು.

ಸರಸಿ ಮಾತ್ರ ತಾವೇ ಖರ್ಚು ಹಾಕಿ ಈ ಅನ್ಯಾಯದ ಮದುವೆ ನಡೆಸುವುದನ್ನು ಸ್ವಲ್ಪವೂ ಒಪ್ಪಲಿಲ್ಲ. ಆದರೆ ಮೀರಳಿಗಾಗಿ ಶಾಮು ತನ್ನ ಮನಸ್ಸನ್ನು ಗಟ್ಟಿಮಾಡಿದ್ದ. ಗಂಡ ತನ್ನ ಮಾತನ್ನು ತಳ್ಳಿ ಮೀರಳ ಮಾತಿಗೆ ಮನ್ನಣೆ ಕೊಡುತ್ತಿರುವುದನ್ನು ಕಂಡು ಸರಸಿ

"ನೀವು ಹೀಗೆ ಖರ್ಚು ಮಾಡಿದರೆ ಮಗನಿಗೆ ಮೂರು ಕಾಸು ಉಳಿಸುವುದಿಲ್ಲ" ಎಂದಳು.

ಮೀರ, ಶಾಮು ಚಕಿತರಾಗಿ ಅವಳ ಕಡೆ ನೋಡಿದರು. ಮದುವೆಯಾಗಿ ಇಷ್ಟು ವರ್ಷಗಳಾಗಿದ್ದರೂ ಮೀರ ಶಾಮುವಿನೊಡನೆ ಒಂದು ದಿನವೂ ಆಸ್ತಿಯ ಬಗ್ಗೆ ಮಾತನಾಡಿರಲಿಲ್ಲ. ಆಸ್ತಿ ಅನ್ಯರ ಪಾಲಾಗಬಾ

ರದೆಂಪೇ ಇಂತಹ ಸರಸಿಯನ್ನು ಶಾಮುವಿಗೆ ಮದುವೆ ಮಾಡಿಸಿದ್ದಳೇ ಹೊರತು ಇಂತಹ ಸಣ್ಣ ಮಾತು ಎಂದೂ ಮೀರಳ ಬಾಯಲ್ಲಿ ಬಂದಿರಲಿಲ್ಲ.

ಶಾಮು ಗಡುಸಾಗಿ ಹೇಳಿದ "ಒಂದು ಸಾವಿರ ರೂಪಾಯಿ ಖರ್ಚಾದರೆ ನನ್ನ ಆಸ್ತಿಯೇನೂ ಕಡಿಮೆಯಾಗುವುದಿಲ್ಲ."

"ಹಿರಿಯರೊಪ್ಪದ ಮದುವೆ ನೀವು ಮಾಡಿ ಪಾಪಕ್ಕೆ ಗುರಿಯಾಗಬೇಡಿ."

"ಕನ್ಯಾದಾನ ಮಾಡುವುದು ಪಾಪವೇ?" ಎಂದು ಕೇಳಿದ.

"ಇಷ್ಟೆಲ್ಲಾ ಆಟ ಆಡಿರುವವಳು ಕನ್ಯೆಯೇ?" ಸರಸಿ ವ್ಯಂಗ್ಯವಾಗಿ ಕೇಳಿದಳು.

"ಸರಸೀ ಬಾಯಿಗೆ ಬಂದಹಾಗೆ ಮಾತನಾಡಬೇಡ" ಮೀರ ಕೋಪದಿಂದ ಹೇಳಿದಳು.

"ಇದ್ದ ಸಂಗತಿ ಹೇಳಿದರೆ ಕೋಪ ಯಾಕೆ? ಈ ಮದುವೆ ನನ್ನ ಮನೆಯಲ್ಲಿ ನಡೆಯಗೊಡಲಾರೆ."

"ಇದು ನನ್ನ ಮನೆ ಎಂಬುದು ನೆನಪಿರಲಿ. ಮೀರ, ನೀನು ಎಲ್ಲವನ್ನೂ ಸಿದ್ಧಪಡಿಸು. ನಾವೇ ಹುಡುಗಿಯನ್ನು ಗೋಪಿಗೆ ಧಾರೆ ಎರೆಯೋಣ" ಶಾಮು ರೊಚ್ಚಿನಿಂದ ಹೇಳಿದ.

ಸುಬ್ರಹ್ಮಣ್ಯ ಅಳುತ್ತಿದ್ದರೂ ಸರಸಿ ಯಾವುದನ್ನೂ ಲೆಕ್ಕಿಸದೆ ಎದ್ದು ಒಳಗೆ ಹೊರಟು ಹೋದಳು.

ಮೀರ ಶುಭ ಸಮಾಚಾರವನ್ನು ತೆಗೆದುಕೊಂಡು ಮೈಸೂರಿಗೆ ಹೊರಟಳು. ವಿಜಯಳನ್ನು ನೋಡುತ್ತಲೇ ತಾನು ತಂದಿದ್ದ ಸಮಾಚಾರವನ್ನು ತಿಳಿಸಿದಳು. ವಿಜಯ ಕಂಬನಿದುಂಬಿ ಹೇಳಿದಳು.

"ನೀನು ಯಾವ ಜನ್ಮದ ತಾಯಿಯೋ."

ಗೋಪಿ ಮಾತ್ರ ಮೀರಳ ಸಲಹೆಯನ್ನು ಒಪ್ಪಲಿಲ್ಲ. ಅವನು

"ನೀವು ನಮಗಾಗಿ ಖರ್ಚು ಮಾಡುವುದನ್ನು ನಾನೊಪ್ಪುವುದಿಲ್ಲ" ಎಂದ. ಮೀರ ಹೇಳಿದಳು

"ನಮ್ಮ ಸ್ನೇಹಕ್ಕೆ ನೀವು ಕಟ್ಟುವ ಬೆಲೆ ಇಷ್ಟೇನೆ."

ಅವಳ ಮಾತು ಕೇಳಿ ಗೋಪಿ ಸುಮ್ಮನಾದ.

ಜೋಯಿಸರು ಮುಹೂರ್ತವಿಟ್ಟರು. ಮದುವೆಗೆ ಹಿಂದಿನ ದಿನ ಮೀರ, ಗೋಪಿ, ವಿಜಯ ಮತ್ತು ನಾಲ್ಕಾರು ಗೆಳೆಯರು ಹಳ್ಳಿಗೆ ಹೊರಟರು. ಗಡಿಗೆಯ ಗಾತ್ರದ ಮುಖ ಮಾಡಿಕೊಂಡು ಸರಸಿ ಎಲ್ಲರನ್ನೂ

ಸ್ವಾಗತಿಸಿದಳು. ಶಾಮು ಮಾತ್ರ ತುಂಬಾ ಹರ್ಷದಿಂದ ಓಡಾಡುತ್ತಿದ್ದ. ಮೀರ ತನ್ನ ಗಂಡನ ಪರಿಚಯವನ್ನು ಮಾಡಿಕೊಟ್ಟಳು.

ವಿಜಯಾ ಮೆಚ್ಚುಗೆಯ ದನಿಯಿಂದ "ನಿನ್ನ ಗಂಡ ತುಂಬಾ ಲಕ್ಷಣವಾಗಿದ್ದಾರೆ" ಎಂದಳು.

"ಮದುವೆಗೆ ಮುಂಚೆಯೇ ನೀನು ಹೀಗೆ ಹೇಳಿದರೆ ನನ್ನ ಗತಿಯೇನು" ಎಂದ ಗೋಪಿ.

"ಈ ಹುಡುಗೀನ ಆದಷ್ಟು ಬೇಗ ಕರಿಮಣಿ ಸೂತ್ರದಿಂದ ಕಟ್ಟಿಹಾಕಿಬಿಡುವುದು ಕ್ಷೇಮ" ಎಂದಳು ಮೀರ.

ಸರಸಿ ಯಾರೊಡನೆಯೂ ಮುಖಕೊಟ್ಟು ಮಾತನಾಡಲಿಲ್ಲ. ಅವಳಿಗೆ ವಿಜಯಳನ್ನು ನೋಡಿದಾಗ ರೋಷ ಉಕ್ಕುತ್ತಿತ್ತು. ಗೋಪಿಯಂಥ ಹುಡುಗನನ್ನು ತನ್ನ ಬಲೆಯಲ್ಲಿ ಕೆಡವಿದ ಮೋಸಗಾತಿ ಎನಿಸಿತು ಸರಸಿಗೆ. ಬ್ರಾಹ್ಮಣರ ಹುಡುಗ ಮರಾಟಿ ಹುಡುಗಿಯನ್ನು ಮದುವೆಯಾಗುವುದೆಂದರೆ?

ಮಾರನೆಯ ದಿನ ಗೋಪಿ ವಿಜಯರ ಮದುವೆ ಸರಳವಾಗಿ, ನಿರಾಡಂಬರವಾಗಿ ನಡೆಯಿತು. ಮೀರ, ಶಾಮು ವಿಜಯಳನ್ನು ಅಗ್ನಿಸಾಕ್ಷಿಯಾಗಿ ಗೋಪಿಗೆ ಧಾರೆ ಎರೆದು ಕೊಟ್ಟರು. ಮದುವೆಯಲ್ಲಿ ನಡೆಯಬೇಕಾದ ಯಾವ ಶಾಸ್ತ್ರವನ್ನೂ ಶಾಮು ತಪ್ಪಿಸಲಿಲ್ಲ.

ಮದುವೆಯಾದ ಮೂರು ದಿನಗಳ ಮೇಲೆ ವಿಜಯ, ಗೋಪಿ ಮೀರ ಮೈಸೂರಿಗೆ ಹೊರಟರು. ನೂತನ ದಂಪತಿಗಳು ಹಳ್ಳಿಯಲ್ಲಿ ತಮ್ಮ ಮಧುಚಂದ್ರವನ್ನು ಸಂತೋಷವಾಗಿ ಕಳೆದರು. ಕೆರೆಯ ತೀರದಲ್ಲಿ ಬೆಳದಿಂಗಳೂಟ, ಕಬ್ಬಿನ ಗದ್ದೆಗಳಲ್ಲಿ ವಾಯುವಿಹಾರ, ತೋಪುಗಳಲ್ಲಿ ಕಣ್ಣಾಮುಚ್ಚಾಲೆ, ಎತ್ತಿನ ಗಾಡಿಗಳಲ್ಲಿ ಪಿಕ್‌ನಿಕ್, ಆಲೆಮನೆಯಲ್ಲಿ ಕಬ್ಬಿನ ಹಾಲು ಎಂದು ಎಳೆಯ ಮಕ್ಕಳಂತೆ ಸಮಯ ಕಳೆದರು.

ಮೀರ, ಶಾಮು ಅವರಿಗೆ ಎಲ್ಲ ವಿಧವಾದ ಸೌಕರ್ಯಗಳನ್ನೂ ಒದಗಿಸಿ ಕೊಟ್ಟಿದ್ದರು.

ಮೈಸೂರಿಗೆ ಹೊರಡುವುದಕ್ಕೆ ಮುಂಚೆ ಗೋಪಿ ಶಾಮುವಿಗೆ ಕೃತಜ್ಞತೆಯನ್ನರ್ಪಿಸಿ

"ನಿಮ್ಮ ಉಪಕಾರ ನಾನು ಮರೆಯುವುದಿಲ್ಲ" ಎಂದ.

"ನನ್ನ ಉಪಕಾರವೇನೂ ಇದರಲ್ಲಿ ಇಲ್ಲ. ಈ ಏರ್ಪಾಡೆಲ್ಲಾ ಮೀರಳದು" ಎಂದ ಶಾಮು.

"ನೀವು ಒಪ್ಪದಿದ್ದರೆ ಇವೆಲ್ಲಾ ಹೇಗೆ ಸಾಧ್ಯವಾಗುತ್ತಿತ್ತು ?"

"ಹಳ್ಳಿಯಲ್ಲಿ ನಿಮಗೆ ಎಲ್ಲಾ ಅನುಕೂಲವಾಗಿತ್ತೇ?" ಎಂದ ಶಾಮು. ಗೋಪಿ ವಿಜಯಳ ಕಡೆ ನೋಡಿದ. ಅವಳು ನಗುತ್ತಾ

"ನಮ್ಮಿಬ್ಬರನ್ನೂ ನೋಡಿದರೆ ನಿಮಗೇನು ತೋರುತ್ತದೆ?" ಎಂದಳು.

ವಿಜಯ ಹರ್ಷದ ಹೊನಲಾಗಿದ್ದಳು, ಗೋಪಿ ನಗುವಿನ ಚಿಲುಮೆಯಾಗಿದ್ದ. ಅದೇ ತಾನೆ ಯೌವನದಲ್ಲಿ ಪದಾರ್ಪಣ ಮಾಡಿದ್ದ ಎರಡು ಬಿಳಿಯ ಪಾರಿವಾಳಗಳಂತೆ ಅವರು ಶಾಮುವಿಗೆ ತೋರಿದರು. ಅವರ ನಿರ್ಮಲ, ನಿಷ್ಕಪಟ ಪ್ರೇಮದಲ್ಲಿ ಯಾವ ವಿಧವಾದ ಸಂಕೋಚವೂ ಇರಲಿಲ್ಲ. ಸುತ್ತಲೂ ಜನರಿರುವುದನ್ನು ಮರೆತು ಒಬ್ಬರನ್ನೊಬ್ಬರು ನೋಡುತ್ತಾ ಮೈಮರೆಯುತ್ತಿದ್ದರು. ಸರಸಿಯಂತೂ ಅದನ್ನು ನೋಡಿ ಕಿಡಿಕಿಡಿಯಾಗುತ್ತಿದ್ದಳು.

ಒಂದು ಸಲ ಎಲ್ಲರೂ ಊಟ ಮಾಡುತ್ತಿದ್ದಾಗ ಗೋಪಿ, ವಿಜಯ ಒಬ್ಬರನ್ನೊಬ್ಬರು ನಗೆಗಣ್ಣಿನಿಂದ ನೋಡುತ್ತಿದ್ದುದನ್ನು ಕಂಡು ಸರಸಿ

"ಬೂಟಾಟದ ಮೊಟ್ಟೆಗಳು" ಎಂದು ಮೀರಳೆದುರಿಗೆ ಅವರನ್ನು ಜರಿದಳು. ಬಾಯಿಗೆ ಬಂದಿದ್ದ ಮಾತುಗಳನ್ನು ಮೀರ ಹಾಗೆಯೇ ಕಷ್ಟಪಟ್ಟು ನುಂಗಿಕೊಂಡಳು.

"ಒಬ್ಬರನ್ನೊಬ್ಬರು ನೋಡಿ ನಗೋದು, ಕಣ್ಸನ್ನೆ ಮಾಡೋದು, ಪಿಸಿಪಿಸೀಂತ ಮಾತಾಡೋದು ಇವೆಲ್ಲಾ ಏನು ಚೆನ್ನವೋ?"

"ಅವರಿಬ್ಬರಿಗೂ ಮದುವೆಯಾಗಿ ಎರಡು ದಿನಗಳಾಗಿವೆ ಅನ್ನೋದನ್ನ ಮರೆಯಬೇಡ ಸರಸಿ."

"ಹೊಸದಾಗಿ ಮದುವೆಯಾದ ಮಾತ್ರಕ್ಕೆ ಹಾಗಾಡಬೇಕೆ? ನಿನ್ನೆ ಬೆಳದಿಂಗಳಿನ ಊಟಕ್ಕೆ ಕೆರೆ ಹತ್ತಿರ ಬುತ್ತಿ ತೆಗೆದುಕೊಂಡು ಹೋಗಿದ್ದರಲ್ಲಾ–ಆಗ ವಿಜಯ ಹುಲ್ಲಿನ ಮೇಲೆ ಕುಳಿತಿದ್ದಳಂತೆ. ಗೋಪಿ ಅವಳ ತೊಡೆ ಮೇಲೆ ತಲೆ ಇಟ್ಟುಕೊಂಡು ಮಲಗಿದ್ದನಂತೆ–ಕೆರೆ ಹತ್ತಿರ ಹೋಗಿದ್ದ ತಿಮ್ಮಮ್ಮ ಅವರನ್ನು ನೋಡಿ ನಾಚಿಕೊಂಡು ಹಾಗೇ ಬಂದುಬಿಟ್ಟಳಂತೆ."

"ಅವರಿಬ್ಬರೂ ಗಂಡ ಹೆಂಡತಿ ತಾನೆ? ಗೋಪಿ ಅವನ ಹೆಂಡತಿ ತೊಡೆಮೇಲೆ ತಲೆ ಇಟ್ಟುಕೊಂಡು ಮಲಗಿದರೆ ತಪ್ಪೇನು?"

"ಬಯಲಿನಲ್ಲಿ ಇವರ ಪ್ರೇಮ ಪ್ರದರ್ಶನವೇ?"

"ಸೊಗಸಾದ ಬೆಳದಿಂಗಳಿತ್ತು. ಕೆರೆಯ ಸುತ್ತಲೂ ಯಾರೂ ಜನರಿರಲಿಲ್ಲ. ಯಾರೂ ಅಲ್ಲಿಗೆ ಬರಲಾರರೆಂದು ಅವರು ಅಂದುಕೊಂಡಿರಬೇಕು. ಅವರಿಬ್ಬರೂ ಎಳೆಯ ಪ್ರೇಮಿಗಳು ಎನ್ನುವುದನ್ನು ಮರೆಯಬೇಡ ಸರಸಿ.

ಒಬ್ಬರನ್ನೊಬ್ಬರು ಮೆಚ್ಚಿ ಬಯಸಿ ಬಯಸಿ ಮದುವೆಯಾಗಿದಾರೆ. ಆದುದ ರಿಂದ ಅವರ ಪ್ರೇಮ ಕೊಂಚ ಕುರುಡಾಗಿದ್ದಿರಬಹುದು."

"ಆದರೆ ಅವರ ಸುತ್ತಲೂ ಇರುವವರಿಗೆ ಕಣ್ಣುಗಳಿವೆ."

"ಈಗ ಅವರು ಮಾಡಿದ ತಪ್ಪಿಗೆ ನನ್ನ ಏನು ಮಾಡೂಂತೀಯಾ? ಗೋಪಿ, ವಿಜಯಾನ ಕರೆದು ಬೈಯಲೇನು?" ಮೀರ ಜುಗುಪ್ಸೆಯಿಂದ ಕೇಳಿದಳು.

"ಎಲ್ಲಾದರೂ ಹಾಳಾಗಲಿ ನನಗೇನು?"

"ಶಾಂತಂ ಪಾಪಂ. ಎಲ್ಲಾದರೂ ಸುಖವಾಗಿರಲಿ ಎನ್ನಬಾರದೆ?"

"ಅವರಿಬ್ಬರೂ ಇಲ್ಲಿರುವವರೆಗೆ ನಾನು ಊರಲ್ಲಿ ತಲೆ ಎತ್ತಿಕೊಂಡು ತಿರುಗಾಡಲಾರೆ. ನಿನ್ನೆ ಬೆಳಿಗ್ಗೆ ಆಲೆಮನೇಲಿ ಕಬ್ಬಿನ ಹಾಲು ಕುಡಿಯು ವಾಗ, ವಿಜಯ ಕುಡಿಯುತ್ತಿದ್ದ ಬಟ್ಟಲನ್ನು ಕಿತ್ತುಕೊಂಡು ಗೋಪಿ ತಾನು ಕುಡಿದನಂತೆ."

"ಈ ವಿಷಯ ಇನ್ನು ಚರ್ಚೆ ಮಾಡೋಕೆ ನನಗಿಷ್ಟವಿಲ್ಲ" ಎಂದಳು ಮೀರ.

"ಯಾರೂ ಕಾಣದ ಹೆಂಡತಿ. ತಲೆಮೇಲೆ ಕೂರಿಸಿಕೊಂಡು ಮೆರೆಸಿ...."

ಸರಸಿಯ ಮಾತು ಮುಗಿಯುವುದಕ್ಕೆ ಮುಂಚೆಯೇ ಮೀರ ಅಲ್ಲಿಂದ ಎದ್ದು ಹೋದಳು.

ಸರಸಿಯ ಮಾತುಗಳನ್ನು ಕೇಳಿ ಮೀರಳ ಮನಸ್ಸು ವ್ಯಗ್ರವಾಗಿತ್ತು.

ಆದುದರಿಂದಲೇ ಅವಳು ಮೂರು ದಿನಗಳ ನಂತರ ಗೆಳೆಯರನ್ನು ಹೊರಡಿಸಿ ತಾನೂ ಅವರೊಡನೆ ಮೈಸೂರಿಗೆ ಬಂದುಬಿಟ್ಟಳು.

ಮೈಸೂರಿಗೆ ಬಂದೊಡನೆ ಗೋಪಿ ಸ್ವಂತ ಮನೆಯನ್ನು ನೋಡತೊಡ ಗಿದ. ಅವನ ತಾಯಿ ತಂದೆಯಿಂದಾಗಲಿ, ವಿಜಯಳ ತಾಯಿ ತಂದೆಯಿಂದಾ ಗಲಿ ಅವರಿಗೆ ಯಾವ ವಿಧವಾದ ಸಹಾಯವೂ ದೊರೆಯುವಂತಿರಲಿಲ್ಲ.

"ಅವನು ನಮ್ಮ ಭಾಗಕ್ಕೆ ಸತ್ತ ಹಾಗೆ" ಎಂದು ಗೋಪಿಯ ತಂದೆ ತಮ್ಮ ಸ್ನೇಹಿತರೊಬ್ಬರ ಕೈಲಿ ಹೇಳಿ ಕಳುಹಿಸಿದ್ದರು.

"ಮನೆಗೆ ವಿಜಯಳನ್ನೂ ಕರೆದುಕೊಂಡು ಬರಲೇ?" ಎಂದು ಗೋಪಿ ತಂದೆಗೆ ಹೇಳಿ ಕಳುಹಿಸಿದ್ದ ಪ್ರಶ್ನೆಗೆ ಸಿಕ್ಕಿದ ಉತ್ತರ ಅದು.

ವಿಜಯಳ ತಂದೆ "ಅವಳು ಮನೆಗೆ ಬಂದರೆ ಕಾಲು ಮುರಿದು ಕಳಿಸು ತ್ತೇನೆ" ಎಂದು ಎಲ್ಲರ ಎದುರಿಗೆ ಹಾರಾಡಿದ್ದರು.

ಪುಟ್ಟ ಸಂಸಾರ ಹೂಡಲು ಚಿಕ್ಕದೊಂದು ಮನೆ ಸಿಕ್ಕುವವರೆಗೆ ವಿಜಯ

ಮೀರಳ ರೂಮಿನಲ್ಲಿದ್ದಳು. ಎರಡು ರೂಮಿದ್ದ ಸಣ್ಣ ಮನೆ ಸಿಕ್ಕಿದ ಕೂಡಲೇ ಗೋಪಿ ಮೀರಳ ಬಳಿಗೆ ಬಂದು

"ನನ್ನ ಹುಡುಗೀನ ಕಳಿಸುತ್ತೀರಾ ?" ಎಂದ.

"ಮನೆ ಎಲ್ಲಿ ಮಾಡಿದೀರಿ ?" ಮೀರ ಕೇಳಿದಳು.

"ಶಿವರಾಮ ಪೇಟೇಲಿದೆ. ಮನೆ ಚೆನ್ನಾಗಿಲ್ಲ. ಆದರೆ ಎಷ್ಟು ದಿವಸ ಹೀಗಿರೋದು ?"

"ಧಾರಾಳವಾಗಿ ಕರೆದುಕೊಂಡು ಹೋಗೀಪ್ಪ. ನನ್ನದೇನು ಅಡ್ಡಿ."

"ನಾಳೆ ಬೆಳಿಗ್ಗೆ ಬಂದು ಕರ್‍ಕೊಂಡು ಹೋಗ್ತೀನಿ. ಜೊತೆಗೆ ನೀವೂ ಬಂದು ನಾನು ಮಾಡಿಕೊಡುವ ಟೀ ಕುಡಿದು ಬರಬೇಕು."

"ಟೀ ನನಗೆ ಸೇರೋಲ್ಲ."

"ವಿಜಯಾಗೆ ಕಾಫಿ ಸೇರೋದಿಲ್ಲ. ಆದುದರಿಂದ ನಾನೂ ಈಗ ಟೀ ಅಭ್ಯಾಸ ಮಾಡಕೊಂಡಿದೀನಿ."

"ಅವಳಿಗೇ ಕಾಫಿ ಅಭ್ಯಾಸ ಮಾಡಿಸಬೇಕಿತ್ತು."

"ಅವಳು ಚಪಾತಿಗೆ ಬದಲು ಅನ್ನ ಅಭ್ಯಾಸ ಮಾಡಿಕೊಳ್ತೀನೀಂತ ಹೇಳಿದಾಳೆ. ಈಗ ಸರಿಯಾಯಿತಲ್ಲವೆ ?"

"ಹೂಂ."

"ವಿಜಯ ಎಲ್ಲಿ ?"

"ಅವಳಿಗೆ ರಾತ್ರಿ ಡ್ಯೂಟಿ ಇದೆ. ಸಂಜೆ ನಾನು ಬರುವ ಹೊತ್ತಿಗೆ ರೂಮಿಗೆ ಬೀಗ ಹಾಕಿಕೊಂಡು ಆಸ್ಪತ್ರೆಗೆ ಹೊರಟು ಹೋಗಿದ್ದಳು."

"ಹಾಗಾದರೆ ಆ ಹುಡುಗಿ ಬೆಳಿಗ್ಗೆ ಬೇಗ ಏಳುವಳೇ ?"

"ನಾನು ಎಬ್ಬಿಸಿರುತ್ತೇನೆ. ಏನೂ ಆತಂಕಪಡಬೇಡಿ."

"ಬೇಡ. ಅವಳು ನಿದ್ದೆ ಮಾಡ್ತಿದ್ದರೆ ಎಬ್ಬಿಸಬೇಡಿ. ರಾತ್ರಿಯೆಲ್ಲಾ ನಿದ್ದೆಗೆಟ್ಟಿರುತ್ತಾಳೆ. ಬೆಳಿಗ್ಗೆ ಚೆನ್ನಾಗಿ ನಿದ್ದೆ ಮಾಡಲಿ. ನಾನು ಮಧ್ಯಾಹ್ನ ಹನ್ನೊಂದು ಗಂಟೆಗೆ ಬರ್‍ತೀನಿ. ನೀವೂ ರಜಾ ತಗೊಂಡಿರಿ."

"ಆಗಲಿ" ಎಂದಳು ಮೀರ.

ಬೆಳಿಗ್ಗೆ ಎಂಟು ಗಂಟೆಯ ಹೊತ್ತಿಗೆ ರಾತ್ರಿ ಡ್ಯೂಟಿ ಮುಗಿಸಿಕೊಂಡು ವಿಜಯ ರೂಮಿಗೆ ಬಂದಳು. ಅವಳು ಬಂದೊಡನೆ ಮೀರ ಗೋಪಿ ಹೇಳಿದ್ದ ಸಮಾಚಾರವನ್ನು ತಿಳಿಸಿದಳು.

"ಊಂ....ಊಂ...." ಎಂದು ತೂಕಡಿಸುತ್ತಾ ವಿಜಯ ಹಾಯಾಗಿ ಮಲಗಿಕೊಂಡು ಕಣ್ಣು ಮುಚ್ಚಿದಳು.

ಗೋಪಿ ಹನ್ನೊಂದು ಗಂಟೆಗೆ ಬಂದಾಗಲೂ ವಿಜಯ ನಿದ್ದೆ ಮಾಡು ತ್ತಿದ್ದಳು. ಮೀರ ಗೋಪಿಯ ಮುಂದೆ ಕುರ್ಚಿಯನ್ನು ತಳ್ಳಿ

"ಕುಳಿತುಕೊಳ್ಳಿ" ಎಂದಳು. ಗೋಪಿ ಕುಳಿತುಕೊಂಡ.

"ಎಬ್ಬಿಸಲೇನು ವಿಜಯಾನ?" ಮೀರ ಕೇಳಿದಳು.

"ಬೇಡಿ. ಅವಳಾಗಿಯೇ ಏಳಲಿ."

"ಈ ಪುಸ್ತಕ ನೋಡ್ತಿರಿ..." ಎನ್ನುತ್ತಾ ಮೀರ ಗೋಪಿಯ ಕೈಗೆ ಪುಸ್ತಕವೊಂದನ್ನು ಕೊಟ್ಟು ರೂಮಿನಿಂದ ಹೊರಗೆ ಬಂದು, ಯಶೋದೆಯ ರೂಮಿಗೆ ಹೋಗಿ ಹರಟೆ ಹೊಡೆಯತೊಡಗಿದಳು.

ಒಂದೂವರೆ ಗಂಟೆಯ ನಂತರ ಮೀರ ಮತ್ತೆ ತನ್ನ ಕೊಟಡಿಗೆ ಬಂದಾಗ ಗೋಪಿ ಪುಸ್ತಕ ಕೈಲಿ ಹಿಡಿದು ಕುಳಿತೇ ಇದ್ದ. ವಿಜಯ ಎಂದಿ ನಂತೆ ಗಾಢ ನಿದ್ದೆಯಲ್ಲಿದ್ದಳು.

"ಇನ್ನೂ ಏಳಲಿಲ್ಲವೇ?"

"ಇಲ್ಲ. ಮಲಗಿರಲಿ ಬಿಡಿ."

ಮೀರ ಸದ್ದು ಮಾಡುತ್ತಾ ಕಿಟಕಿ ಬಾಗಿಲನ್ನು ಬಡಿದಳು, ಪುಸ್ತಕ ವಿರಿಸಿದ್ದ ಮೇಜನ್ನು ಎಳೆದಳು. ಸದ್ದಿಗೆ ಎಚ್ಚರಗೊಂಡು ವಿಜಯ ಕಣ್ಣು ಬಿಟ್ಟಳು. ಎದುರಿಗೆ ಗೋಪಿ!

ವಿಜಯ ಕನಸು ಕಾಣುತ್ತಿರುವೆನೆಂದು ಬಗೆದಳೇನೋ?

"ಗೋಪಿ" ಎಂದು ಅಸ್ಪಷ್ಟವಾಗಿ ಹೇಳುತ್ತಾ ಅವನ ಕಡೆಗೆ ತನ್ನೆರಡು ಕೈಗಳನ್ನೂ ನೀಡಿದಳು.

ಮೀರ ಅದಾವ ಮಾಯದಲ್ಲೋ ಹೊರಗೆ ಜಾರಿ ಹೋಗಿದ್ದಳು.

ಅವಳು ಮತ್ತೆ ಹಿಂದಿರುಗಿ ಬಂದಾಗ ವಿಜಯ ತನ್ನ ಮನೆಗೆ ಹೊರ ಡಲು ಸಿದ್ಧವಾಗಿದ್ದಳು. ಮೀರ ಎರಡು ನಿಮಿಷಗಳಲ್ಲಿ ಸಿದ್ಧಳಾದಳು. ರೂಮಿಗೆ ಬೀಗ ಹಾಕಿಕೊಂಡು ಮೂವರೂ ಹೊರಟರು.

ಗೋಪಿಯ ಮನೆ ಚಿಕ್ಕದಾಗಿದ್ದರೂ ಅಚ್ಚುಕಟ್ಟಾಗಿತ್ತು. ಮನೆಗೆ ಹೀಟಿಂಗ್ ಸರ್ಕ್ಯೂಟ್ ಹಾಕಿಸಿದ್ದುದರಿಂದ ಮನೆಗೆಲಸದ ಭಾರ ಬಹಳ ಕಡಿಮೆಯಾಗಿತ್ತು. ತನ್ನ ಅಭಿರುಚಿಗೆ ತಕ್ಕಂತೆ ಗೋಪಿ ಮನೆಯನ್ನು ಸಿಂಗರಿಸಿದ್ದ.

ವಿಜಯ ಮನೆಯನ್ನು ಬಹಳ ಮೆಚ್ಚಿಕೊಂಡಳು. ದಂಪತಿಗಳ ನಿರ್ಮಲ ಆನಂದವನ್ನು ಕಂಡು ಮೀರಳ ಹೃದಯ ಹೂವಾಯಿತು. ವಿಜಯ ಟೀ ಬೆರಸಿ ಬಿಸ್ಕತ್ತಿನೊಡನೆ ಎಲ್ಲರಿಗೂ ಟೀ ಹಂಚಿದಳು. ಮನೆಯ ಸಾಮಾ

ನುಗಳನ್ನು ಜೋಡಿಸುವುದರಲ್ಲಿ ಮೀರ ವಿಜಯಳಿಗೆ ಸಹಾಯ ಮಾಡಿದಳು. ಅವರಿಗೆ ದಿಕ್ಕು ತೋಚದಂತೆ ಗೋಪಿ ತಾನೂ ಸಹಾಯ ಮಾಡಲು ಹೋಗುತ್ತಿದ್ದ.

"ಎಳೇ ಮಗು ಹಾಗೆ ಕೈಕಾಲಿಗೆ ಸುತ್ತಿಹಾಕಿಕೊಂಡು ಸುಮ್ಮನೆ ತೊಂದರೆ ಕೊಡಬೇಡಿ. ನೀವು ಹೋಗಿ" ಎಂದು ವಿಜಯ ಗೋಪಿಯನ್ನು ಗದರಿಸಿದಳು.

"ಈಗಿಂದ ಎಲ್ಲಾ ಅಭ್ಯಾಸವಾಗಿದ್ದರೆ ಒಳ್ಳೆಯದು" ಎಂದ ಗೋಪಿ.

"ನಿಮ್ಮನ್ನು ನೋಡಿಕೊಂಡು ಸುಧಾರಿಸುವುದೇ ನನಗೆ ಕಷ್ಟವಾಗಿದೆ. ಇನ್ನು ಸಧ್ಯ ಮಗು ಬೇರೆ ಆಗಿಬಿಟ್ಟರೆ ನನ್ನ ಗತಿ ಮುಗಿಯಿತು."

ಮನೆಯ ಶೃಂಗಾರ ಮುಗಿದ ಮೇಲೆ ಮೀರ ತನ್ನ ರೂಮಿಗೆ ಹೊರಟಳು.

"ಇವತ್ತೊಂದು ದಿನ ಇಲ್ಲೇ ಇರಿ" ಎಂದ ಗೋಪಿ.

"ಇಲ್ಲಪ್ಪ ಮತ್ತೆ ಯಾವಾಗಲಾದರೂ ಬರುತ್ತೇನೆ" ಎಂದು ಮೀರ ಹೊರಟುಬಿಟ್ಟಳು.

* * * *

ಆರು ತಿಂಗಳಿನ ಶಿಕ್ಷಣ ಮುಗಿದ ಕೂಡಲೇ ಮೀರ ಹಳ್ಳಿಯಲ್ಲಿ ಹೋಗಿ ನೆಲಸಬೇಕೆಂದು ನಿರ್ಧರಿಸಿದಳು. ಅವಳ ನಿರ್ಧಾರವನ್ನು ಗೋಪಿ ವಿಜಯ ಒಪ್ಪಲಿಲ್ಲ. ವಿಜಯ

"ಹಳ್ಳೀಲಿ ಏನು ಮಾಡುತ್ತೀಯ ಮೀರ?" ಎಂದಾಗ ಮೀರ

"ಹಳ್ಳಿಯಲ್ಲೂ ರೋಗಿಗಳಿದ್ದಾರೆ" ಎಂದು ನುಡಿದಿದ್ದಳು. ದಂಪತಿಗಳು ಅವಳ ಮನಸ್ಸನ್ನು ಅಲುಗಿಸಲು ಪ್ರಯತ್ನಿಸಿ ನಿರಾಶರಾದರು.

"ಅಲ್ಲಿ ಔಷಧಾಲಯ ತೆಗೆಯುತ್ತೀಯಾ?"

"ಇಲ್ಲಿರುವ ಶಾಪುಗಳಂತೆ ಅಲ್ಲಿ ನಾನು ಅಂಗಡಿ ಇಡುವುದಿಲ್ಲ. ಮಂಡ್ಯ ಡಿಸ್ಟ್ರಿಕ್ಟು ಮತ್ತು ಸುತ್ತಲೂ ಇರುವ ಹಳ್ಳಿಗಳಲ್ಲಿ ಸಾಮಾನ್ಯವಾಗಿರುವ ಮಲೇರಿಯಾ, ಲಿವರ್ ಖಾಯಿಲೆ, ಅನೀಮಿಯಾ, ಹೆಂಗಸರ ಖಾಯಿಲೆಗಳು ಇವುಗಳನ್ನು ದೂರಮಾಡಲು ನನ್ನ ಕೈಲಾದಷ್ಟು ಪ್ರಯತ್ನಿಸುತ್ತೇನೆ. ಗ್ರಾಮಸ್ವೈಮಲ್ಯ, ಸಂತಾನ ನಿರೋಧ ಇವುಗಳ ಮೇಲೆ ಅವರಿಗೆ ಸಾಕಷ್ಟು ತಿಳಿವಳಿಕೆ ಕೊಡಲು ಅಪೇಕ್ಷಿಸುತ್ತೇನೆ. ಹಳ್ಳಿಗಳು ದೇಶದ ಬೆನ್ನುಮೂಳೆ. ರೈತರು ಅನ್ನ ಕಾಣಿಸುವ ದೇವರು ಎಂಬುದನ್ನು ಮರೆಯಬೇಡ ವಿಜಯ."

"ನೀನು ಹಳ್ಳಿಗೆ ಹೋದ ಮೇಲೆ ಇಲ್ಲಿಗೆ ಬರ್ತೀಯೋ ಇಲ್ವೋ?"

"ಇಲ್ಲಿಗೆ ಬರದೇ ಇದ್ರೆ ಹೇಗಾಗುತ್ತೆ. ನಾನು ಔಷಧಿ, ಇಂಜಕ್ಷನ್ನು ಗಳನ್ನು ಇಲ್ಲಿಂದಾನೇ ವಾರಕ್ಕೊಂದು ಸಲ ಬಂದು ತಗೊಂಡು ಹೋಗ್ತೀನಿ."

"ಆಗ ನಿನ್ನ ತಂಗಿ ಮನೆ ಈ ಊರಲ್ಲೇ ಇದೆ ಎನ್ನುವುದನ್ನು ಮರೆಯ ಬೇಡ ಮೀರ."

ಮೀರ ತಲೆ ಅಲುಗಿಸಿದಳು. ಗೋಪಿ, ವಿಜಯ ಅವಳನ್ನು ಸ್ಟೇಷನ್ನಿಗೆ ಹೋಗಿ ಬೀಳ್ಕೊಟ್ಟರು. ಮೀರ ತನ್ನೊಡನೆ ಸಾಕಷ್ಟು ಸಾಮಗ್ರಿಗಳನ್ನು ತೆಗೆದುಕೊಂಡು ಹಳ್ಳಿಗೆ ಹೊರಟಳು.

ಮೀರ ಇನ್ನು ಮೇಲೆ ಹಳ್ಳಿಯಲ್ಲಿಯೇ ಉಳಿಯುವಳೆಂದು ತಿಳಿದ ಶಾಮು ಹರ್ಷಗೊಂಡ. ಆದರೆ ಸರಸಿಯ ಮುಖ ಒಣಗಿಹೋಯಿತು. ಮೀರ ಹಳ್ಳಿಗೆ ಬರುವ ಹಿಂದಿನ ದಿನ ಶಾಮು ಅವಳಿಗಾಗಿ ಒಂದು ರೂಮು ತೆರವು ಮಾಡಿಸಿದ. ಆ ರೂಮಿನಲ್ಲಿ ಅವಳು ತನ್ನ ಕೆಲಸಕ್ಕೆ ಬೇಕಾದ ಸಾಮಾನುಗಳನ್ನು ಇಟ್ಟುಕೊಳ್ಳಲು ಅವನು ಅನುಕೂಲ ಮಾಡಿದ.

ಶಾಮುವೇ ಹೋಗಿ ಮೀರಳನ್ನು ಎದುರುಗೊಂಡು ಕರೆತಂದ. ಶಾಮು ತನಗಾಗಿ ಕಲ್ಪಿಸಿಕೊಟ್ಟಿದ್ದ ಸೌಲಭ್ಯಗಳನ್ನು ನೋಡಿ ಮೀರಳ ಗಂಟಲು ಉಬ್ಬಿಬಂತು.

ಮೀರ ವೈದ್ಯಳಾಗಿ ಹಳ್ಳಿಗೆ ಬಂದ ಸಮಾಚಾರ ಹಳ್ಳಿಯವರಲ್ಲಿ ಬಹು ಬೇಗ ಹರಡಿತು.

"ಶಾಮಪ್ನೋರ ಯೆಡ್ತಿ ಡಾಕ್ತರಾಗಿ ಬಂದವ್ರಂತೆ. ಜೂಜಿಮದ್ದು ಕೊಡ್ತಾರಂತೆ" ಎಂಬ ವಿಷಯ ಸುತ್ತಲಿನ ಹಳ್ಳಿಗಳಲ್ಲಿ ಹರಡಿತು. ಅದು ವರೆಗೂ ಹಳ್ಳಿಯ ಜನರಿಗೆ ಪಂಡಿತರ ಕಷಾಯ ಮಾತ್ರ ತಿಳಿದಿತ್ತು. ಆಸ್ಪತ್ರೆಯ ಕಹಿ ಔಷಧಿ, ಸೂಜಿಮದ್ದು ಅವರಿಗೆ ತೀರಾ ಹೊಸದು. ಅವರಿಗೆ ಅದರಲ್ಲಿ ನಂಬಿಕೆಯೂ ಇರಲಿಲ್ಲ. ಆದುದರಿಂದ ಮೀರ ಹಳ್ಳಿಗೆ ಬಂದ ತರುಣದಲ್ಲಿ ಅವಳ ಕೆಲಸ ಅಷ್ಟು ಯಶಸ್ವಿಯಾಗುವಂತೆ ತೋರಲಿಲ್ಲ.

ವೆಂಕು ತಂದೆಯನ್ನು ನೋಡಿಕೊಂಡು ಹೋಗಲು ಮಂಡ್ಯದಿಂದ ಹಳ್ಳಿಗೆ ಬಂದಿದ್ದಳು. ಆಗ ಅವಳ ಮಗ ಮೂರು ವರ್ಷದ ನಂಜುಂಡಿಗೆ ಡಿಫ್ತೀರಿಯಾ ತಗುಲಿತು. ಮಗುವಿನ ಸಂಕಟ, ಯಾತನೆ ನೋಡಿ ಪಂಡಿತರು ತಲೆಯ ಮೇಲೆ ಕೈ ಹೊತ್ತುಕೊಂಡು ಕುಳಿತರು. ಅವರ ಲೇಹ, ಕಷಾಯದಿಂದ ಗಂಟಲು ನೋವು ಕಡಿಮೆಯಾಗಲಿಲ್ಲ.

ವೆಂಕು ಗಾಬರಿಯಾಗಿ ಮೀರಳ ಬಳಿಗೆ ಅಳುತ್ತಾ ಓಡಿ ಬಂದಳು.

"ಮೀರಾ, ನನ್ನ ಮಗೂನ ಉಳಿಸಿಕೊಡಿ" ಎಂದು ಅವಳು ಅಂಗ

ಲಾಚಿದಳು. ಮೀರ ತಾಯಿಯೊಡನೆ ಅವರ ಮನೆಗೆ ಹೋಗಿ ಮಗುವನ್ನು ಪರೀಕ್ಷೆ ಮಾಡಿದಳು. ಮಗುವಿಗೆ ಡಿಫ್ತೀರಿಯಾ ತಗುಲಿದೆ ಎಂದು ಅವಳಿಗೆ ತಿಳಿಯಿತು.

"ವೆಂಕೂ, ಈ ಕೂಡಲೇ ಮೈಸೂರಿಗೆ ಹೊರಡೋಣ. ನೀನು ತಯಾರು ಮಾಡಿಕೋ. ನಾನು ಮನೆಗೆ ಹೋಗಿ ಬರುತ್ತೇನೆ" ಎಂದಳು ಮೀರ.

"ಈಗ ರೈಲು ಯಾವುದೂ ಇಲ್ಲವಲ್ಲ" ವೆಂಕು ಅಳುತ್ತಾ ಹೇಳಿದಳು.

"ನೀನು ಸಿದ್ಧಳಾಗು" ಎಂದು ನುಡಿದವಳೇ ಮೀರ ಮನೆಗೆ ಹೊರಟು ಹೋದಳು.

ಶಾಮುವಿಗೆ ಸುದ್ದಿ ತಿಳಿಯಿತು. ಅವನು ಮೀರಳ ಸಲಹೆಯಂತೆ ಟೈರು ಚಕ್ರಗಳಿದ್ದ ಗಾಡಿಯನ್ನು ಸಿದ್ಧಪಡಿಸಿ, ವೇಗವಾಗಿ ಓಡುವುದೆಂದು ಹೆಸರು ಪಡೆದಿದ್ದ ಒಂದು ಜೊತೆ ಎತ್ತುಗಳನ್ನು ಗಾಡಿಗೆ ಹೂಡಿಸಿದ. ಐದು ನಿಮಿಷಗಳಲ್ಲಿ ಶಾಮು, ಮೀರ, ವೆಂಕು, ನಂಜುಂಡಿ, ಪಂಡಿತರು ಮೈಸೂರಿಗೆ ಹೊರಟರು. ನಿಂಗನ ಕೈ ಚಳಕದಿಂದ ಗಾಡಿ ಮೈಸೂರನ್ನು ಎರಡೂವರೆ ಗಂಟೆಯೊಳಗೆ ತಲುಪಿತು.

ಸಮಯಕ್ಕೆ ಸರಿಯಾಗಿ ದೊರೆತ ಚಿಕಿತ್ಸೆ, ಉಪಚಾರದಿಂದ ವೆಂಕುವಿನ ಮಗು ಉಳಿದುಕೊಂಡಿತು. ತನ್ನ ಮಗುವನ್ನು ಉಳಿಸಿಕೊಟ್ಟ ಮೀರಳ ಕೈಹಿಡಿದು ವೆಂಕು ಕೃತಜ್ಞತೆಯಿಂದ

"ಹಿಂದೆ ನೀವು ಓದುವಾಗ ನಾನು ಏನೇನೋ ಟೀಕೆ ಮಾಡಿದ್ದೆ. ಆ ಟೀಕೆಗಳನ್ನೆಲ್ಲಾ ನಾನು ವಾಪಸ್ಸು ತೆಗೆದುಕೊಳ್ಳುತೇನೆ. ನೀವು ಇನ್ನೂ ಎಷ್ಟು ಜನರಿಗೆ ಪ್ರಾಣದಾನ ಮಾಡಬೇಕಾಗಿದೆಯೋ. ಈ ಪುಣ್ಯ ಕೆಲಸ ಎಂದಿಗೂ ನಿಲ್ಲಿಸಬೇಡಿ. ನನ್ನ ಕ್ಷಮಿಸಿ" ಎಂದಳು.

"ನಾನು ಮಾಡಿದ್ದೇನು? ಇಂಜಕ್ಷನ್ನುಗಳು ನನ್ನ ಹತ್ತಿರ ಇರಲಿಲ್ಲ. ಇಲ್ಲಿಗೆ ಕರೆದುಕೊಂಡು ಬಂದೆ. ಅಷ್ಟೆ."

"ನೀವು ಡಿಫ್ತೀರಿಯಾಂತ ಹೇಳಿ ಕರ್ಕೊಂಡು ಬರದಿದ್ದರೆ...."

"ಅಷ್ಟೊಂದು ಹೊಗಳಬೇಡ ವೆಂಕು. ಆಮೇಲೆ ಮೀರಳ ತಲೆ ತಿರುಗಿಬಿಡುತ್ತದೆ" ಎಂದ ಶಾಮು.

ಈ ಪ್ರಸಂಗದ ನಂತರ ಹಳ್ಳಿಯವರು ಮೀರಳನ್ನು ನಂಬತೊಡಗಿದರು. ತಮ್ಮಲ್ಲಿ ಯಾರಿಗೆ ಯಾವ ಖಾಯಿಲೆಯಾದರೂ ಸೀಸೆ ಹಿಡಿದು ಮೀರಳ ಬಳಿಗೆ ಓಡಿ ಬರುತ್ತಿದ್ದರು. ಸುತ್ತಮುತ್ತಲಿನ ಹಳ್ಳಿಗಳಿಂದಲೂ

ಜನ ಗಾಡಿ ಕಟ್ಟಿಕೊಂಡು ಮೀರಳನ್ನು ನೋಡಿ ಅವಳಿಂದ ತಕ್ಕ ಚಿಕಿತ್ಸೆ ಪಡೆ ಯಲು ಬರುತ್ತಿದ್ದರು.

ತನ್ನ ರೈತರುಗಳಿಂದ ಫೀಸನ್ನಾಗಲಿ, ಔಷಧದ ಹಣವನ್ನಾಗಲಿ ಪಡೆಯ ಬಾರದೆಂದು ಶಾಮು ಮೀರಳಿಗೆ ಹೇಳಿದ್ದ. ಆದರೆ ಉಳಿದ ರೈತರುಗಳಿಂದ ಹಣ ಪಡೆಯಲು ಅವನ ಅಭ್ಯಂತರವೇನೂ ಇರಲಿಲ್ಲ. ಸರಸಿಗೆ ಶಾಮುವಿನ ಏರ್ಪಾಡು ಹಿಡಿಯಲಿಲ್ಲ. ಅವಳು ಅಸಮಾಧಾನದಿಂದ

"ಹಣ ತಗೊಳ್ಳದೇ ಬಿಟ್ಟೀ ಔಷಧಿ ಕೊಡೋದು ನ್ಯಾಯವಲ್ಲ" ಎಂದು ಶಾಮುವನ್ನು ಪ್ರತಿಭಟಿಸಿದಳು.

"ನನ್ನ ರೈತರಿಂದ ಹಣ ಪಡೆಯಬೇಡ ಎಂದು ಮಾತ್ರ ಹೇಳಿದೆ. ಉಳಿದವರಿಂದ ಧಾರಾಳವಾಗಿ ಫೀಸು ತೆಗೆದುಕೊಳ್ಳಲಿ."

"ನಿಮ್ಮ ರೈತರಿಗೆ ತಾನೇ ಯಾಕೆ ಬಿಟ್ಟಿ ಔಷಧಿ ಕೊಡಬೇಕು? ಹೀಗೆ ದಾಂಧಲೆ ನಡೆಸಿದರೆ ನಿಮ್ಮ ಮಗನ ಕೈಗೆ ಕರಟ ಕೊಡುತ್ತೀರಿ."

"ಸರಸೀ, ನಾನಿವತ್ತು ಶ್ರೀಮಂತನಾಗಿರುವುದು ನನ್ನ ರೈತರುಗಳಿಂದ. ಅವರು ಆರೋಗ್ಯವಾಗಿದ್ದಷ್ಟೂ ಅದರಿಂದ ನಮಗೆ ಉಪಕಾರವಿದೆಯೇ ಹೊರತು ನಷ್ಟವೇನಿಲ್ಲ. ಅವರಿಗೆ ಬಿಟ್ಟಿ ಔಷಧಿ ಕೊಡುವುದರಲ್ಲೂ ಸ್ವಾರ್ಥ ವಿದೆ. ಹಸುವಿಗೆ ಹುಲ್ಲು, ತಿಂಡಿ ಹೆಚ್ಚು ಹಾಕಿದಷ್ಟೂ ಹಾಲು ಸಿಗುತ್ತದೆ."

"ನೀವೂ ಸಂಸಾರೊಂದಿಗರು. ನಮ್ಮನ್ನ ಕಾಡುಪಾಲು ಮಾಡಬೇಡಿ."

"ಅದು ನನಗೂ ಗೊತ್ತು. ನನಗೆ ಇಬ್ಬರು ಹೆಂಡತಿಯರಿದ್ದಾರೆ. ಒಬ್ಬ ಮಗನಿದ್ದಾನೆ. ಮತ್ತೊಂದು ಮಗು ಆಗುವುದರಲ್ಲಿದೆ ಎನ್ನೋದನ್ನ ನಾನು ಮರೆತಿಲ್ಲ. ಆದರೆ ನನ್ನ ಹೊಲ, ಜಮೀನುಗಳಲ್ಲಿ ದುಡಿಯುವವರಿಂದ ನಾನು ಹಣ ಹೀರಲಾರೆ."

ಅವನ ಮಾತು ಕೇಳಿ ಸರಸಿ ಕೋಪಿಸಿಕೊಂಡು ಹೊರಟುಹೋದಳು.

ಬೆಳಿಗ್ಗೆಯಿಂದ ಸಂಜೆಯವರೆವಿಗೆ ಮೀರ ತನ್ನಲ್ಲಿಗೆ ಬರುತ್ತಿದ್ದ ರೋಗಿ ಗಳನ್ನು ನೋಡುತ್ತಿದ್ದಳು. ಸಂಜೆ ಐದು ಗಂಟೆಯ ನಂತರ ಹಳ್ಳಿಯಲ್ಲಿ ಸುತ್ತಾಡಿ ರೈತರ ಹೆಂಗಸರಿಗೆ ಮಲೇರಿಯಾ ರೋಗವನ್ನು ತಡೆಗಟ್ಟುವುದು ಹೇಗೆಂದು ತಿಳಿಸುತ್ತಿದ್ದಳು. ಗುಡಿಸಲುಗಳ ಬಳಿ ನೀರು ನಿಲ್ಲಲು ಅವಕಾಶ ಕೊಡದೆ ಇರುವಂತೆ ಅವರಿಗೆ ಅವಳು ಎಚ್ಚರಿಕೆ ಕೊಡುತ್ತಿದ್ದಳು. ಮೈಸೂರಿ ನಿಂದ ಲ್ಯಾಂಟ್ರೆನ್ ಲೆಕ್ಚರ್ ಕೊಡುವವರನ್ನು ಕರೆಸಿ ಮಲೇರಿಯಾ ರೋಗ ವನ್ನು ತಡೆಗಟ್ಟುವ ವಿಧಾನವನ್ನು ತೆರೆಯ ಮೇಲೆ ತೋರಿಸಿದಳು.

ಮಲೇರಿಯಾ, ಲಿವರ್ ಕಾಹಿಲೆಯ ಜೊತೆಗೆ ಅವಳು ಮಿತ ಸಂತಾನ

ವನ್ನು ಹಳ್ಳಿಯವರಿಗೆ ತಿಳಿಸಲು ಪ್ರಯತ್ನಿಸಿದಳು. ಆದರೆ ಮೊದಲು ಈ
ವಿಚಾರದಲ್ಲಿ ಅವಳಿಗೆ ಸೋಲಾಯಿತು.

ಒಂದು ದಿನ ಮೀರ ಒಡ್ಡರನ್ನು, ರೈತರ ಹೆಂಗಸರನ್ನು ಕೂರಿಸಿ
ಕೊಂಡು ಹೇಳಿದಳು,

"ಒಬ್ಬೊಬ್ಬರಿಗೆ ಎಂಟು ಹತ್ತು ಮಕ್ಕಳಾಗೋದು ತುಂಬಾ ಅನ್ಯಾಯ.
ಇದರಿಂದ ನಿಮ್ಮ ಆರೋಗ್ಯ, ಶಕ್ತಿ ಹಾಳಾಗುವುದಲ್ಲದೆ ಮಕ್ಕಳಿಗೂ ಏನೂ
ಸುಖವಿಲ್ಲ. ಈಗ ಬೋರನ್ನ ನೋಡಿ. ಅವನಿಗೆ ಒಂಭತ್ತು ಮಕ್ಕಳಿವೆ.
ಯಾರಿಗೂ ಹೊಟ್ಟೆತುಂಬ ಬಿಟ್ಟು ಹಾಕುವ ಶಕ್ತಿ ಅವನಿಗಿಲ್ಲ. ಅದಕ್ಕೆ
ಬದಲು ಎರಡೇ ಮಕ್ಕಳಿದ್ದಿದ್ದರೆ...."

"ಬಿಡವ್ವ ಹುಟ್ಟಿಸಿದ ದ್ಯಾವರು ಹುಲ್ಲು ಮೇಯಿಸೋಕಿಲ್ಲ" ಎಂದು
ನೀಲವ್ವ ಹೇಳಿದಳು.

"ನೀವು ಯೇಳ್ದಂಗೆ ಮಾಡೋದು ತುಂಬಾ ಅನ್ಯಾಯದ ಪಾಪ. ಸಿವ
ಮೆಚ್ಚ್ಯಾನಾ?" ರಾಮಕ್ಕ ಪ್ರತಿಭಟಿಸಿದಳು.

"ಎಂಟು ಹತ್ತು ಮಕ್ಕಳನ್ನು ಹೆತ್ತು ಅವರಿಗೆ ಅನ್ನ ಹಾಕದಿದ್ದ
ಅದು ಪಾಪವಲ್ಲವೆ ರಾಮಕ್ಕ? ಹುಟ್ಟಿಸೋದಕ್ಕೆ ಮಾತ್ರ ನಾವು ಜವಾಬ್ದಾ
ರರು, ಸಾಕೋಕೆ ದೇವರು ಅಂದರೆ ಇದು ಯಾರು ಮೆಚ್ಚುವ ಮಾತು?"

"ನೀವು ಯೇಳೋ ಮಾತು ನಿಜ" ಎಂದಳು ಮಾದವ್ವ.

ಚಿಕ್ಕ ವಯಸ್ಸಿಗೇ ಐದಾರು ಮಕ್ಕಳನ್ನು ಪಡೆದಿದ್ದ ಹೆಂಗಸು ಆಕೆ.
ಮಕ್ಕಳು ಅವಳನ್ನು ಜೀವಂತವಾಗಿ ಹರಿದು ತಿನ್ನುತ್ತಿದ್ದವು. ಹಸಿವು ಎಂದು
ಅಳಲು ತೆರೆದ ಬಾಯನ್ನು ಅವು ಮುಚ್ಚುತ್ತಲೇ ಇರಲಿಲ್ಲ. ಮಕ್ಕಳಿಂದಾ
ಅವಳಿಗೆ ತನ್ನ ಜೀವನ ರೋಸಿಹೋಗಿತ್ತು. ಅವಳ ಗಂಡ ಹನುಮನ
'ಹಾಳು ಮಕ್ಕಳು' ಸಾಕೆಂದು ಗೊಣಗುತ್ತಿದ್ದ. ಆದರೆ ಎರಡು ವರ್ಷ
ಕ್ಕೊಂದು ಮಕ್ಕಳಾಗುವುದು ಅವರಿಗೆ ತಪ್ಪಿರಲಿಲ್ಲ.

"ನೀನೊಬ್ಬಳಾದರೂ ನನ್ನ ಮಾತು ಒಪ್ಪಿದೆಯ ಮಾದವ್ವ?" ಮೀ
ಉತ್ಸಾಹದಿಂದ ಕೇಳಿದಳು.

"ಹೂಂ. ಏನಾರ ಮಾಡಿ ನನಗೆ ಮಕ್ಕಳಾಗೋದನ್ನ ತಪ್ಪಿ
ನನ್ನವ್ವ. ಇವುಗಳಿಂದ ನನ್ನ ಜೀವ ಬೆಂಡಾಗಿ ಓಯ್ತು."

"ನಾಳೆ ನೀನು ಹನುಮ ಮನೆ ಹತ್ತಿರ ಬನ್ನಿ."

"ಆಗಲಿ."

ಉಳಿದ ಹೆಂಗಸರು ಮಾದವ್ವನನ್ನು 'ಪಾಪಿ' ಎಂದು ನಿಂದಿಸಿದರು

'ಪರ್ಪಂಚದ ರೀತೀನೇ ತಲೆಕೆಳಗು ಮಾಡೋಕೆ ಒಂಟವ್ಳೆ' ಎಂದು ಅಪ ಹಾಸ್ಯ ಮಾಡಿದರು. ಆದರೆ ಮಾದವ್ವ ಸೋಲಲಿಲ್ಲ.

ಮಾದವ್ವ, ಹನುಮ ಮೀರಳ ಸಲಹೆಯನ್ನು ಪಡೆದರು. ಅದರ ಪರಿಣಾಮವಾಗಿ ಮಾದವ್ವನ ಚಿಕ್ಕ ಮಗುವಿಗೆ ನಾಲ್ಕು ವರ್ಷಗಳಾದರೂ ಅವಳು ಮತ್ತೆ ಗರ್ಭಿಣಿಯಾಗಲಿಲ್ಲ. ಮಾದವ್ವನ ಮುಖದ ಮೇಲೆ ಮತ್ತೆ ಎಳೆತನದ ಕಾಂತಿ ಮೂಡಿತು. ಚಿಕ್ಕ ಮಗು ನಾಲ್ಕು ವರ್ಷದವನಾದುದ ರಿಂದ, ಯಾವ ಕೆಲಸಕ್ಕೂ ತನ್ನನ್ನೇ ಅವಲಂಬಿಸಿರುತ್ತಿದ್ದ ಕೈಗೂಸು ಇಲ್ಲದ್ದರಿಂದ, ಮಾದವ್ವ ಒಂದು ಗಳಿಗೆ ಕಾಲುಚಾಚಿ ಸುಮ್ಮನೆ ಕುಳಿತು ಕೊಳ್ಳುವಂತಾಯಿತು. ಹನುಮನೂ ಹೊಸ ಹರೆಯದವನಂತೆ ತೃಪ್ತಿಯಿಂದಿ ರುತ್ತಿದ್ದ.

ಮಾದವ್ವನನ್ನು ಅಪಹಾಸ್ಯ ಮಾಡಿದ ಬಾಯಿಗಳು ತೆಪ್ಪಗಾದವು. ಮಾದವ್ವನಿಗೆ ದೊರೆತ ನೆಮ್ಮದಿ, ತೃಪ್ತಿ ನೋಡಿ ಈರಮ್ಮ ತಾನೂ ಅವಳ ಮೇಲ್ಪಂಗ್ತಿಯನ್ನು ಅನುಸರಿಸಲು ಯತ್ನಿಸಿದಳು. ಮದುವೆಯಾದ ಐದು ವರ್ಷಕ್ಕೇ ಈರಮ್ಮ ಐದು ಮಕ್ಕಳ ತಾಯಿಯಾಗಿದ್ದಳು.

ಒಂದು ದಿನ ಮಾದವ್ವನ ಎದುರಿಗೆ ಈರಮ್ಮ ತನ್ನ ಸ್ಥಿತಿ ಹೇಳಿ ಕೊಂಡು ಅತ್ತಾಗ ಮಾದವ್ವ

"ಅಮ್ಮಾವರ ತಾವು ಕರ್ಕೊಂಡು ಓಗ್ತೀನಿ ಬಾ. ನಾಳೆ ನಿನ್ನ ಗಂಡನ್ನೂ ಕರ್ಕೊಂಡು ಬಾ. ನಾನು ಈಗ ಮಕ್ಕಳ ಕಾಟವಿಲ್ಲದೆ ಸುಖವಾಗಿ ದೀನಿ" ಎಂದಳು.

ಈರಮ್ಮ, ಅವಳ ಗಂಡನಿಗೂ ಮೀರಳ ಉಪದೇಶ ಸಿಕ್ಕಿತು. ತಾನು ಹೇಳಬೇಕಾದುದನ್ನೆಲ್ಲಾ ತಿಳಿಸಿ ಮೀರ

"ಮುಂದೆ ಮಕ್ಕಳು ಆಗೋದೇ ಇಲ್ಲ ಎನ್ನುವ ಬರವಸೆ ನಾನು ಕೊಡ ಲಾರೆ. ಆದರೆ ನಾಲ್ಕು ಮಕ್ಕಳು ಆಗುವ ಕಡೆ ಒಂದು ಆದರೆ ಎಷ್ಟೋ ವಾಸಿ ಯಲ್ಲವೇ? ನೀವು ಯಾವಾಗಲೂ ಎಚ್ಚರಿಕೆಯಿಂದಿರಿ" ಎಂದು ಹೇಳಿದಳು.

ಮೀರಳ ಮಾತುಗಳನ್ನು ಕೇಳಿ ಸರಸಿ ಅಸಹ್ಯಪಟ್ಟುಕೊಂಡಳು. ಹನುಮ, ರಂಗ ಮೊದಲಾದ ಅನ್ಯಪುರುಷರೆದುರಿಗೆ ಗಂಡು, ಹೆಣ್ಣಿನ ದಾಂಪತ್ಯ ಜೀವನವನ್ನು ನಿರ್ಭಯವಾಗಿ, ನಿಸ್ಸಂಕೋಚವಾಗಿ ಮೀರ ಚರ್ಚೆ ಮಾಡಿ ಅವರಿಗೆ ಸಲಹೆ ಕೊಡುವುದನ್ನು ಒಂದು ದಿನ ಕೇಳಿದ ಸರಸಿ ಅಪ ಮಾನದಿಂದ ತಲೆ ತಗ್ಗಿಸಿದಳು. ಹನುಮ, ರಂಗ ಹೋದಮೇಲೆ ಮೀರ ಳಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದು ಅವಳು ನಿಶ್ಚಯಿಸಿದಳು. ಅವರು

ಹೋಗುತ್ತಲೇ ಸರಸಿ ಮೀರಳ ಬಳಿಗೆ ಬಂದು

"ನೀವು ಮಾಡ್ತಿರೋ ಕೆಲಸ ಸರಿಯೇ ?" ಎಂದಳು.

"ಯಾವ ಕೆಲಸ ?"

"ಸಂತಾನ ನಿರೋಧದ ಬಗ್ಗೆ ಸಲಹೆ ಕೊಡುವುದು ತಪ್ಪಲ್ಲವೇ ? ಪ್ರಕೃತಿನಿಯಮಕ್ಕೆ ನಾವು ವಿರುದ್ಧ ಹೋಗುವುದು ಪಾಪವಲ್ಲವೇ ?"

"ಅಲ್ಲ."

"ಗಂಡಸರೆದುರಿಗೆ ಹಾಗೆ ಮಾತನಾಡೋದು...." ಅವಳ ಮಾತು ಮುಗಿಯುವುದಕ್ಕೆ ಮುಂಚೆಯೇ ಮೀರ ಜೋರಾಗಿ ನಕ್ಕು ಹೇಳಿದಳು.

"ವೈದ್ಯ ಶಿಕ್ಷಣ ಪಡೆಯಲು ಕಾಲೇಜು ಸೇರಿದಾಗ ನಾನು ಹೆಣ್ಣು ಎನ್ನುವುದನ್ನು ಮರೆತು ಸೇರಿದ್ದೇನೆ."

ಅಷ್ಟರಲ್ಲಿ ತಾಯಿಯೊಬ್ಬಳು ತನ್ನ ಮಗುವನ್ನು ತೋರಿಸಲು ಮೀರಳ ಬಳಿಗೆ ಕರೆದುಕೊಂಡು ಬಂದಳು. ಸರಸಿ ಗೊಣಗುತ್ತಾ ಹೊರಟುಹೋದಳು.

ಮೀರಳ ಕೆಲಸ ದಿನದಿನಕ್ಕೆ ಜಾಸ್ತಿಯಾಯಿತು ಆಗಾಗ್ಗೆ ಅವಳು ಹೆರಿಗೆ ಕೇಸುಗಳಿಗಾಗಿ ಸುತ್ತಲಿನ ಹಳ್ಳಿಗಳಿಗೆ ಹೋಗಿ ಬರಬೇಕಾಗಿತ್ತು. ಈ ಓಡಾಟದಿಂದ ಅವಳಿಗೆ ಯಾವಾಗಲೂ ಬಳಲಿಕೆ, ಆಯಾಸವಿರುತ್ತಿತ್ತು.

ಒಂದು ದಿನ ಹೆರಿಗೆ ಕೇಸೊಂದನ್ನು ಮುಗಿಸಿಕೊಂಡು ಮೀರ ಮೂರು ಮೈಲಿಯಿದ್ದ ಹಳ್ಳಿಯಿಂದ ನಡೆದುಕೊಂಡು ಮನೆಗೆ ಬಂದಳು. ಚರ್ಮದ ಸೂಟುಕೇಸನ್ನು ಮೇಜಿನ ಮೇಲಿರಿಸಿ ಆಯಾಸದಿಂದ ಮೀರ ಹಾಸಿಗೆಯ ಮೇಲೆ ಉರುಳಿಕೊಂಡಳು. ಸರಸಿಯ ಚಿಕ್ಕ ಮಗು ಕಾಮಾಕ್ಷಿ ತಪ್ಪು ಹೆಜ್ಜೆ ಇಡುತ್ತಾ ಮೀರಳ ಬಳಿಗೆ ಓಡಿ ಬಂದಳು. ಮೀರ ಅವಳನ್ನೆತ್ತಿ ಮಂಚದ ಮೇಲೆ ಕೂರಿಸಿದಳು. ಕಾಮಾಕ್ಷಿ ಸರಸಿ ತನ್ನನ್ನು ತಟ್ಟಿ ಮಲಗಿಸುತ್ತಿದ್ದಂತೆ ಮೀರಳನ್ನು ತಟ್ಟಿದಳು.

ಮೀರ ಮಲಗಿರುವುದನ್ನು ನೋಡಿ ಶಾಮು ಗಾಬರಿಯಾದ. ಹತ್ತಿರ ಬಂದು

"ಯಾಕೆ ಹುಷಾರಿಲ್ಲವೇ ?" ಎಂದು ಕೇಳಿದ.

"ತುಂಬಾ ಆಯಾಸವಾಗಿದೆ. ಹಳ್ಳಿಯಿಂದ ನಡೆದುಕೊಂಡು ಬಂದೆ, ಸುತ್ತಲಿನ ಹಳ್ಳಿಗಳಿಗೆ ಹೋಗಿ ಬರುವುದು ನನಗೆ ತುಂಬಾ ಕಷ್ಟವಾಗಿದೆ."

"ಸುತ್ತಲಿನ ಹಳ್ಳಿಗಳಿಗೆ ಹೋಗಿ ಕೆಲಸ ಮಾಡುವುದನ್ನು ಬಿಟ್ಟು ಬಿಡುವುದೇ ಒಳ್ಳೆಯದು. ಇದರಿಂದ ವೃಥಾ ಖರ್ಚಿದೆಯೇ ಹೊರತು ಮೂರು ಕಾಸಿನ ಪ್ರಯೋಜನವಿಲ್ಲ" ಎಂದಳು ಸರಸಿ.

ಮೀರ ಮಾತನಾಡಲಿಲ್ಲ. ಅವಳ ಪರವಾಗಿ ಶಾಮುವೇ ಉತ್ತರ ಕೊಟ್ಟ.

“ ಅದು ಸರಿಯಲ್ಲ. ಅವಳಿಂದ ನಾಲ್ಕು ಜನರಿಗೆ ಉಪಯೋಗವಾಗಲೀಂತ ನಾನು ಮೀರಾನ ಡಾಕ್ಟರ್ ಪರೀಕ್ಷೆಗೆ ಓದಿಸಿದೆನೇ ಹೊರತು, ಸಂಪಾದಿಸಿ ತನ್ನ ಆಸ್ತಿ ಅಭಿವೃದ್ಧಿಪಡಿಸಲಿ ಎನ್ನುವ ಅಭಿಪ್ರಾಯ ನನಗೆ ಎಂದೂ ಇರಲಿಲ್ಲ. ದೇವರು ನನಗೆ ಯಾವುದಕ್ಕೂ ಕಡಿಮೆ ಮಾಡಿಲ್ಲ.”

“ ದೇವರು ಕಡಿಮೆ ಮಾಡಿಲ್ಲಾಂತ ರೂಪಾಯಿಗಳನ್ನ ಹೀಗೆ ಚೆಲ್ಲಾಡಿದರೆ ಮಕ್ಕಳ ಗತಿಯೇನು ? ಕಂಡವರನ್ನ ಉದ್ಧಾರ ಮಾಡೋದರಲ್ಲಿ ನಮ್ಮ ಮನೆ ತೊಳೆದುಬಿಡಬೇಡಿ ” ಸರಸಿ ಶಾಮುವನ್ನು ವಿರೋಧಿಸಿದಳು.

ಅವಳಿಗೆ ಮೀರಳಿಂದ ಅನಾವಶ್ಯಕವಾಗಿ ಹಣ ಖರ್ಚಾಗುತ್ತಿದೆಯೆಂದು ಭಾವನೆ. ಮೀರ ಸಂಗಾದಿಸಿದ ಹಣ ಮತ್ತೆ ಔಷಧಿಗಳನ್ನು ಕೊಳ್ಳುವುದಕ್ಕಾಗಿ ಖರ್ಚಾಗುತ್ತಿದ್ದುದಲ್ಲದೆ ಹಲವು ಬಾರಿ ಕೈಯಿಂದಲೂ ಅವಳು ಹಣ ತೆರಬೇಕಾಗುತ್ತಿತ್ತು.

ಸರಸಿಯ ಮಾತು ಕೇಳಿ ಶಾಮು “ನಿನ್ನ ಯಾರು ಇಲ್ಲಿಗೆ ಕರೆದೋರು?” ಎಂದ. ಸರಸಿ ಹುಬ್ಬುಗಂಟಿಕ್ಕಿ

“ ನನಗೂ ಈ ಮನೆಗೂ ಸಂಬಂಧವಿದೆ. ನನ್ನ ಮಕ್ಕಳನ್ನ ಪರದೇಶಿಗಳನ್ನಾಗಿ ಮಾಡಬೇಡಿ ” ಎಂದಳು.

“ ಸುಬ್ರಮಣ್ಯ, ಕಾಮಾಕ್ಷಿ ನನ್ನ ಮಕ್ಕಳಲ್ಲವೇ ?” ಶಾಮು ಕೇಳಿದ.

“ ನನ್ನ ಹೆಂಡತಿ, ನನ್ನ ಮಕ್ಕಳು ಎನ್ನುವ ವ್ಯಾಮೋಹ ನಿಮಗಿದ್ದಿದ್ದರೆ ನಾನೇಕೆ ಹೀಗೆ ಒಡ್ಡಾಡುತ್ತಿದ್ದೆ” ಎನ್ನುತ್ತಾ ಸರಸಿ ಹೊರಗೆ ಹೋದಳು.

ಮೀರ ಜಗಳದಲ್ಲಿ ಭಾಗವಹಿಸದೆ ಸುಮ್ಮನೆ ಮಲಗಿದ್ದಳು. ಸರಸಿಯ ಮಾತಿನಿಂದ ಕೋಪಗೊಂಡಿದ್ದ ಶಾಮು ಹುಬ್ಬುಗಂಟಿಕ್ಕಿ

“ ಇದೆಲ್ಲಾ ನೀನು ಮಾಡಿದ್ದು—ಇವಳನ್ನ ನನಗೆ ಗಂಟುಹಾಕಿ ” ಎಂದು ಮೀರಳ ಮೇಲೆ ಹಾರಾಡಿದ.

ಮೀರ ನಗುತ್ತಾ ಕಾಮಾಕ್ಷಿಯ ಕಡೆ ಕೈ ತೋರಿಸಿ

“ ಇವಳನ್ನ ಎತ್ತಿಕೊಂಡು ಆ ಮಾತನಾಡಿ ” ಎಂದಳು. ಶಾಮುವಿನ ಮುಖ ಮೃದುವಾಯಿತು. ಅವನು ಕಾಮಾಕ್ಷಿಯನ್ನೆತ್ತಿಕೊಂಡು

“ ನಿನಗೊಂದು ಕಾಗದ ಬಂದಿದೆ. ನನಗೆ ಕೊಡೋದು ಮರೆತು ಹೋಯಿತು ” ಎನ್ನುತ್ತಾ ಜೇಬಿನಿಂದ ಕಾಗದವೊಂದನ್ನು ತೆಗೆದು ಮೀರಳ ಕೈಗೆ ಕೊಟ್ಟ. ಮೀರ ಮಲಗಿಕೊಂಡೇ ಕಾಗದ ಒಡೆದು ಓದತೊಡಗಿದಳು.

" ಮೀರ,

ನೀವು ನಿಮ್ಮ ತಂಗಿಯ ಮನೆ ಮರೆತಿರುವಂತಿದೆ. ಚಿಂತೆಯಿಲ್ಲ. ನಾವು ಮಾತ್ರ ನಿಮ್ಮನ್ನು ಮರೆಯುವುದಿಲ್ಲ. ಕಾಲೇಜಿನ ಲೆಕ್ಚರರ್ ಕೆಲಸಕ್ಕೆ ನಾನು ರಾಜೀನಾಮೆ ಕೊಟ್ಟು ಸ್ವಂತವಾಗಿ 'ವಿಜಯ ಫಾರ್ಮಸಿ'ಯನ್ನು ತೆರೆಯಲಿದ್ದೇನೆ. ಅದಕ್ಕೆ ಹೊಂದಿಕೊಂಡಂತೆ 'ವಿಜಯ ನರ್ಸಿಂಗ್ ಹೋಂ' ಸ್ಥಾಪಿಸಲಿದ್ದೇನೆ. ಇಷ್ಟೊಂದು ಕಾರುಬಾರು ನಡೆಸಲು ಹಣ ಎಲ್ಲಿಂದ ಬಂತೆಂದು ನಿಮಗೆ ಆಶ್ಚರ್ಯವಾಗಬಹುದು. ನಾನು, ವಿಜಯ ಕಾಸಿಗೆ ಕಾಸು ಕೂಡಿ ಹಾಕಿದುದರ ಜೊತೆಗೆ ನಮ್ಮನ್ನೇ ಒತ್ತೆಯಾಗಿಟ್ಟು ಹಣವನ್ನು ಸಾಲವಾಗಿ ಪಡೆದಿದ್ದೇವೆ. ನರ್ಸಿಂಗ್ ಹೋಂ ಮತ್ತು ಫಾರ್ಮಸಿಯ ಪ್ರಾರಂಭೋತ್ಸವ ಶುಕ್ರವಾರ ನಡೆಯಲಿದೆ. ನೀವು, ನಿಮ್ಮ ಯಜಮಾನರು ನಮ್ಮ ಮೇಲೆ ಕೃಪೆ ಮಾಡಿ ದಯಮಾಡಿಸಿ ಈ ಸಮಾರಂಭ ಯಶಸ್ವಿಯಾಗಿ ನೆರವೇರುವಂತೆ ಮಾಡಬೇಕೆಂದು ನಾನು, ವಿಜಯ ಕೇಳಿಕೊಳ್ಳುತ್ತೇವೆ.

ಗೋಪಿ."

ಮೀರ ಕಾಗದವನ್ನು ಓದಿ ಶಾಮುವಿನ ಕೈಗೆ ಕೊಟ್ಟಳು. ಶಾಮು ಕಾಗದ ಓದಿ " ಆಗಲಿ. ಹೋಗಿ ಬರೋಣ " ಎಂದ.

ಗುರುವಾರ ಶಾಮು, ಮೀರ ಮೈಸೂರಿಗೆ ಹೊರಟರು. ಗೋಪಿ, ವಿಜಯ ಅವರನ್ನು ನಿಲ್ದಾಣದಲ್ಲಿ ಎದುರುಗೊಂಡರು.

ಮೀರಳನ್ನು ಕಂಡೊಡನೆ ವಿಜಯ ಗೋಪಿಯ ಮೇಲೆ ದೂರು ಹೇಳಲು ಪ್ರಾರಂಭ ಮಾಡಿದಳು.

" ನೋಡು ಮೀರಾ, ಫಾರ್ಮಸಿಗೆ, ನರ್ಸಿಂಗ್ ಹೋಂಗೆ ನನ್ನ ಹೆಸರನ್ನೇ ಇಟ್ಟಿದ್ದಾರೆ. ನನಗದು ಸ್ವಲ್ಪವೂ ಇಷ್ಟವಿಲ್ಲ. ಗೋಪಿನಾಥ್ ಫಾರ್ಮಸಿ ಎಂದು ಇಡಬಾರದೇ? ನೀನಾದರೂ ಅವರಿಗೆ ಹೇಳು."

" ಯಾರು ಹೇಳಿದರೂ ನಾನು ಒಪ್ಪೋದಿಲ್ಲ " ಎಂದ ಗೋಪಿ.

"ಮೊನ್ನೆಯಿಂದ ನನಗೂ, ಅವರಿಗೂ ಅದೇ ಜಗಳ" ಎಂದಳು ವಿಜಯ.

" ಹೆಸರು ಯಾವುದಿಟ್ಟರೇನಂತೆ? ನಿಮ್ಮ ಕೆಲಸದಲ್ಲಿ ನೀವು ಸಂಪೂರ್ಣ ಯಶಸ್ಸು, ವಿಜಯ ಗಳಿಸೋದು ಮುಖ್ಯ" ಎಂದು ಮೀರ ಅವರ ಜಗಳವನ್ನು ಕೊನೆಗಾಣಿಸಿದಳು.

ಶುಕ್ರವಾರ ಸಂಜೆ ಐದು ಗಂಟೆಗೆ ನರ್ಸಿಂಗ್ ಹೋಂ, ಫಾರ್ಮಸಿಯ ಪ್ರಾರಂಭೋತ್ಸವ ವೈಭವದಿಂದ ನೆರವೇರಿತು. ಗೋಪಿ, ವಿಜಯರ ಗೆಳೆಯರು, ಆತ್ಮೀಯರು ಉತ್ಸವದಲ್ಲಿ ಭಾಗವಹಿಸಿದ್ದರು. ಆಹ್ವಾನ ಪತ್ರಿಕೆ

ಅವರ ತಾಯಿತಂದೆಗಳಿಗೆ ತಲುಪಿದ್ದರೂ ಅವರಲ್ಲಿ ಯಾರೂ ಬಂದಿರಲಿಲ್ಲ.

ಶಾಮು ಶನಿವಾರವೇ ಹಳ್ಳಿಗೆ ಹಿಂದಿರುಗಬೇಕೆಂದಿದ್ದರೂ ಗೋಪಿ ಅವನನ್ನು ಹೋಗಗೊಡಲಿಲ್ಲ. ಅವನ ಒತ್ತಾಯಕ್ಕೆ ಕಟ್ಟುಬಿದ್ದು ಶಾಮು ಮತ್ತೊಂದು ದಿನ ಅಲ್ಲಿ ನಿಲ್ಲಬೇಕಾಯಿತು.

ಶನಿವಾರ ರಾತ್ರಿ ಊಟ ಮುಗಿಸಿ ಎಲ್ಲರೂ ವರಾಂಡದಲ್ಲಿ ಮಾತ ನಾಡುತ್ತಾ ಕುಳಿತಿದ್ದರು. ಮಾತಿಗೆ ಮಾತು ಬಂದು ಶಾಮು ಹೇಳಿದ.

ಮೀರ ಇತ್ತೀಚೆಗೆ ತುಂಬಾ ದುರ್ಬಲಳಾಗ್ತಿದಾಳೆ. ಹಳ್ಳಿಗಳಲ್ಲಿ ಸುತ್ತಾಡುವುದು ಅವಳಿಂದ ಸಾಧ್ಯವಿಲ್ಲ. ಈಚೀಚೆಗೆ ಕೆಲಸವೂ ಜಾಸ್ತಿ ಯಾಗುತ್ತಿದೆ. ನನಗೇನು ಮಾಡಬೇಕೋ ತಿಳಿಯುವುದಿಲ್ಲ."

" ಅದಕ್ಕೆ ಯಾಕೆ ಇಷ್ಟೊಂದು ಯೋಚನೆ ಮಾಡಬೇಕು ಶಾಮಣ್ಣ ? ನೀವು ಸ್ವಲ್ಪ ಹಣ ಖರ್ಚು ಮಾಡಲು ಮನಸ್ಸು ಮಾಡಲು ತಯಾರಿದ್ದರೆ ನಾನು ನಿಮಗೊಂದು ಸಲಹೆ ಕೊಡ್ತೀನಿ. ನೀವು ಮನಸ್ಸು ಮಾಡಿದರೆ ಅದೇನೂ ಅಷ್ಟು ದೊಡ್ಡದಲ್ಲ " ಎಂದ ಗೋಪಿ.

" ಏನದು ಹೇಳಿ."

"ನೀವೇಕೆ ಒಂದು ಕಾರು ತೆಗೆದುಕೊಳ್ಳಬಾರದು? ಮೀರಾ ಡ್ರೈವಿಂಗ್ ಕಲಿತುಕೊಂಡರೆ ಡ್ರೈವರನ್ನು ಇಟ್ಟುಕೊಳ್ಳಬೇಕಾಗೇ ಇಲ್ಲ. ಅಲ್ಲವೇ ?"

ಶಾಮು ಮಾತನಾಡಲಿಲ್ಲ.

" ಹೌದು ಅದೇ ಸರಿಯಾದ ಯೋಚನೆ. ಆಗೀಗ್ಗೆ ಮೀರ ತುಂಬ ಇಳಿದುಹೋಗಿದಾರೆ. ಒಂದು ಕಾರು ತೆಗೆದುಕೊಳ್ಳುವುದು ನಿಮಗೇನು ಕಷ್ಟವಲ್ಲ. ಹಾಗೆ ಮಾಡಿ " ಎಂದಳು ವಿಜಯ.

" ಒಂದು ಕಾರು ಎಷ್ಟಾಗಬಹುದು ?" ಶಾಮು ಕೇಳಿದ.

" ಒಂದು ಒಳ್ಳೆಯ ಕಾರಿಗೆ ಸುಮಾರು ಹತ್ತು ಸಾವಿರ ಆಗಬಹುದು. ನಿಮಗೆ ಅದೇನು ದೊಡ್ಡ ಖರ್ಚಲ್ಲ."

ಹತ್ತು ಸಾವಿರ! ನಿಜ. ಶಾಮುವಿಗೆ ಅದು ದೊಡ್ಡ ಖರ್ಚಾಗಿರ ಲಿಲ್ಲ. ಮೊನ್ನೆ ಹನ್ನೆರಡು ಸಾವಿರ ಕೊಟ್ಟು ಒಂದು ತೆಂಗಿನ ತೋಟ ತೆಗೆದು ಕೊಳ್ಳಲಿಲ್ಲವೇ ? ತೆಂಗಿನ ತೋಟದಿಂದ ಮತ್ತೆ ಹಣ ಸಂಪಾದಿಸಬಹುದು. ಆದರೆ ಕಾರಿನಿಂದಲೋ ? ಆದರೆ ಮೀರಳಿಗೆ ಕಾರಿನಿಂದ ಬಹಳ ಸೌಕರ್ಯ ಸಿಕ್ಕಬಹುದು. ಅವಳ ಸುತ್ತಾಟ, ಕೆಲಸ ನೋಡಿದಾಗ ತನಗೆ ಅಯ್ಯೋ ಎನ್ನಿಸುತ್ತಿರಲಿಲ್ಲವೇ ? ಮೀರಳಿಗೆ ಕಾರನ್ನು ತೆಗೆದುಕೊಡುವುದೇ ಸರಿಯಾದ ಯೋಚನೆ.

ಆದರೆ ಸರಸಿ ಏನನ್ನುವಳೋ ? ಈ ವಿಷಯ ತೆಗೆದ ಕೂಡಲೇ ಇನ್ನು ಎಷ್ಟು ರಂಪ, ಪಂಚಾಯಿತಿ, ಜಗಳಗಳೋ ? ಏನಾದರಾಗಲಿ. ಸರಸಿಯನ್ನು ಎದುರಿಸಿಯಾದರೂ........

"ನೀವೇನು ಹೇಳ್ತೀರಾ ಮೀರಾ ?" ಗೋಪಿ ಕೇಳಿದ.

ಮೀರಳ ಮನಸ್ಸೂ ಶಾಮುವಿನ ಯೋಚನೆಯ ದಿಕ್ಕಿನಲ್ಲಿ ಓಡುತ್ತಿತ್ತು. ತನ್ನ ಬಗ್ಗೆ ಶಾಮು ಎಂದೂ ಕೈ ಬಿಗಿ ಮಾಡಿರಲಿಲ್ಲ. ತನಗಾಗಿ ಅವನು ಹಣವನ್ನು ನೀರಿನಂತೆ ಖರ್ಚು ಮಾಡುತ್ತಿದ್ದ. ಆದರೆ ಸರಸಿ ? ಈಗಾಗಲೇ ಅವಳು ಮನೆಯಲ್ಲಿ ಹೆಜ್ಜೆ ಹೆಜ್ಜೆಗೂ ಸರಸಿಯ ವ್ಯಂಗ್ಯ ಮಾತುಗಳು, ಅಣಕದ ನುಡಿಗಳನ್ನು ಕೇಳಿ ಜುಗುಪ್ಸೆಗೊಂಡಿದ್ದಳು. ಆಗ ಅವಳು ಯಾವ ಮಾತೂ ಆಡದೆ ಎಲ್ಲವನ್ನೂ ಮೂಕಿಯಂತೆ ಸಹಿಸಿಕೊಂಡಿದ್ದಳು.

ಹತ್ತು ಸಾವಿರ ಖರ್ಚು ಮಾಡಿ ತನಗಾಗಿ ಶಾಮು ಒಂದು ಕಾರನ್ನು ಕೊಳ್ಳಲಿರುವನೆಂದು ಸರಸಿ ಕೇಳಿದರೆ ಮನೆ ರಣರಂಗವಾಗಬಹುದಲ್ಲವೇ ?

"ಗಂಡ, ಹೆಂಡತಿ ಇಬ್ಬರೂ ಯೋಚನೆ ಮಾಡುತ್ತಾ ಕುಳಿತುಬಿಟ್ಟರು" ಎಂದು ವಿಜಯ ಅವರನ್ನು ಹಾಸ್ಯಮಾಡಿದಳು.

ಶಾಮು, ಮೀರ ಎಚ್ಚರಗೊಂಡರು.

ಶಾಮುವಿನ ಮನಸ್ಸಿನಲ್ಲಿ ಗೋಪಿಯ ಸಲಹೆ ಬಲವಾಗಿ ನಾಟಿಬಿಟ್ಟಿತು. ಹಳ್ಳಿಗೆ ಹಿಂತಿರುಗುವಾಗ ಅವನ ಮನಸ್ಸನ್ನು ಆಕ್ರಮಿಸಿದ್ದ ಯೋಚನೆ ಅದೊಂದೇ. ಸರಸಿಯನ್ನು ಎದುರಿಸಿ ಹತ್ತು ಸಾವಿರ ಖರ್ಚು ಮಾಡಲು ಅವನು ಸ್ವಲ್ಪವಾದರೂ ಹಿಂಜರಿಯುತ್ತಿರಲಿಲ್ಲ. ಅದು ತನ್ನ ಹಣವಲ್ಲವೇ ? ಆದರೆ ಮನೆಯಲ್ಲಿ ಮುಸುಗುವ ಅಸಮಾಧಾನ, ಜಗಳ, ವಾಗ್ವಾದಗಳನ್ನು ನೆನಸಿಕೊಂಡರೇ ಅವನಿಗೆ ಬೇಸರವಾಗುತ್ತಿತ್ತು. ಈಗಾಗಲೇ ಸರಸಿ ಮೀರಳ ಕೆಲಸದ ಬಗ್ಗೆ, ಅದಕ್ಕಾಗಿ ಆಗಾಗ್ಗೆ ಕೈಯಿಂದ ತೆರಬೇಕಾಗಿರುವ ದಂಡದ ಹಲವಾರು ಕಟುನುಡಿಗಳನ್ನಾಡಿದ್ದಳು.

ಶಾಮು ಮೀರಳ ಕಡೆ ನೋಡಿದ. ಟ್ರೈನಿನ ಕಿಟಕಿಗೊರಗಿ ಮೀರ ಕಣ್ಣು ಮುಚ್ಚಿ ಕುಳಿತಿದ್ದಳು. ಶಾಮುವಿಗೆ ಅವಳನ್ನು ನೋಡಿ ಕನಿಕರವಾಯಿತು.

ಬಿಸಲಿನಲೆದಾಟದಿಂದ ಅವಳ ಮೊದಲಿನ ದೇಹಕಾಂತಿ ಮಾಯವಾಗಿತ್ತು. ತನ್ನ ಶಕ್ತಿ ಮೀರಿ ದುಡಿಯುತ್ತಿದ್ದುದರಿಂದ ಅವಳು ತನ್ನ ಹಿಂದಿನ ಆರೋಗ್ಯ, ಮೈಕಟ್ಟನ್ನು ಕಳೆದುಕೊಂಡು ಕೃಷವಾಗಿದ್ದಳು.

"ಮೀರಾ."

ಮೀರ ಕಣ್ಣು ಬಿಟ್ಟಳು.

"ಇನ್ನೊಬ್ಬರಿಗೆ ಆರೋಗ್ಯ ಕೊಡುವವರು ತಮ್ಮ ಆರೋಗ್ಯ ನೋಡಿ ಕೊಳ್ಳಬಾರದೇ ?"

ಮೀರ ಬದಲು ಹೇಳದೇ ನಕ್ಕಳು. ಶಾಮು ಪುನಃ ಕೇಳಿದ

"ಕಾರಿನ ವಿಷಯಕ್ಕೆ ಏನು ಹೇಳ್ತೀಯಾ ?"

"ಮನೇನ ಯುದ್ಧರಂಗ ಮಾಡಬೇಕೂಂತಿದ್ದರೆ ಆ ವಿಷಯ ಮಾತ ನಾಡಿ ಅನಾವಶ್ಯಕವಾಗಿ ಜಗಳ ತೆಗೆಯುವುದು ನನಗಾಸೆಯಿಲ್ಲ."

"ಆದರೆ ನೀನು ಹೇಗಾಗಿದೀಯ ಗೊತ್ತೆ ?"

"ಅದು ಬೇರೆಯ ವಿಷಯ. ನೀವು ನನಗಾಗಿಯಾದರೂ ಮನೆಯಲ್ಲಿ ಕಾರಿನ ವಿಷಯ ಎತ್ತಬೇಡಿ."

"ಹಣವನ್ನೇನೂ ಸರಸಿ ತನ್ನ ಕೈಯಿಂದ ಕೊಡಬೇಕಾಗಿಲ್ಲ. ನನ್ನ ಹಣವನ್ನು ನಾನು ಮನಸ್ಸು ಬಂದ ಹಾಗೆ ಖರ್ಚು ಮಾಡಲು ಅವಳದೇನು ಅಡ್ಡಿ ?"

"ಅವಳು ಮಕ್ಕಳಿಗೆ ಅನ್ಯಾಯವಾಗಬಾರದೆಂದು ಹಾಗೆ ಹೇಳುತ್ತಾಳೆ. ಅವಳು ಹೇಳುವುದರಲ್ಲಿ ತಪ್ಪೇನಿಲ್ಲ, ನೀವು ಕಾರಿನ ವಿಷಯ ಅವಳೆದುರಿಗೆ ಆಡಿದರೆ ನನ್ನಾಣೆಯಿದೆ."

ಶಾಮು ಸುಮ್ಮನಾದ. ಆದರೆ ಮನಸ್ಸು ಮಾರ್ಗವನ್ನು ಹುಡುಕು ತ್ತಲೇ ಇತ್ತು.

ಮೀರಳ ಮಾತಿಗೆ ಬೆಲೆಕೊಟ್ಟು ಶಾಮು ಮನೆಯಲ್ಲಿ ಕಾರು ತೆಗೆದು ಕೊಳ್ಳುವ ವಿಷಯವನ್ನು ಎತ್ತಲಿಲ್ಲ.

ದಿನಗಳು ಉರುಳಿ ತಿಂಗಳುಗಳಾದವು.

ಮೀರ ಮೊದಲಿನಂತೆ ದುಡಿಯುತ್ತಿದ್ದಳು. ನಾಲ್ಕು ಐದು ಮೈಲಿ ಯಿರುವ ಹಳ್ಳಿಗೆ ನಡೆದುಕೊಂಡು ಹೋಗುತ್ತಿದ್ದಳು. ಇತರ ರೋಗಿಗಳು ಅವಳಿದ್ದಲ್ಲಿಗೇ ಬಂದರೂ, ಹೆರಿಗೆ ಕೇಸುಗಳಿಗೆ ಅವಳು ಅವರಿದ್ದ ಸ್ಥಳಕ್ಕೇ ಹೋಗಿ ಬರಬೇಕಾಗಿತ್ತು. ತನ್ನ ಜೀವನವನ್ನೇ ಒತ್ತೆಯಿಟ್ಟು ಅವಳು ಕೆಲಸ ಮಾಡುತ್ತಿದ್ದುದನ್ನು ನೋಡಿ ಶಾಮುವಿಗೆ ಮರುಕ ಉಕ್ಕಿ ಬರುತ್ತಿತ್ತು.

"ಗಾಡಿಯಲ್ಲಿ ಹೋಗಿ ಬಾ" ಎಂದು ಶಾಮು ಹೇಳಿದಾಗ ಮೀರ

"ಪರವಾಗಿಲ್ಲ. ಹಳ್ಳಿ ಮೂರು ಮೈಲಿ ಇದೆ. ಕುಲುಕಾಡಿಕೊಂಡ ಗಾಡಿಯಲ್ಲಿ ಹೋಗುವ ಬದಲು ನಡೆದುಕೊಂಡೇ ಹೋಗಿಬರುತ್ತೇನೆ. ನನಗೆ ಅದೇ ಅನುಕೂಲ" ಎನ್ನುತ್ತಿದ್ದಳು.

ಒಂದು ಮಧ್ಯಾಹ್ನ ಮೀರ ತಿಂಡಿ ತಿನ್ನುತ್ತಿದ್ದಾಗ ಚಿಕ್ಕ ಹುಡುಗನೊಬ್ಬ ಓಡಿ ಬಂದು ಗಾಬರಿಯಿಂದ

"ಈಗಲೇ ಬರಬೇಕಂತೆ. ನಮ್ಮ ಅಕ್ಕನಿಗೆ ಜ್ವರ ಜಾಸ್ತಿಯಾಗಿ ಹೇಗೇಗೋ ಮಾತಾಡ್ತಿದಾಳೆ" ಎಂದ.

ಮೀರ ತಿಂಡಿಯನ್ನು ಬಿಟ್ಟು ತನ್ನ ಬ್ಯಾಗನ್ನು ತೆಗೆದುಕೊಂಡು ಹೊರಟಳು. ಉಸಿರಾಡಲು ಕಷ್ಟಪಡುತ್ತಿದ್ದ ಹುಡುಗಿಗೆ ಇಂಜಕ್ಷನ್ ಕೊಟ್ಟು ಮೀರ ಅವಳ ಬಳಿಯೇ ಸ್ವಲ್ಪ ಹೊತ್ತು ಕುಳಿತಿದ್ದಳು. ಅನಂತರ ಹುಡುಗಿ ಸಲೀಸಾಗಿ ಉಸಿರಾಡಲು ಪ್ರಾರಂಭಿಸಿದಳು. ಹುಡುಗಿಯ ತಾಯಿಯಂತೂ ಮೀರಳ ಕಾಲುಗಳನ್ನು ಹಿಡಿದುಕೊಳ್ಳುವುದೊಂದು ಬಾಕಿ.

"ನಿಮಗಿಂತ ನಾನು ಚಿಕ್ಕವಳು. ನನ್ನ ಕಾಲು ಹಿಡಿಯಬೇಡಿ. ಆಯಸ್ಸಿದ್ದರೆ ನಾನು ಬರದಿದ್ದರೂ ನಿಮ್ಮ ಹುಡುಗಿ ಬದುಕಿಕೊಳ್ಳುತ್ತಿದ್ದಳು" ಎಂದು ಹೇಳಿ ಅಲ್ಲಿಂದ ಹೊರಬಿದ್ದಳು.

ನೆತ್ತಿಯ ಮೇಲೆ ಸೂರ್ಯ ಸುಡುತ್ತಿದ್ದ. ಹೊರಡುವ ಆತುರದಲ್ಲಿ ಮೀರ ತಾನು ಸಾಧಾರಣವಾಗಿ ತೆಗೆದುಕೊಂಡು ಹೋಗುತ್ತಿದ್ದ ಛತ್ರಿಯನ್ನು ಮರೆತುಬಿಟ್ಟಿದ್ದಳು. ಹಿಂದಿನ ದಿನ ಆರು ಮೈಲಿ ದೂರದಲ್ಲಿದ್ದ ಹಳ್ಳಿಯೊಂದಕ್ಕೆ ಅವಳು ಹೋಗಿ ಬಂದಿದ್ದಳು. ಗಾಡಿಯಲ್ಲಿಯೇ ಹೋಗಿ ಬಂದಿದ್ದರೂ ಅತಿ ಕುಲುಕಾಟದಿಂದಾಗಿ ಅವಳಿಗೆ ತುಂಬಾ ಆಯಾಸವಾಗಿತ್ತು.

ಮೀರಳ ಕಣ್ಣಿಗೆ ಕತ್ತಲು ಕವಿದಂತಾಯಿತು. ಅವಳ ಹೆಜ್ಜೆ ತಡೆಯಿತು. ಮೀರ ನಿಧಾನವಾಗಿ ಕುಸಿದಳು.

ಅವಳಿಗೆ ಎಚ್ಚರವಾದಾಗ ಅವಳೊಡನೆ ಬಂದಿದ್ದ ಹುಡುಗ 'ಡಾಕ್ಟರೇ' ಎಂದು ಕೂಗುತ್ತಾ ಅಳುತ್ತಿದ್ದ. ಒಂದು ಕ್ಷಣದಲ್ಲಿ ಚೇತರಿಸಿಕೊಂಡು ಮೀರ ಮೇಲೆದ್ದಳು.

"ತುಂಬಾ ಹೊತ್ತು ಮಲಗಿಬಿಟ್ಟಿದ್ದೆನಾ ?"

"ಇಲ್ಲ ಡಾಕ್ಟರ್. ಒಂದು ಕ್ಷಣ ಹಾಗೇ ಮಲಗಿದ್ದಿರಿ ಅಷ್ಟೆ."

ಮನೆ ತಲುಪಿದ ಕೂಡಲೇ ಆ ಹುಡುಗ ವರಾಂಡದಲ್ಲಿದ್ದ ಶಾಮುವಿಗೆ ಮೀರ ಬವಳಿ ಬಂದಂತಾಗಿ ಬಿದ್ದುದನ್ನು ವರದಿ ಮಾಡಿದ. ಆ ಗಳಿಗೆಯೇ ಶಾಮು ಕಾರನ್ನು ತೆಗೆದುಕೊಳ್ಳುವುದಾಗಿ ನಿಶ್ಚಯ ಮಾಡಿದ. ಈ ಬಾರಿ ಮೀರಳೂ ಶಾಮುವನ್ನು ಮೊದಲಿನಂತೆ ವಿರೋಧಿಸಲಿಲ್ಲ. ಅವಳು

"ಕಾರು ತಗೊಂಡರೂ ಕುಲುಕಾಡೋದೇನು ತಪ್ಪೋದಿಲ್ಲ" ಎಂದು ಮಾತ್ರ ಹೇಳಿದಳು.

"ಬಸ್ ರೂಟಿನಲ್ಲಿ ಹೋದರೆ ಏನೂ ಆಗೋದಿಲ್ಲ. ಹತ್ತಿರದ ದಾರೀಂತ ನೀನು ಅಡ್ಡದಾರೀಲಿ ಹೋಗೋದರಿಂದ ಹಾಗಾಗುತ್ತದೆ. ಬಸ್ ರೂಟ್ ಸ್ವಲ್ಪ ಬಳಸಾದರೂ ರಸ್ತೆಗಳು ಚೆನ್ನಾಗಿವೆ" ಎಂದ ಶಾಮು.

ಸರಸಿಯ ಕಿವಿಗೆ ಕಾರಿನ ಸುದ್ದಿ ಬಿದ್ದ ಕೂಡಲೇ ಅವಳು ಕೆದರಿದ ಕೆಂಡವಾದಳು.

"ನೀವು ಏನಾದರೂ ಮಾಡಿಕೊಳ್ಳಿ. ನಾನು ಮಕ್ಕಳನ್ನು ಕರೆದು ಕೊಂಡು ತವರು ಮನೆಗೆ ಹೋಗುತ್ತೇನೆ" ಎಂದು ಸರಸಿ ಶಾಮುವನ್ನು ಹೆದರಿಸಿದಳು.

"ನೀನು ಧಾರಾಳವಾಗಿ ಹೋಗು. ಆದರೆ ಸುಬ್ರಹ್ಮಣ್ಯ, ಕಾಮಾಕ್ಷಿ ಯರನ್ನು ನೀನು ಕನಸಿನಲ್ಲಿಯೂ ಕರೆದುಕೊಂಡು ಹೋಗಲಾರೆ" ಎಂದು ಶಾಮು ಅವಳಷ್ಟೇ ಖಂಡಿತವಾಗಿ ನುಡಿದ.

"ಮಕ್ಕಳ ಮೇಲೆ ನಿಮಗಿರುವ ಪ್ರೀತಿ ಅಷ್ಟರಲ್ಲಿಯೇ ಇದೆ. ಪ್ರೀತಿ ಇದ್ದಿದ್ದರೆ ನೀವು ಹೀಗೆ ಹಣಾನ ಹಾಳುಮಾಡುತ್ತಿದ್ದಿರಾ ?"

"ನೋಡು ಸರಸಿ, ಮೀರಾ ನಿನಗಿಂತಲೂ ಮೊದಲು ನನ್ನ ಕೈಹಿಡಿ ದವಳು. ಮಗುವನ್ನು ಕಳೆದುಕೊಂಡ ತಾಯಿ ಅವಳು. ಅದೊಂದನ್ನು ನಾನು ದೃಷ್ಟಿಯಲ್ಲಿಟ್ಟುಕೊಂಡು ಅವಳನ್ನು ಓದಿಸಿದೆ. ನನ್ನ ಆಸ್ತಿಯಲ್ಲಿ ಅರ್ಧ ಭಾಗ ನ್ಯಾಯವಾಗಿ ಅವಳಿಗೇ ಸೇರಬೇಕಾಗಿದೆ."

"ಪೂರ್ತಿ ಅವಳಿಗೇ ಬರೆದುಕೊಡಿ. ನಾನೇನು ಬೇಡ ಎನ್ನಲಿಲ್ಲ. ಅಮ್ಮನ ಮನೇಲಿ ಹಿಟ್ಟು, ಅಂಬಲಿ ಕುಡಿದುಕೊಂಡು ನಾನು, ನನ್ನ ಮಕ್ಕಳು ಕಾಲ ಹಾಕುತ್ತೇವೆ."

"ಮಕ್ಕಳ ವಿಷಯ ಬಿಟ್ಟುಬಿಡು. ನೀನೇನಾದರೂ ತವರುಮನೆಗೆ ಹೋದರೆ ಅಲ್ಲಿಯೇ ಸಾಯುವವರೆಗೆ ಇರಬೇಕಾಗುತ್ತದೆ, ನಿನಗೂ ಮಕ್ಕ ಳಿಗೂ ಮುಖ ತೋರಿಸಿಬಿಡುತ್ತೇನೆ. ನಾನು ನಿನಗಿಂತಲೂ ಹಟವಾದಿ ಎಂಬು ದನ್ನು ಮರೆಯಬೇಡ."

ಅಂದಿನಿಂದ ಮೀರಳನ್ನು ನೋಡಿದರೆ ಸರಸಿ ಮುಖ ತಿರುಗಿಸಿಕೊಂಡು ಹೋಗುತ್ತಿದ್ದಳು. ಮೀರ ತಾನಾಗಿಯೇ ಅವಳನ್ನು ಮಾತನಾಡಿಸಿದರೂ ಸರಸಿ ಮಾತನಾಡದೇ ಇರುತ್ತಿದ್ದಳು, ಆದರೆ ತನ್ನ ಮೇಲಿನ ಸಿಟ್ಟನ್ನು ಅವಳು ಮಕ್ಕಳ ಮೇಲೆ ತೋರಿಸುವುದನ್ನು ನೋಡಿದಾಗ ಮಾತ್ರ ಮೀರಳಿಗೆ ಯಾತನೆಯಾಯಿತು.

ಒಂದು ಸಂಜೆ ಮೀರ ಹೊರಗೆ ಹೊರಟಾಗ ಸುಬ್ರಮಣ್ಯ

" ದೊಡ್ಡಮ್ಮ, ನಾನೂ ಬರ್ತೀನಿ " ಎಂದ

ಮಕ್ಕಳಿಗೆ ದೊಡ್ಡಮ್ಮನಲ್ಲಿ ಅತಿ ಸಲಿಗೆಯಿತ್ತು. ಅವಳು ಸರಸಿ ಯಂತೆ ಅವರನ್ನು ಎಂದೂ ದಂಡಿಸುತ್ತಿರಲಿಲ್ಲ, ಮಗುವಿನ ಮಾತು ಕೇಳಿ ಮೀರ

" ಆಗಲಿ. ತಲೆ ಬಾಚುತ್ತೇನೆ ಬಾ " ಎಂದಳು.

ಸುಬ್ರಮಣ್ಯನಿಗಿನ್ನೂ ಜುಟ್ಟು ಬಿಡಿಸಿರಲಿಲ್ಲವಾದುದರಿಂದ ಅವನ ತಲೆ ಯಲ್ಲಿ ಹುಡುಗಿಯ ತಲೆಯಲ್ಲಿರುವಂತೆ ಹೇರಳವಾಗಿ, ನೀಳವಾಗಿ ಕೂದಲು ಬೆಳೆದಿತ್ತು. ತಿರುಪತಿಯಲ್ಲಿಯೇ ಅವನ ಚೌಲವಾಗಬೇಕೆಂದು ಹರಕೆ ಯಿದ್ದುದರಿಂದ ಅವನಿಗೆ ನೆತ್ತಿಯ ಮೇಲೆ ಜಡೆ ಹೆಣೆದು ಹೂ ಮುಡಿಸು ತ್ತಿದ್ದರು.

ಮೀರ ಬಾಚಣಿಗೆ ತೆಗೆದುಕೊಂಡು ಹುಡುಗನ ನೆತ್ತಿಯ ಮೇಲೆ ಜಡೆ ಹೆಣೆದು ಹೂ ಮುಡಿಸಿ, ಶುಭ್ರವಾದ ಬಟ್ಟೆಗಳನ್ನು ಹಾಕಿದಳು. ದೊಡ್ಡಮ್ಮನ ಜೊತೆ ತಿರುಗಾಡುವುದೆಂದರೆ ಸುಬ್ರಮಣ್ಯನಿಗೆ ಎಲ್ಲಿಲ್ಲದ ಆನಂದ. ಅವನು ಕೇಳಿದ ಪ್ರಶ್ನೆಗಳಿಗೆ ಸ್ವಲ್ಪವೂ ಬೇಜಾರು ಪಟ್ಟುಕೊಳ್ಳದೆ ಮೀರ ಉತ್ತರ ಹೇಳುತ್ತಿದ್ದಳು. ಸುತ್ತಲಿನ ಪದಾರ್ಥಗಳಲ್ಲಿ ಅವನ ಕುತೂಹಲ ಜಾಗ್ರತ ಗೊಂಡಿತ್ತು. ಆದರೆ ಸರಸಿ ಅವನ ಕುತೂಹಲವನ್ನು " ನಿನ್ನ ಯಾಕೆ, ಏನು ಎನ್ನೋದಕ್ಕೆ ನಾನು ಉತ್ತರ ಹೇಳಲಾರೆ " ಎಂದು ಹೇಳಿ ಚಿವುಟಿಹಾಕು ತ್ತಿದ್ದಳು. ಆದರೆ ಮೀರ ಎಂದೂ ಅವನ ಉತ್ಸಾಹವನ್ನು ತುಳಿದಿರಲಿಲ್ಲ. ಆದುದರಿಂದಲೇ ಅವನಿಗೆ ದೊಡ್ಡಮ್ಮನೊಡನೆ ಹೊರಡುವುದೆಂದರೆ ಹಬ್ಬ.

ಮೀರಳ ಕಿರುಬೆರಳನ್ನು ಹಿಡಿದು ಅವನು ಹೊರಟಾಗ ಸರಸಿ ಎದುರಿಗೆ ಬಂದಳು. ಮೀರಳ ಕಡೆ ನೋಡದೇ ಸರಸಿ

" ಎಲ್ಲಿಗೆ ಹೋಗ್ತೀಯೋ ?" ಎಂದಳು.

" ಬೊಂಬ್ಬ ಹೋಗ್ತೀನಿ."

" ಏನೂ ಬೇಡ. ಮನೆಯಲ್ಲಿ ಸುಮ್ಮನೆ ಬಿದ್ದಿರು."

" ಊಹೂಂ." ಮುದ್ದಿನಿಂದ ಸುಬ್ರಮಣ್ಯ ಮೊಂಡನಾಗಿದ್ದ.

" ನಾನು ಕರ್ಕೊಂಡು ಹೋಗ್ತೀನಿ " ಸರಸಿ ಕರೆದಳು.

" ಬೇಡ. ನೀನು ಬೇಡಾ." ಸುಬ್ರಮಣ್ಯ ರಾಗ ಎಳೆದ.

ಮಗ ತನ್ನನ್ನು ದೂರ ಮಾಡಿ ಮೀರಳೊಡನೆ ಹೊರಟಿರುವುದನ್ನು ಕಂಡು ಸರಸಿ ಕುಪಿತಳಾದಳು. ಉಕ್ಕಿ ಬಂದ ಕ್ರೋಧದಲ್ಲಿ ಸರಸಿ ಸುಬ್ರ ಮಣ್ಯನಿಗೆ ಎರಡೇಟು ಹಾಕಿದಳು. ಸುಬ್ರಮಣ್ಯ ನೆಲದ ಮೇಲೆ ಬಿದ್ದು

ಉರುಳಾಡಿದ. ಅವನ ತಲೆಯ ಹೂವು ನಲುಗಿ ಉದುರಿತು. ಶುಭ್ರವಾದ ಬಟ್ಟೆ ಕೊಳೆಯಾಯಿತು. ಕಣ್ಣಿಗೆ ಹಚ್ಚಿದ್ದ ಕಪ್ಪು ಕಣ್ಣೀರಿನೊಡನೆ ಕೆನ್ನೆಯ ಮೇಲಿಳಿದು ಬಂತು.

"ಹಾಳಾದೋವು ಎಲ್ಲಾ ನನ್ನ ಶತ್ರುಗಳು. ಹೇಳಿದ ಹಾಗೆ ಕೇಳ ದಿದ್ದ ಮೇಲೆ ಎಂತಹ ಮಕ್ಕಳು. ನನ್ನ ಭಾಗಕ್ಕೆ ಎಲ್ಲಾ ಮಾರಿಗಳು" ಎಂದು ಸರಸಿ ಮಗನಿಗೆ ಮತ್ತೊಂದು ಏಟು ಹಾಕಿದಳು. ತನ್ನ ಮೇಲಿನ ರೋಷಕ್ಕಾಗಿ ಮಗುವನ್ನು ದಂಡಿಸುವುದನ್ನು ನೋಡಲಾರದೇ ಮೀರ ಸುಬ್ರ ಮಣ್ಯನನ್ನು ಎತ್ತಿಕೊಂಡಳು.

"ನನ್ನ ಮೇಲಿನ ಕೋಪಕ್ಕೆ ಅವನನ್ನು ಯಾಕೆ ಹೊಡೆಯುತ್ತೀಯಾ?"

"ನನ್ನ ಮಗನ್ನ ನಾನು ಏನಾದರೂ ಮಾಡ್ಕೋತೀನಿ, ಅವನು ಇವತ್ತು ನಿಮ್ಮೊ ಜೊತೆ ಹೋದರೆ ಕಾಲು ಮುರಿಯುತ್ತೀನಿ."

"ಅಷ್ಟೊಂದು ಸಾಹಸದ ಕೆಲಸ ಬೇಡಮ್ಮ," ಎನ್ನುತ್ತಾ ಮೀರ ಸುಬ್ರಮಣ್ಯನನ್ನು ಕೆಳಗಿಳಿಸಿ ಹೊರಟುಹೋದಳು.

ಮೀರ ಯಾವುದನ್ನೂ ಶಾಮುವಿಗೆ ತಿಳಿಸದಿದ್ದರೂ, ವೆಂಕಮ್ಮನವರು ಅವನು ಮನೆಗೆ ಬಂದಕೂಡಲೇ ಎಲ್ಲ ವಿಷಯಗಳನ್ನೂ ತಿಳಿಸಿದರು. ವೆಂಕಮ್ಮನವರಿಗೂ, ಸರಸಿಗೂ ಎಂದೂ ಸರಿ ಬಂದಿರಲಿಲ್ಲ. ಮೀರ ಅವ ರನ್ನು ಕಾಣುವ ದೃಷ್ಟಿಗೂ, ಸರಸಿ ಅವರನ್ನು ಕಾಣುವ ದೃಷ್ಟಿಗೂ ಬಹಳ ವ್ಯತ್ಯಾಸವಿತ್ತು. ಹಿಂದೆ ಯಾವಾಗಲೋ ಒಂದು ಬಾರಿ ಯಾವುದೋ ಸಣ್ಣ ಕಾರಣಕ್ಕಾಗಿ ವೆಂಕಮ್ಮನವರ ಮೇಲೆ ರೇಗಿಕೊಂಡಿದ್ದ ಸರಸಿ

"ಅಡಿಗೆಯವರನ್ನ ಎಲ್ಲಿಟ್ಟರಬೇಕೋ ಅಲ್ಲಿಟ್ಟರಬೇಕು, ಅತಿ ಸಲಿಗೆ ಕೊಟ್ಟರೆ ಹೀಗೆ ಆಗೋದು" ಎಂದು ಮೂದಲಿಸಿದ್ದಳು. ಆ ಮಾತು ಕಿವಿಗೆ ಬಿದ್ದಾಗ ವೆಂಕಮ್ಮನವರಿಗೆ ತಳಮಳವಾಯಿತು. ಅವರು ಸರಸಿಯ ಎದುರಿಗೆ ಬಂದು

"ತಾಯೀ, ನೀನು ನಿನ್ನ ಸ್ವಭಾವಕ್ಕನುಗುಣವಾದ ಮಾತನ್ನಾಡಿದೆ. ಶಾಮುವಾಗಲಿ, ಮೀರಳಾಗಲಿ ಒಂದು ದಿನ ಇಂತಹ ಮಾತನಾಡಿರಲಿಲ್ಲ. ಅವರು ಎಷ್ಟಾಗಲಿ ದೊಡ್ಡ ಮನುಷ್ಯರು" ಎಂದರು.

ಅವರ ಮಾತಿನಿಂದ ಸರಸಿಗೆ ರೇಗಿದರೂ ಅವಳು ಅದನ್ನೇ ದೊಡ್ಡ ಹಗರಣ ಮಾಡಲು ಹಿಂಜರಿದಳು. ಶಾಮುವಿಗೆ ವೆಂಕಮ್ಮನವರನ್ನು ಕಂಡರೆ ಎಷ್ಟು ಗೌರವವಿದೆಯೆಂಬುದು ಅವಳಿಗೇ ತಿಳಿದಿತ್ತು.

ಅಂದಿನಿಂದ ವೆಂಕಮ್ಮನವರಿಗೂ, ಸರಸಿಗೂ ಎಣ್ಣೆ ಸೀಗೇಕಾಯಿ.

ಅವರು ಸರಸಿಯೆದುರಿಗೆ ಬೇಕೆಂದು ಮೀರಳನ್ನು ಹೊಗಳಿ ಹಾಡುತ್ತಿದ್ದರು. 'ನೀನು ಮನೆ ಯಜಮಾನಿ' ಎಂದು ಅವರು ಹೇಳಿದಾಗಲೆಲ್ಲಾ ಸರಸಿಗೆ ಹೊಟ್ಟೆಯಲ್ಲಿ ಮೆಣಸಿನಕಾಯಿ ಕಿವುಚಿದಂತಾಗುತ್ತಿತ್ತು.

ವೆಂಕಮ್ಮನವರಿಂದ ನಡೆದ ಸಂಗತಿ ತಿಳಿದು ಶಾಮು ಕಾಲಭೈರವನಾದ. ಮಕ್ಕಳ ಮೇಲೆ ಎಂದೂ ಅವನು ಕೈಮಾಡಿರಲಿಲ್ಲ. ನಡೆದರೆ ಸವೆಯುವವರು ಎನ್ನುವಂತೆ ಅವರನ್ನು ತಾನು ನೋಡಿಕೊಳ್ಳುತ್ತಿರುವಾಗ ಸರಸಿ ಹೊಡೆಯಬಹುದೆ?

ಪರಿಣಾಮ—ಆ ರಾತ್ರಿ ಸರಸಿಗೆ ಎರಡು ಏಟುಗಳು ಬಿದ್ದವು.

ಮನೆಯಲ್ಲಿ ಹೊಗೆ ದಿನದಿನಕ್ಕೂ ಹೆಚ್ಚುತ್ತಿತ್ತು. ಉಸಿರು ಕಟ್ಟಿಸುವ ವಾತಾವರಣದಲ್ಲಿ ಸಿಕ್ಕಿಬಿದ್ದು ಮೀರ ಚಡಪಡಿಸಿದಳು.

ಮತ್ತೊಮ್ಮೆ ಮೀರ ಕಾಮಾಕ್ಷಿಗೆ ಪೆಪ್ಪರಮೆಂಟೊಂದನ್ನು ಕೊಟ್ಟಾಗ ಸರಸಿ ಮುಂದೆ ನುಗ್ಗಿಬಂದು ಮಗುವಿನ ಬಾಯಿಂದ ಪೆಪ್ಪರ್‌ಮೆಂಟನ್ನು ತೆಗೆದು

"ವಿಷ ಕೊಡೋಕೂ ಹೇಸೋಳಲ್ಲ" ಎಂದು ಗೊಣಗಿ ಮಗುವಿನ ಬಾಯನ್ನು ಒದ್ದೆ ಬಟ್ಟೆಯಿಂದ ಶುದ್ಧಿ ಮಾಡಿದಳು.

ಅವಳ ಮಾತು ಗುಂಡಿನಂತೆ ಮೀರಳ ಎದೆಗೆ ತಗುಲಿತು. ಮೀರ ರೂಮಿಗೆ ಹೋಗಿ ಮುಸುಕು ಹಾಕಿಕೊಂಡು ಮಲಗಿದಳು.

ಶಾಮು—ಅವರಿಬ್ಬರ ನಡುವೆ ಸಿಕ್ಕಿ ನುಗ್ಗಾಗಿ ಹೋಗಿದ್ದ. ಅವನಿಗೆ ಮೀರಳನ್ನು ಬಿಟ್ಟುಕೊಡುವುದು ಸಾಧ್ಯವಿರಲಿಲ್ಲ. ಮಕ್ಕಳಿಗಾಗಿ ಅವನು ಸರಸಿಯನ್ನು ಸಹಿಸಿಕೊಳ್ಳುತ್ತಿದ್ದ. ಆದರೆ ದಿನದಿನಕ್ಕೆ ಶಾಂತಿಯ ವಾತಾವರಣ ಮಾಯವಾಗಿ ಮುನಿಸು, ಜಗಳ ತಲೆದೋರುತ್ತಿದ್ದವು. ಶಾಮು ಏನೂ ಮಾಡಲಾರದೆ ಎಷ್ಟೋ ಬಾರಿ ಹಣೆಯನ್ನು ಚಚ್ಚಿಕೊಂಡಿದ್ದ. ಅವನ ನಿಸ್ಸಹಾಯಕ ಸ್ಥಿತಿ ಕಂಡು ಮೀರಳಿಗೆ ದುಃಖವಾಗುತ್ತಿತ್ತು.

ಸುಬ್ರಮಣ್ಯ—ದೊಡ್ಡಮ್ಮನನ್ನು ತಾಯಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ. ಆದರೆ ಮೀರಳಿಂದಾಗಿ ಆ ಹಸುಳೆ ತಾಯಿ ಶಿಕ್ಷೆಯನ್ನು ಅನುಭವಿಸಬೇಕಾಗುತ್ತಿತ್ತು.

ಕಾಮಾಕ್ಷಿ—ಅಳಿದ ಮುದ್ದಿನ ಮಗಳು ವೀಣಾಳನ್ನೇ ನೆನಪಿಗೆ ತರುತ್ತಿದ್ದ ಕಾಮಾಕ್ಷಿ ಮೀರಳಿಗೆ ಜೀವದ ಜೀವವಾಗಿದ್ದಳು. ಎಷ್ಟೋ ಬಾರಿ ಕಾಮಾಕ್ಷಿಯನ್ನು ತನ್ನ ಹೃದಯಕ್ಕೆ ಒತ್ತಿಕೊಂಡು ಮೀರಾ ಅವಳನ್ನು 'ವೀಣಾ' ಎಂದು ಕರೆದು ಮುದ್ದಿಸಿದಳು. ವೀಣಳೇ ಕಾಮಾಕ್ಷಿಯಾಗಿ

ಬಂದಿರುವಳೆಂದು ಶಾಮು, ಮೀರಾ ನಂಬಿದ್ದರು. ಸರಸಿ ಅದಕ್ಕೂ ಮೀರ ಳೆದುರಿಗೆ ನಂಜಿನ ಮಾತನ್ನಾಡಿದ್ದಳು

"ಅಲ್ಪಾಯುಸ್ಸಿನ ಮಗಳು ಅಂತ ಹರಸಬೇಡಿ."

ಮೀರ ತನ್ನಲ್ಲಿದ್ದ ಚೈತನ್ಯವನ್ನೆಲ್ಲಾ ಒಟ್ಟುಗೂಡಿಸಿ ಸರಸಿಯ ಮಾತನ್ನು ಜೀರ್ಣಿಸಿಕೊಂಡಿದ್ದಳು.

ಆದರೆ ಸರಸಿ ತನ್ನ ಮೇಲೆ ಆರೋಪಿಸಿದ ಕೊನೆಯ ಅಪರಾಧ—"ವಿಷ ಕೊಡೋಕೂ ಹೇಸೋಳಲ್ಲ."

ಕುಳಿತರೆ, ನಿಂತರೆ ಸರಸಿಯ ಮಾತುಗಳು ಮೀರಳನ್ನು ಚುಚ್ಚು ತ್ತಿದ್ದವು.

"ವಿಷ ಕೊಡೋಕೂ ಹೇಸೋಳಲ್ಲ."

ಬೀಸಿ ಬಂದ ಗಾಳಿ ಪಿಸುಗುಟ್ಟುತ್ತಿತ್ತು—"ವಿಷ ಕೊಡೋಕೂ ಹೇಸುವವಳಲ್ಲ."

ಮಧುರವಾಗಿ ಉಲಿದ ಕೋಗಿಲೆಯ ಹಾಡಿನಲ್ಲಿ ಅವಳಿಗೆ ಕೇಳಿ ಬರು ತ್ತಿದ್ದ ಮಾತುಗಳು—'ವಿಷ ಕೊಡೋಕೂ ಹೇಸುವವಳಲ್ಲ."

ಎಲೆಗಳ ಮರ್ಮರದ ಸದ್ದಿನಲ್ಲಿ, ಎತ್ತಿನ ಕೊರಳಿನ ಗಂಟೆಯಲ್ಲಿ, ಬೀಸು ಕಲ್ಲಿನ ಸದ್ದಿನಲ್ಲಿ, ಕರುವಿನ 'ಅಂಬಾ' ಎಂಬ ಕೂಗಿನಲ್ಲಿ, ರೈತ ಹೆಂಗಸರ ಕಡಗದ ದನಿಯಲ್ಲಿ, ಗಾಡಿಯ ಚಕ್ರದ ಸದ್ದಿನಲ್ಲಿ, ಎಳೆ ಮಕ್ಕಳ ರೋದನ ದಲ್ಲಿ, ಅವಳಿಗೆ ಕೇಳಿಬರುತ್ತಿದ್ದ ಮಾತು—'ವಿಷ ಕೊಡೋಕೂ ಹಿಂತೆಗೆ ಯುವವಳಲ್ಲ.'

ಕನಸಿನಲ್ಲಿಯೂ ಸರಸಿಯ ಮಾತುಗಳು ಅವಳನ್ನು ಕಾಡುತ್ತಿದ್ದವು.

—ಕಾಮಾಕ್ಷಿ ಔಷಧಿಗಳಿರಿಸಿದ್ದ ಬೀರುವಿನ ಬಾಗಿಲು ತೆಗೆದು ಆಟ ವಾಡುತ್ತಿದ್ದಾಳೆ. ಆಟವಾಡುತ್ತಾ 'ವಿಷ' ಎಂದು ಬರೆದಿದ್ದ ಸೀಸೆಯೊಂದನ್ನು ತೆಗೆದುಕೊಂಡು ಬಾಯಿಗೆ ಹಾಕಿಕೊಳ್ಳಲು ಪ್ರಯತ್ನಿಸುತ್ತಾಳೆ. ಅದನ್ನು ನೋಡಿದ ಮೀರಾ 'ವಿಷ, ಕುಡಿಯಬೇಡ' ಎಂದು ಚೀರಿದಳು.

"ಎಚ್ಚರ ಮಾಡಿಕೋ ಮೀರಾ" ಎಂದು ಶಾಮು ಅವಳನ್ನು ಅಲುಗಿ ಸಿದ.

"ಕಾಮಾಕ್ಷಿ ವಿಷ ಕುಡಿದುಬಿಟ್ಟಳು" ಎಂದು ನಿದ್ದೆಗಣ್ಣಿನಲ್ಲಿದ್ದ ಮೀರ ಬಿಕ್ಕಿ ಬಿಕ್ಕಿ ಅತ್ತಳು.

"ಕಾಮಾಕ್ಷಿ ನಿದ್ದೆ ಮಾಡ್ತಿದಾಳೆ."

"ಇಲ್ಲ, ಇಲ್ಲ. ವಿಷ ಕುಡಿದಿದಾಳೆ."

"ಹುಚ್ಚಿ" ಎಂದು ನಗುತ್ತಾ ಶಾಮು ಎದ್ದು ಹೋಗಿ, ನಿದ್ದೆ ಮಾಡುತ್ತಿದ್ದ ಕಾಮಾಕ್ಷಿಯನ್ನೆತ್ತಿಕೊಂಡು ಬಂದು ಮೀರಳ ಪಕ್ಕದಲ್ಲಿ ಮಲಗಿಸಿದ. ಮೀರ ಕಣ್ಣು ಬಿಟ್ಟು ಬಿರಬಿರನೆ ಕಾಮಾಕ್ಷಿಯನ್ನು ನೋಡಿ ಅವಳನ್ನು ತಬ್ಬಿಕೊಂಡು ಮತ್ತೆ ಮಲಗಿದಳು.

ಆದರೆ ನಿದ್ದೆ ಅವಳಿಂದ ಬಹು ದೂರವಾಗಿತ್ತು.

ಸರಸಿಯ ಚುಚ್ಚು ಮಾತುಗಳನ್ನು ಅರಗಿಸಿಕೊಳ್ಳುವುದು ಇನ್ನು ಅವಳಿಗೆ ಸಾಧ್ಯವಿರಲಿಲ್ಲ. ಸರಸಿಯನ್ನು ಶಾಮುವಿಗೆ ಮದುವೆ ಮಾಡಿಸಿದ ತರುಣದಲ್ಲಿ ಅವನ ಎರಡನೆಯ ವಿವಾಹ ತನ್ನ ಜೀವನದ ಆದರ್ಶವನ್ನು ಈ ರೀತಿ ಮುಂದುವರಿಯಬಹುದು ಎಂದು ಅವಳು ನೆನೆಸಿರಲಿಲ್ಲ. ವರ್ಷದ ಬಹುಭಾಗವನ್ನು ಮೈಸೂರಿನಲ್ಲಿಯೇ ಕಳೆಯುತ್ತಿದ್ದವಳಾದುದರಿಂದ ಅವಳಿಗೆ ಸರಸಿಯ ಗುಣಗಳ ಪರಿಚಯವೂ ಆಗಿರಲಿಲ್ಲ.

ಆದರೆ ವಿದ್ಯಾಭ್ಯಾಸ ಮುಗಿಸಿ ತಾನು ವೈದ್ಯಳಾಗಿ ಹಳ್ಳಿಯಲ್ಲಿಯೇ ನೆಲೆಸಿದಾಗ ಸರಸಿಯಲ್ಲಿ ಎಂತಹ ಮಾರ್ಪಾಡಾಗಿತ್ತು! ಮಾತು ಮಾತಿನಲ್ಲಿಯೂ, ಹೆಜ್ಜೆ ಹೆಜ್ಜೆಗೂ ಸರಸಿ ತನ್ನನ್ನು ವ್ಯಂಗ್ಯವಾಗಿ ನೋಡುತ್ತಿದ್ದಳು. ಮೊನಚಾದ ಮಾತಿನ ಬಾಣಗಳು ಸರಸಿಯ ಬಾಯಿಂದ ಹಾರಿಬಂದು ಮೀರಳ ಎದೆಯಲ್ಲಿ ನಾಟುತ್ತಿದ್ದವು. ಅವಳ ಮಾತಿನ ಬಾಣದ ಆವೇಗಕ್ಕೆ ಸಿಕ್ಕಿ ಮೀರ ತತ್ತರಿಸುತ್ತಿದ್ದಳು.

ಶಾಮುವಿಗಾಗಿ, ಹಳ್ಳಿಯ ಜನರಿಗಾಗಿ, ತನಗಾಗಿ ಮೀರ ನಗುಮುಖದಿಂದ ಸರಸಿಯ ವಾಗ್ಬಾಣಗಳನ್ನು ಸ್ವೀಕರಿಸಿದ್ದಳು.

ಮದುವೆಯಾದ ಹೊಸದರಲ್ಲಿ ಮೀರಳಿಗೆ ಶಾಮುವಿನಲ್ಲಿ ಸ್ವಲ್ಪವೂ ಪ್ರೀತಿಯಿರಲಿಲ್ಲ. ತಾನು ವೈದ್ಯಳಾಗಬೇಕೆಂಬ ಹಂಬಲದ ಬಳ್ಳಿಯನ್ನು ಕಡಿದ ಖಳ ಶಾಮು ಎಂದೇ ಅವಳ ಭಾವನೆಯಾಗಿತ್ತು. ತನ್ನ ಆದರ್ಶವನ್ನು ಮಣ್ಣುಗೂಡಿಸಿದ ಶಾಮುವನ್ನು ಪ್ರೀತಿಸುವುದು ಸಾಧ್ಯವಿಲ್ಲವೆಂದು ನಿಶ್ಚಯಿಸಿಯೇ ಮೀರ ಶಾಮುವಿನ ಗೃಹದೇವತೆಯಾಗಿ ಬಂದಿದ್ದಳು.

ವೀಣಳ ಆಗಮನ ಮೀರಳ ಮನೋಮಂದಿರಲ್ಲಿ ಹೊಸದೊಂದು ಪ್ರಪಂಚವನ್ನೇ ಸೃಷ್ಟಿಸಿತ್ತು. ಗಂಡ, ಹೆಂಡತಿಯರಿಗೆ ವೀಣಳ ಮೇಲಿದ್ದ ಪ್ರೀತಿ ಅವರಿಬ್ಬರನ್ನೂ ಬಹಳ ಹತ್ತಿರ ತಂದಿತ್ತು. ಐದು ವರ್ಷ ಅವರ ಬದುಕಿನ ಬೆಳ್ಳಿಯಾಗಿ ಬೆಳಗಿದ ವೀಣಾ ಕರ್ಪೂರದಂತೆ ಮಾಯವಾದ ನಂತರ ಮೀರ, ಶಾಮು ಮತ್ತೆ ದೂರವಾಗಿದ್ದರು.

ಮೀರಳ ತೊಳಲಾಟ, ತಳಮಳ ಶಾಮುವಿಗೂ ಅರ್ಥವಾಗಿತ್ತು. ಆದ

ದರಿಂದಲೇ ಅವನು ದೊಡ್ಡ ಮನಸ್ಸು ಮಾಡಿ ಮೀರಳನ್ನು ಓದಿಸಲು ನಿರ್ಧ ರಿಸಿದ್ದ.

ಅವನ ನಿರ್ಧಾರ ಮೀರಳ ಹೃದಯದಲ್ಲಿ ಮಲಗಿ ನಿದ್ರಿಸುತ್ತಿದ್ದ ಕೋಮಲ ಭಾವನೆಗಳನ್ನು ತಟ್ಟಿ ಎಬ್ಬಿಸಿತ್ತು.

ಮೀರಳ ಮನಸ್ಸು ಶಾಮುವಿನ ಕಡೆಗೆ ಬಾಗತೊಡಗಿತ್ತು. ಪ್ರೀತಿಯ ಕಾವಿನಲ್ಲಿ ಮೆದುವಾಗಿದ್ದ ಅವಳ ಮನಸ್ಸು, ತನ್ನವನ ವಂಶಾಭಿವೃದ್ಧಿಗಾಗಿ ಸ್ವಾರ್ಥವನ್ನು ಮರೆತೂ ಅವನಿಗೆ ಮರು ಮದುವೆಯನ್ನು ಮಾಡಿಸಿತ್ತು.

ಎಂತಹ ಸಂದರ್ಭ ಬಂದರೂ ತಾನು ಅದಕ್ಕೆ ಹೊಂದಿಕೊಂಡು ಹೋಗುವ ಭರವಸೆಯನ್ನು ಮೀರ ಶಾಮುವಿಗೆ ನೀಡಿದ್ದಳು. ಅವಳ ಭರವಸೆ ಯನ್ನು ನೆಚ್ಚಿ ಶಾಮು ಸರಸಿಯ ಕೈ ಹಿಡಿದಿದ್ದ.

ಆದರೆ ಆದುದ್ದಾದರೂ ಏನು ?

ಸರಸಿ ಮೀರಳಿಂದ ದೂರ ಸಿಡಿದಿದ್ದಳು. ಮೀರಳಲ್ಲಿಯೇ ಹೆಚ್ಚು ವಾತ್ಸಲ್ಯ, ಪ್ರೀತಿಯನ್ನು ಶಾಮು ವ್ಯಕ್ತಪಡಿಸುತ್ತಿದ್ದುದು ಅವಳಿಗೆ ಕಣ್ಣುರಿ ಯಾಗಿತ್ತು.

ನ್ಯಾಯವಾಗಿ ತನ್ನ ಮಕ್ಕಳಿಗೆ ಸಲ್ಲಬೇಕಾಗಿದ್ದ ಆಸ್ತಿಯನ್ನು ಮೀರ ದುರುಪಯೋಗಪಡಿಸುವುದು ಸರಸಿಗೆ ಹಿಡಿಸಿರಲಿಲ್ಲ.

ಆದರಲ್ಲಿ ನನ್ನ ತಪ್ಪಾದರೂ ಏನು ?

ಹಳ್ಳಿಯಲ್ಲಿದ್ದ ಮುಕ್ಕಾಲುಪಾಲು ರೈತರು ಶಾಮುವಿನ ಒಕ್ಕಲು ಮಕ್ಕಳಾಗಿದ್ದರು. ಅವರು ಹೊಲ ಗದ್ದೆಗಳಲ್ಲಿ ಸುರಿಸಿದ ಬೆವರು ರಕ್ತ ಶಾಮುವಿನ ಬಂಗಾರವಾಗಿತ್ತು. ಅವರ ದುಡಿಮೆಯಿಂದ ಶಾಮು ಶ್ರೀಮಂತ ನಾಗಿದ್ದ.

ಮಣ್ಣನ್ನು ಹೊನ್ನು ಮಾಡುತ್ತಿದ್ದ ರೈತರ ಆರೋಗ್ಯಕ್ಕಾಗಿಯೇ ಮೀರ ಪ್ರಯತ್ನಿಸುತ್ತಿದ್ದಳು. ಅವಳ ಪ್ರಯತ್ನ ಶಾಮುವಿನ ಪ್ರೋತ್ಸಾಹದಿಂದಾಗಿ ಕೈ ಪಡೆದಿತ್ತು.

ತನ್ನನ್ನು ನಂಬಿದ್ದ ರೈತರನ್ನು ಒಂದೇ ಸಲಕ್ಕೆ ಬಿಟ್ಟು ಹೊರಟು ಹೋಗುವುದು ಮೀರಳಿಗೆ ಹಿಡಿಸಲಿಲ್ಲ.

ಆದರೆ ಬೇರೆ ದಾರಿ ಯಾವುದಿದೆ ?

ಹಳ್ಳಿಯಲ್ಲೇ ಉಳಿದು ಜನಸೇವೆ ಮಾಡಬೇಕೆಂಬ ಆಸೆ ಅವಳಲ್ಲಿ ಉತ್ಕಟವಾಗಿತ್ತು. ಆದರೆ ಹಳ್ಳಿಯಲ್ಲಿ ತನ್ನ ಇರುವಿಕೆಯಿಂದಾಗಿ ಸರಸಿ, ಶಾಮುವಿನ ಮನಸ್ಸಿಗೆ ಸ್ವಲ್ಪವಾದರೂ ಶಾಂತಿ, ತೃಪ್ತಿ ಸಿಕ್ಕುವಂತೆ ತೋರ ಲಿಲ್ಲ.

ಮೀರಳಿಂದಾಗಿ ಶಾಮು, ಸರಸಿ ದೂರವಾಗಿದ್ದರು. ಇಬ್ಬರು ಹೆಂಡಿರ ಮನಸ್ತಾಪದಲ್ಲಿ ಶಾಮು ಬೆಂಡಾಗಿದ್ದ.

ಈಗ ಅವನ ಬಳಲಿದ ಮನಸ್ಸನ್ನು ಸಂತಯಿಸುವುದು ತನ್ನ ಕರ್ತವ್ಯ ವಲ್ಲವೇ ?

ಸಬಲನಾದ ಶಾಮುವಿಗೆ ಮೀರ ಸೋತಿರಲಿಲ್ಲ. ಅವನನ್ನು ಒಪ್ಪಿಸಿ ಅವಳು ವೈದ್ಯಳಾಗಿದ್ದಳು. ಆದರೆ ಹೆಣ್ಣಿನಿಂದಲೇ ತಾನು ಸೋಲಬೇಕಾಗು ವುದೆಂದು ಮೀರ ಎಂದೂ ಎಣಿಸಿರಲಿಲ್ಲ.

ಹಳ್ಳಿಯಲ್ಲಿಯೇ ಉಳಿದು ಎಲ್ಲರ ಮನಸ್ಸನ್ನೂ ಕದಡಿದ ಅಸಮಾಧಾನ, ಕಾರ್ಮೋಡ ಹಬ್ಬುವಂತೆ ಮಾಡುವುದರಲ್ಲಿ ಯಾವ ಅರ್ಥವೂ ಇಲ್ಲವೆಂಬುದು ಮೀರಳಿಗೆ ತಿಳಿದಿತ್ತು.

ಉಳಿದಿದ್ದು ಒಂದೇ ಮಾರ್ಗ.

ಶಾಮುವನ್ನು ಸರಸಿಗೆ, ಮಕ್ಕಳಿಗೆ ಒಪ್ಪಿಸಿ ಕಣ್ಮರೆಯಾಗುವುದೊಂದೇ ತನಗೆ ಉಳಿದಿದ್ದ ಮಾರ್ಗ.

ವೀಣ ತನ್ನಿಂದ ದೂರವಾಗಿದ್ದಳು; ಈಗ ತಾನು ಶಾಮುವಿನಿಂದ ದೂರವಾಗಬೇಕು. ಮೀರಳ ಹೃದಯ ನೋವಿನಿಂದ ಬಿರಿಯಿತು.

ಅಪಸ್ವರದೊಂದಿಗೆ ಪ್ರಾರಂಭವಾದ ತನ್ನ ಬಾಳು ಅಪಜಯದಲ್ಲಿ ಮುಕ್ತಾಯವಾಗಲೇಬೇಕಿತ್ತು.

ಮುದ್ದಿನ ಕಂದನನ್ನು ಕಳೆದುಕೊಂಡ ಮೀರ ಮೆಚ್ಚಿನ ಪತಿಯನು ತೊರೆಯಲೇಬೇಕಿತ್ತು.

ಮೀರ ನರಳುತ್ತಾ ಹಾಸಿಗೆಯ ಮೇಲೆ ಹೊರಳಾಡಿದಳು.

ಮಾರನೆಯ ದಿನ ಮೀರ ಮೈಸೂರಿಗೆ ಹೊರಟಳು. ಯಾವ ಸಮಾ ಚಾರವೂ ಇಲ್ಲದೆ ಅವಳು ಏಕಾಏಕಿ ಹೊರಟಿರುವುದನ್ನು ಕಂಡು ಶಾಮುಗೆ ಆಶ್ಚರ್ಯವಾಯಿತು.

"ಔಷಧಿ ತರೋಕೆ ಹೋಗ್ತೀಯೆನು ?"

"ಇಲ್ಲ. ವಿಜಯಾ ತಾಯಿಯಾಗಲಿದ್ದಾಳೆ. ನರ್ಸಿಂಗ್ ಹೋಂ ಕೆಲಸ ನೋಡಿಕೊಳ್ಳುವವರು ಯಾರೂ ಇಲ್ಲ. ನೀನು ಬಂದು ನನ್ನ ಕೆಲಸ ವನ್ನು ಹಗುರ ಮಾಡು" ಎಂದು ಗೋಪಿ ಕಾಗದ ಬರೆದಿದ್ದಾನೆ. ಆದುದ ರಿಂದ ಅಲ್ಲಿಗೆ ಹೋಗುತ್ತಿದ್ದೇನೆ."

"ಬರೋದು ಎಷ್ಟು ದಿನವಾಗಬಹುದು ?"

"ಬಹುಶಃ ನಾನಿನ್ನು ಬರಲಾರೆ ಎಂದು ತೋರುತ್ತದೆ." ಮೀರ ಶಾಂತಳಾಗಿಯೇ ಹೇಳಿದಳು.

"ಮೀರಾ ?"

"ನನ್ನ ತಡೆಯಬೇಡಿ. ನಾನಿನ್ನು ಇಲ್ಲಿ ಒಂದು ಗಳಿಗೆಯೂ ಇರಲಾರೆ."

"ನಿನ್ನನ್ನೇ ನಂಬಿಕೊಂಡಿರುವ ಈ ಜನರ ಗತಿಯೇನು ?"

"ಕಾಪಾಡುವ ದೇವರು ಹೇಗೋ ಕಾಪಾಡುತ್ತಾನೆ. ಹಿಂದೆ ನಾನು ಇರಲಿಲ್ಲ. ಆಗ ಅವರು ಬದುಕಿರಲಿಲ್ಲವೇ ?"

"ಹೀಗೆ ಹೊರಡೋಕೆ ಕಾರಣವಾದರೂ ಏನು ಮೀರಾ ?"

"ಕಾರಣ ನಾನು ಹೇಳಲಾರೆ. ನಾನು ಹೋದ ಮೇಲೆ...."

"ಸರಸಿ ಏನಾದರೂ...."

"ಸರಸಿಯನ್ನು ಮಾತ್ರ ನನ್ನ ವಿಷಯಕ್ಕೆ ದಂಡಿಸಬೇಡಿ. ಹಾಗೆಂದು ಭಾಷೆ ಕೊಡಿ."

"ಅವಳನ್ನೇ ಕರೆದು ಕೇಳುತ್ತೇನೆ...."

"ನನ್ನಾಣೆಯಿದೆ. ಅವಳು ಕಾಮಾಕ್ಷಿ, ಸುಬ್ರಮಣ್ಯನ ತಾಯಿ. ಅಲ್ಲವೇ ?"

ಅವಳ ಮಾತು ಕೇಳಿ ಶಾಮು ಮೆತ್ತಗಾದ.

"ನೀನು ಹೋದ ಮೇಲೆ ನಾನು ಹೇಗಿರಲಿ ಮೀರಾ ?"

"ಕಾಮಾಕ್ಷಿ, ಸುಬ್ರಮಣ್ಯ ಇದಾರೆ."

"ನೀನು ಯಾಕೆ ಹೋಗ್ತೀಯ ಹೇಳಬಾರದೆ"

ಮೀರಾ ನಿಧಾನವಾಗಿ ತಲೆ ಅಲುಗಿಸಿ ನುಡಿದಳು.

"ಊಹುಂ, ಅದೊಂದು ಮಾತು ಮಾತ್ರ ನಾನು ಹೇಳಲಾರೆ. ಮೊದಲ ಬಾರಿ ನನಗಾಗಿಯೇ ನಾನು ಹಳ್ಳಿ ಬಿಟ್ಟು ವಿದ್ಯೆ ಕಲಿಯಲು ಹೋದೆ. ಈ ಬಾರಿ ನಿಮಗಾಗಿ ಹೋಗುತ್ತಿದ್ದೇನೆ."

"ಆಗಾಗ್ಗೆ ಹಳ್ಳಿಗೆ ಬರುತ್ತೀಯಾ ?"

"ಇಲ್ಲ ನನ್ನ ನೋಡಬೇಕೆನಿಸಿದರೆ ನೀವೇ ಅಲ್ಲಿಗೆ ಬನ್ನಿ. ಬರುವಾಗ ಕಾಮಾಕ್ಷಿ, ಸುಬ್ರಹ್ಮಣ್ಯನ್ನ ಕರೆದುಕೊಂಡು ಬನ್ನಿ."

ಶಾಮುವಿಗೆ ಅವಳ ನಿರ್ಧಾರವನ್ನು ಕದಲಿಸಲಾಗಲಿಲ್ಲ. ಮೀರ ಹೊರಟುಹೋಗುವುದು ಅವನಿಗೆ ಅತ್ಯಂತ ವ್ಯಥೆಯ ವಿಷಯವಾಗಿದ್ದರೂ ಅವನ ಅಂತರಂಗ ನುಡಿಯುತ್ತಿತ್ತು "ಒಳ್ಳೆಯದೇ ಆಯಿತು. ಬೆಂಕಿಗೆ ಕೈ ಚಾಚಿ ಸುಡಿಸಿಕೊಳ್ಳುವುದಕ್ಕಿಂತಲೂ, ಜ್ವಾಲಾಮುಖಿಯನ್ನೇರಿ ಅದರ ಕಾವಿಗೆ ಆಹುತಿಯಾಗುವುದಕ್ಕಿಂತಲೂ ದೂರ ಇರುವುದೇ ಮೇಲು. ಇದರಿಂದ ಅವಳೂ ಸುಖವಾಗಿರುತ್ತಾಳೆ."

ಆದುದರಿಂದಲೇ ಶಾಮು ಮೀರಳನ್ನು ಹಳ್ಳಿಯಲ್ಲಿಯೇ ಇರುವಂತೆ ಹೆಚ್ಚು ನಿರ್ಬಂಧಿಸಲಿಲ್ಲ.

"ಗೋಪಿಗೆ ಕಾಗದ ಬರೆದು ನಾಳೆ ಹೋಗಬಹುದು."

"ಪರವಾಗಿಲ್ಲ. ಅವನು ನನ್ನನ್ನು ಎಂದೂ ಹೊರಗಿನವಳಂತೆ ಕಂಡಿಲ್ಲ. ತಂಗಿಯ ಮನೆಗೆ ಕಾಗದ ಬರೆದು ಹೋಗಬೇಕೆ?"

ಅವಳ ಪ್ರಶ್ನೆಗೆ ಶಾಮು ಉತ್ತರ ಕೊಡಲಿಲ್ಲ.

"ಪೆಟ್ಟಿನ ಮೇಲೆ ಪೆಟ್ಟು ತಿಂದರೂ ನಾನು ಸೋಲುವುದಿಲ್ಲ ಎಂದು ಭಾವಿಸಿದ್ದೆ. ನಿಮ್ಮನ್ನು ಗೆಲ್ಲುವಷ್ಟೇ ಸುಲಭವಾಗಿ ಸರಸಿಯನ್ನೂ ಗೆಲ್ಲುವೆನೆಂದು ತಿಳಿದಿದ್ದೆ. ಆದರೆ ಈ ಬಾರಿ ಮಾತ್ರ ಸೋಲು ನನ್ನದಾಯಿತು" ಎಂದಳು ಮೀರ ನಗುತ್ತಾ.

"ನೀನು ನಗಬೇಡ. ಅಳುವ ಹಾಗಿದ್ದರೆ ಅತ್ತುಬಿಡು" ಎಂದ ಶಾಮು.

ಅವಳ ಕಲ್ಪನೆಯಲ್ಲಿದ್ದುದು—ಸುಂದರವಾದ ಸಂಸಾರ, ತಾನು, ಸರಸಿ ಅಕ್ಕ ತಂಗಿಯರಂತೆ, ಗೆಳತಿಯರಂತೆ ಹೊಂದಿಕೊಂಡಿರುವ ತೃಪ್ತಿಯ ಸಂಸಾರ. ಎಂತಹ ಸಂದರ್ಭ ಬಂದರೂ ತಾನು ಹೊಂದಿಸಿಕೊಂಡು ಹೋಗುವೆನೆಂಬ ಆತ್ಮಭರವಸೆ ಅವಳಿಗಿತ್ತು.

ಆದರೆ ಅವಳ ನಂಬಿಕೆ ಸುಳ್ಳಾಗಿತ್ತು. ಮುಳ್ಳಿನ ಚಾವಟಿಯಿಂದ ಹೊಡೆಸಿಕೊಳ್ಳುವುದು ಅವಳಿಗೆ ಇನ್ನು ಸಾಧ್ಯವಿರಲಿಲ್ಲ.

ಹತ್ತಿರ ಓಡಿ ಬಂದು ಸೀರೆಯ ನಿರಿ ಹಿಡಿದು ತೊದಲಿದ ಕಾಮಾಕ್ಷಿಯನ್ನೆತ್ತಿಕೊಂಡು ಮುತ್ತಿಟ್ಟಳು ಮೀರಾ.

"ನನಗೇನು ಸಮಾಧಾನ ಹೇಳ್ತೀಯಾ ಮೀರಾ?" ಎಂದು ಶಾಮು ನಡುಗುವ ದನಿಯಲ್ಲಿ ಕೇಳಿದ.

ಅವನ ಪ್ರಶ್ನೆಗೆ ಉತ್ತರವಾಗಿ ಮೀರಾ ಕಾಮಾಕ್ಷಿಯನ್ನು ಶಾಮುವಿನ ಕೈಗೆ ಕೊಟ್ಟಳು.

---

